ಪ್ರತಿಭಾವಂತ ಸಂಸದೀಯ ಪಟುಗಳು ಬದುಕು ಬರಹ ಮಾಲಿಕೆ

**ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿ**

Eminent Parlimentarian Series

**Dr. SHAYAM PRASAD MUKHERJEE**



ಬೆಲೆ: ರೂ. 15/-

ಮೊದಲ ಮುದ್ರಣ : ಡಿಸೆಂಬರ್, 1999 - 1000 ಪ್ರತಿಗಳು
ಎರಡನೇ ಮುದ್ರಣ : ಅಕ್ಟೋಬರ್, 2001 - 2000 ಪ್ರತಿಗಳು

ಮುಖಪುಟ ವಿನ್ಯಾಸ :
ಸರ್ಕಾರಿ ಮುದ್ರಣಾಲಯ
ಬೆಂಗಳೂರು.

ಪ್ರಕಟಣೆ :
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು - 560 001.

# ಮುನ್ನುಡಿ

ನಮ್ಮ ದೇಶದ ಪ್ರತಿಭಾವಂತ ಸಂಸದೀಯ ಪಟುಗಳಿಗೆ ನಮ್ಮ ಗೌರವವನ್ನು ಸಲ್ಲಿಸುವ ದೃಷ್ಟಿಯಿಂದ ಮತ್ತು ನಮ್ಮ ರಾಷ್ಟ್ರೀಯ ಹಾಗೂ ಸಂಸದೀಯ ಕ್ಷೇತ್ರಕ್ಕೆ ಅವರುಗಳು ಸಲ್ಲಿಸಿದ ಸೇವೆಗಳನ್ನು ನೆನಪಿಸುವ ದೃಷ್ಟಿಯಿಂದ ಭಾರತೀಯ ಸಂಸದೀಯ ತಂಡವು ಅವರುಗಳ ಶತಮಾನೋತ್ಸವ ಸಂದರ್ಭದ ಸವಿನೆನಪಿಗಾಗಿ ಪ್ರತಿಭಾವಂತ ಸಂಸದೀಯ ಪಟುಗಳು - ಬದುಕು - ಬರಹ ಮಾಲಿಕೆ ಎಂಬ ಹೊಸ ಮಾಲಿಕೆಗಳನ್ನು ಮಾರ್ಚ್, 1990 ರಿಂದ ಪ್ರಕಟಿಸಲು ಪ್ರಾರಂಭಿಸಿದೆ. ಡಾ।। ರಾಮ ಮನೋಹರ ಲೋಹಿಯಾ ರವರದು ಮೊದಲ ಮಾಲಿಕೆ. ಇದು, ಮೂರನೆಯ ಮಾಲಿಕೆ - ಡಾ।। ಶ್ಯಾಮ್ ಪ್ರಸಾದ್ ಮುಖರ್ಜಿಯವರದು. ಅವರು ದೇಶಕ್ಕೆ ಹಾಗೂ ಸಂಸತ್ ಸದಸ್ಯರಾಗಿ ಸಲ್ಲಿಸಿದ ಮಹತ್ವದ ಸೇವೆಯನ್ನು ಈ ಮಾಲಿಕೆಯಲ್ಲಿ ನಿರೂಪಿಸಲಾಗಿದೆ.

ಡಾ।। ಶ್ಯಾಮ್ ಪ್ರಸಾದ್ ಮುಖರ್ಜಿಯವರ ಶತಮಾನೋತ್ಸವವನ್ನು 1990ರ ಜುಲೈ 6 ರಂದು ಆಚರಿಸಲಾಗುವುದು. ಆ ಶತಮಾನೋತ್ಸವದ ಅಂಗವಾಗಿ ಈ ಮಾಲಿಕೆಯನ್ನು (MONOGRAPH) ಹಿಂದಿಯಲ್ಲಿ ಮತ್ತು ಇಂಗ್ಲೀಷ್‌ನಲ್ಲಿ ಸಿದ್ಧಪಡಿಸಿದ್ದು, ಸಮಾರಂಭದ ದಿನದಂದು ಬಿಡುಗಡೆ ಮಾಡಲಾಗುವುದು.

ಈ ಮಾಲಿಕೆಯಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಡಾ।। ಶ್ಯಾಮ್ ಪ್ರಸಾದ್ ಮುಖರ್ಜಿಯವರ ವ್ಯಕ್ತಿ ಚಿತ್ರಣ ಇದೆ. ಇದರಲ್ಲಿ ಅವರ ಜೀವನ ಚರಿತ್ರೆಯ ಕೆಲವು ಹೊಳಹುಗಳನ್ನು ನೀಡಲಾಗಿದೆ. ಎರಡನೆಯ ಭಾಗದಲ್ಲಿ ನಾಲ್ಕು ಲೇಖನಗಳು ಇವೆ. ಮೊದಲನೆಯ ಲೇಖನ, ಬಲರಾಜ್ ಮಧೋಕ್‌ರವರದು. ಅವರು ಸಂಸತ್ ಸದಸ್ಯರಾಗಿದ್ದವರು ಮತ್ತು ಡಾ।। ಮುಖರ್ಜಿಯವರ ನಿಕಟ ಜೊತೆಗಾರರು. ಎರಡನೆಯ ಲೇಖನ, ಪ್ರೊ. ಹಿರೇನ್ ಮುಖರ್ಜಿಯವರದು. ನಮ್ಮ ಮೊದಲ ಸಂಸತ್ತಿನಲ್ಲಿ ಅತ್ಯಂತ ಪ್ರಭಾವ ಶಾಲಿ ವ್ಯಕ್ತಿಯಾಗಿದ್ದ ಅವರು ಡಾ।। ಶ್ಯಾಮ್ ಪ್ರಸಾದ್ ಮುಖರ್ಜಿಯವರ ಸಮಕಾಲೀನರು. ತಮ್ಮ ತಮ್ಮ ಮೂಲಭೂತ ವಿಚಾರ ಧಾರೆ ಭಿನ್ನವಾಗಿದ್ದರೂ, ಈ ಉಜ್ವಲ ಸಾರ್ವಜನಿಕ ಧೀಮಂತ ವ್ಯಕ್ತಿಗೆ ಹಾಗೂ ಸಂಸದೀಯ ಪಟುವಿಗೆ 'ನಮನ' ಸಲ್ಲಿಸಿದ್ದಾರೆ. ಮೂರನೆಯ ಲೇಖನ ಚಿ. ರಣಬೀರ್ ಸಿಂಗ್ ಅವರದು. ಅವರು ರಾಜ್ಯಾಂಗ ರಚನಾ ಸಭೆಯ ಸದಸ್ಯರಾಗಿದ್ದರು ಮತ್ತು ಲೋಕ ಸಭಾ ಸದಸ್ಯರೂ ಆಗಿದ್ದರು. ಡಾ।। ಮುಖರ್ಜಿಯವರ ಸಮಕಾಲೀನರು ಡಾ।। ಮುಖರ್ಜಿಯವರನ್ನು ಹತ್ತಿರದಿಂದ ನೋಡಿದ್ದ ಅದೃಷ್ಟಶಾಲಿ. ನಾಲ್ಕನೆಯ ಲೇಖನ ಕೆ.ಆರ್. ಮಲ್ಕಾನಿ, ಅವರದು. ಅವರು ಖ್ಯಾತ ಪತ್ರಕರ್ತರು, ಪ್ರಸ್ತುತ ದೀನ ದಯಾಳು ಸಂಶೋಧನ ಸಂಸ್ಥೆಯ ಒಡನಾಡಿಯಾಗಿದ್ದಾರೆ. ಈ ಎಲ್ಲರೂ ನೀಡಿದ ಲೇಖನಗಳ ಕಾಣಿಕೆಗಾಗಿ ನಾವು ಅವರುಗಳಿಗೆ ಅತ್ಯಂತ ಕೃತಜ್ಞರು.

ಮೂರನೆಯ ಭಾಗದಲ್ಲಿ, ಡಾ|| ಮುಖರ್ಜಿಯವರು ರಾಜ್ಯಾಂಗ ರಚನಾ ಸಭೆಯಲ್ಲಿ ತತ್ಕಾಲೀನ ಸಂಸತ್ತಿನಲ್ಲಿ ಹಾಗೂ ಮೊದಲ ಲೋಕಸಭೆಯಲ್ಲಿ ಮಾಡಿದ ಆಯ್ದ ಭಾಷಣಗಳು ಇವೆ. ಸ್ವಾತಂತ್ರ್ಯಕ್ಕೆ ಮೊದಲು ಹಾಗೂ ಸ್ವಾತಂತ್ರ್ಯ ನಂತರ ದೇಶ ಎದುರಿಸುತ್ತಿದ್ದ ಹಲವಾರು ಸಮಸ್ಯೆಗಳ ಮೇಲೆ ಅವರ ಚರ್ಚೆಗಳು ಬೆಳಕು ಚೆಲ್ಲುತ್ತವೆ. ಅವರ ಭಾಷಣಗಳನ್ನು ಪ್ರಕಟಣೆಗೆ ಸಿದ್ಧಪಡಿಸುವ ಮುನ್ನ. ಅವರ ವಿಶಿಷ್ಟ ಶೈಲಿ ಹಾಗೂ ಮಾತಿನ ಹರಿತವನ್ನು ಅತ್ಯಂತ ಜಾಗರೂಕತೆಯಿಂದ ಗಮನಿಸಿ ಮೂಲಕ್ಕೆ ಧಕ್ಕೆ ಬರದಂತೆ ನೋಡಿಕೊಳ್ಳಲಾಗಿದೆ.

ಅವರ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರಿಗೆ ನಮ್ಮ ಹೃದಯಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ. ಅವರ ಸವಿನೆನಪಿಗಾಗಿ ತಂದಿರುವ ಈ ಕೃತಿಯನ್ನು ಓದುಗರು ಆಸಕ್ತಿಯಿಂದ ಓದುವರೆಂಬ ಹಾಗೂ ಪ್ರಯೋಜನ ಪಡೆಯುವರೆಂಬ ನಂಬಿಕೆ ನಮಗಿದೆ.

**ಸುಭಾಷ್. ಸಿ. ಕಶ್ಯಪ್,**
ಸೆಕ್ರೆಟರಿ ಜನರಲ್ ಲೋಕಸಭಾ
ಮತ್ತು ಸೆಕ್ರೆಟರಿ ಜನರಲ್,
ಇಂಡಿಯನ್ ಪಾರ್ಲಿಮೆಂಟರಿ ಗ್ರೂಪ್.

ನವದೆಹಲಿ, ಜೂನ್, 1990.

# ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಹೊರ ತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿದಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು - ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರುಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್ ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯ ಕಾರ್ಯ ಪ್ರವೃತ್ತಿವಾಗಿ ಭಾಷಾಂತರ ಕಾರ್ಯವನ್ನು ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದ ಸಹಯೋಗದೊಂದಿಗೆ ಹಾಗೂ ನುರಿತ ಭಾಷಾಂತರಕಾರರುಗಳ ಮೂಲಕ ತಯಾರಿಸಿರುವ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸಭಾ ಸಚಿವಾಲಯದವರು "Eminent Parliamentarians Monograph Series" ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು. ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದವನ್ನು ನಿರ್ವಹಿಸಿಕೊಟ್ಟ ಭಾಷಾಂತರ ಇಲಾಖೆಯ ನಿರ್ದೇಶಕರಿಗೂ ಮತ್ತು ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಯಾಕೂಬ್ ಷರೀಫ್,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ.

ಬೆಂಗಳೂರು.
ಆಗಸ್ಟ್ 1998.

# ಎರಡನೇ ಮುದ್ರಣ

1998 ರಲ್ಲಿ ಡಾ।। ಶ್ಯಾಮ್ ಪ್ರಸಾದ್ ಮುಖರ್ಜಿ ಯವರ ಅನುವಾದಿತ ಪುಸ್ತಕದ 1500 ಪ್ರತಿಗಳನ್ನು ಅಚ್ಚು ಹಾಕಿಸಲಾಯಿತು. ಸದರಿ ಪುಸ್ತಕಕ್ಕೆ ಮಾನ್ಯ ಸದಸ್ಯರು ಮತ್ತು ಸಾರ್ವಜನಿಕರಿಂದ ಬೇಡಿಕೆ ಬಂದಿರುತ್ತದೆ. ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಪುಸ್ತಕಗಳನ್ನು ರಾಜ್ಯದ ಎಲ್ಲಾ ಹಂತದ ಗ್ರಂಥಾಲಯಗಳಿಗೆ ಸರಬರಾಜು ಮಾಡುವ ಬಗ್ಗೆ ಗ್ರಂಥಾಲಯ ಉಪ ಸಮಿತಿಯು ಕೈಗೊಂಡ ನಿರ್ಧಾರದ ಹಿನ್ನೆಲೆಯಲ್ಲಿ ಪುನಃ ಅಕ್ಟೋಬರ್ 2001ನೇ ಸಾಲಿನಲ್ಲಿ ಪುನಃ 2000 ಪ್ರತಿಗಳನ್ನು ಅಚ್ಚು ಹಾಕಿಸಲಾಗಿರುತ್ತದೆ.

ಬೆಂಗಳೂರು
ದಿನಾಂಕ: ಅಕ್ಟೋಬರ್, 2001

ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## 2001 - 2002 ನೇ ಸಾಲಿನ ಗ್ರಂಥಾಲಯ ಉಪ ಸಮಿತಿ

ಶ್ರೀಯುತರುಗಳಾದ :

| | | |
|---|---|---|
| 1) | ಬಿ.ಬಿ. ಶಿವಪ್ಪ | ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಅಧ್ಯಕ್ಷರು |
| 2) | ಸುಭಾಷ್ ರುಕ್ಮಯ್ಯ ಗುತ್ತೇದಾರ್ | ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 3) | ಚಂದ್ರಕಾಂತ ಗುರಪ್ಪ ಬೆಲ್ಲದ | ,, |
| 4) | ಉಮೇಶ್ ವಿ. ಕತ್ತಿ | ,, |
| 5) | ಕೆ.ಎಸ್. ಸುಬ್ಬಾರೆಡ್ಡಿ | ,, |
| 6) | ಡಾ॥ಎಲ್.ಹನುಮಂತಯ್ಯ | ವಿಧಾನಪರಿಷತ್ತಿನ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 7) | ಕೆ. ನಿರಂಜನ ನಾಯ್ಡು | ,, |
| 8) | ಶ್ರೀಮತಿ ನಿರ್ಮಲಾ ವೆಂಕಟೇಶ್ | ,, |

# ಪರಿವಿಡಿ

# ಭಾಗ - ಮೂರು

## ಅವರ ಚಿಂತನೆ

(ಡಾ॥ ಮುಖರ್ಜಿಯವರು ಪ್ರಜಾಪ್ರತಿನಿಧಿ ಸಭೆ / ರಾಜ್ಯಾಂಗ ರಚನಾಸಭೆ / ಲೋಕಸಭೆಯಲ್ಲಿ ಮಾಡಿದ ಪ್ರಮುಖ ಭಾಷಣದ ಆಯ್ದ ಭಾಗಗಳು)

## ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿ - ವ್ಯಕ್ತಿಚಿತ್ರ

ಸ್ವತಂತ್ರ ಸಾರ್ವಭೌಮ ಭಾರತದ ಸಂಸ್ಥಾಪಕರಲ್ಲೊಬ್ಬರಾದ ಡಾ|| ಶ್ಯಾಮ ಪ್ರಸಾದ್ ಮುಖರ್ಜಿಯವರು ಮಹಾನ್ ದೇಶಭಕ್ತರು. ಶೈಕ್ಷಣಿಕ ತಜ್ಞರು, ಸಂಸದೀಯ ಪಟು, ಮುತ್ಸದ್ದಿ, ಮಾನವೀಯತಾವಾದಿ, ಇವೆಲ್ಲವುಗಳಿಗಿಂತ ಮಿಗಿಲಾಗಿ ಭಾರತದ ಏಕತೆ ಮತ್ತು ಸಮಗ್ರತೆಯ ಹರಿಕಾರರಾಗಿದ್ದರು.

ಶ್ಯಾಮ್ ಪ್ರಸಾದರು 1901ರ ಜುಲೈ 6 ರಂದು ಕಲ್ಕತ್ತಾದಲ್ಲಿ ಜನಿಸಿದರು. ಅವರದು ಶ್ರೀಮಂತ ಕುಟುಂಬ. ತಮ್ಮ ತಂದೆಯವರಿಂದ ಸ್ವಾತಂತ್ರ್ಯ ಪ್ರಿಯತೆ ಮತ್ತು ಧೈರ್ಯದ ಗುಣಗಳನ್ನು ಪಡೆದಿದ್ದರು. ಅವರ ತೆಂದೆಯವರಾದ ಅಶುತೋಷ್ ಮುಖರ್ಜಿಯವರು ಕಲ್ಕತ್ತ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು. ಕಲ್ಕತ್ತ ಶ್ರೇಷ್ಠ ನ್ಯಾಯಾಲಯದಲ್ಲಿ ನ್ಯಾಯವಾದಿಗಳಾಗಿದ್ದರು. ಬಂಗಾಳ ದೇಶದ ಸಾರ್ವಜನಿಕ ಜೀವನದಲ್ಲಿ ಪ್ರತಿಷ್ಠಿತ ವ್ಯಕ್ತಿ ಎಂದೇ ಹೆಸರನ್ನು ಗಳಿಸಿದ್ದರು. ಅವರ ತಾಯಿ ಶ್ರೀಮತಿ ಜೋಗ್ ಮಾಯಾದೇವಿ ಧರ್ಮನಿಷ್ಠ ಹಿಂದೂ ಮಹಿಳೆ ಪತಿಗೆ,' ಕುಟುಂಬಕ್ಕೆ ಮತ್ತು ಧರ್ಮಕ್ಕೆ ಸಂಪೂರ್ಣವಾಗಿ ದೃಢ ನಿಷ್ಠೆಯಿಂದಿದ್ದ ದೈವ ಭಕ್ತೆ. ಕಲ್ಕತ್ತಾದ ಭವಾನಿಪುರದಲ್ಲಿದ್ದ ಮುಖರ್ಜಿಯವರ ಮನೆ ಪೂಜೆ ಪುನಸ್ಕಾರಗಳಿಗೆ ಹೆಸರುವಾಸಿಯಾಗಿತ್ತು. ಸರಸ್ವತಿಯ ದೇಗುಲ ಎನಿಸಿಕೊಂಡಿತ್ತು.

ಬಾಲಕನಾದ ಶ್ಯಾಮ್ ಪ್ರಸಾದನು ಇಂತಹ ವಾತಾವರಣದಲ್ಲಿ ಬೆಳೆಯುತ್ತಾ, ಪೂಜೆ ಪುನಸ್ಕಾರಗಳನ್ನು ವೀಕ್ಷಿಸುತ್ತಿದ್ದನು. ಮನೆಯಲ್ಲಿ ನೆಡೆಯುತ್ತಿದ್ದ. ಸಾಂಪ್ರದಾಯಿಕ ಸಮಾರಂಭಗಳಲ್ಲಿ ಸಾಂಸ್ಕೃತಿಕ ಚರ್ಚೆಗಳನ್ನು ಆಲಿಸುತ್ತಿದ್ದನು. ತನ್ನ ತಂದೆ ಮತ್ತು ಮಹಾನ್ ವಿದ್ವಾಂಸರ ನಡುವೆ ಅತ್ಯಾಧುನಿಕ ಮತ್ತು ವೈಜ್ಞಾನಿಕ ಮನೋಭಾವದ ಚರ್ಚೆಗಳು ನಡೆಯುತ್ತಿದ್ದವು. ವಿದ್ವಾಂಸರು ಭಾರತದ ನಾನಾ ಭಾಗಗಳಿಂದ ಬರುತ್ತಿದ್ದರು. ಶ್ಯಾಮ ಪ್ರಸಾದರಲ್ಲಿ ಭಾರತೀಯ ಪುರಾತನ ಸಂಸ್ಕೃತಿಯ ಬಗೆಗೆ ಗೌರವವೂ ಮತ್ತು ಪಾಶ್ಚಿಮಾತ್ಯರ ಯೋಚನಾ ಲಹರಿಯ ಬಗ್ಗೆ ಆಸಕ್ತಿಯೂ ಮೂಡಿತು. ಪ್ರೌಢ ಪಾಂಡಿತ್ಯ ಉಳ್ಳವರೂ ಹಾಗೂ ಪ್ರಸಿದ್ಧ ಸಂಸದೀಯ ಪಟುಗಳೂ ಆಗಿದ್ದ ಇವರಲ್ಲಿ ಹಿಂದೂ ಆಧ್ಯಾತ್ಮಿಕತೆ, ಪರಧರ್ಮ ಸಹಿಷ್ಣುತೆ ಮತ್ತು ಮಾನವೀಯತೆ ಜೊತೆಗೆ ವೈಜ್ಞಾನಿಕ ದೃಷ್ಟಿಕೋನ, ವಿಶಾಲ ಮನೋಭಾವ, ಈ ಗುಣಗಳೆಲ್ಲ ಮೇಳೈಸಿಕೊಂಡವು.

ವಿದ್ಯಾಭ್ಯಾಸ :

ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿಯವರ ಬಾಲ್ಯದ ವಿದ್ಯಾಭ್ಯಾಸವು ಭವಾನಿಪುರದ ಮಿಟ್ಟರ್ ಶಾಲೆಯಲ್ಲಿ ಆಯಿತು. ಶ್ರೀ ಬಿಷ್‌ವೇಶ್ವರ್ ಮಿಟ್ಟರ್‌ರವರು ಈ ಶಾಲೆಯನ್ನು

ಸ್ಥಾಪಿಸಿದ್ದರು. ಈ ಶಾಲೆಯನ್ನು ಸ್ಥಾಪಿಸಲು ಅವರು ಶ್ಯಾಮ್ ಪ್ರಸಾದರ ತಂದೆಯವರಾದ ಅಶುತೋಷ್‌ರಿಂದ ಸ್ಫೂರ್ತಿಯನ್ನು ಪಡೆದಿದ್ದರು. ಮನೆಯಲ್ಲಿ ಮತ್ತು ಶಾಲೆಯಲ್ಲಿ ಎರಡು ಕಡೆಯೂ ಸಹ ಇವರಿಗೆ ಒಳ್ಳೆಯ ಶಿಕ್ಷಣ ದೊರೆಯುತ್ತಿತ್ತು. ಶ್ರೀ ಅಶುತೋಷರು ಇವರ ಶಿಕ್ಷಣದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿದ್ದರು. ಹುಟ್ಟಿನಿಂದ ಬಂದ ವಂಶ ಪಾರಂಪರ್ಯ ಗುಣಗಳು ಮತ್ತು ಬುದ್ಧಿವಂತಿಕೆ ಶ್ಯಾಮ್ ಪ್ರಸಾದ್‌ರವರನ್ನು ಉಜ್ವಲವಾಗಿ ಬೆಳಗುವಂತೆ ಮಾಡಿದವು. ಅವರು ತಮ್ಮ ಶಾಲಾ ದಿನಗಳಲ್ಲೇ ಎಫ್. ಎ ಮತ್ತು ಬಿ.ಎ. ತರಗತಿಗಳಿಗೆ ನಿಯಮಿಸಿದ್ದ ಪಠ್ಯ ಪುಸ್ತಕಗಳನ್ನು ಓದುತ್ತಿದ್ದರು. ಅವರ ತಂದೆಯವರು ಅವರನ್ನು ಅನೇಕ ಬಾರಿ ಕಲ್ಕತ್ತ ವಿಶ್ವವಿದ್ಯಾಲಯಕ್ಕೆ ಕರೆದೊಯ್ಯುತ್ತಿದ್ದರು. ಇದರಿಂದ ಆ ವಿಶ್ವವಿದ್ಯಾನಿಲಯದ ಪ್ರೊಫೆಸರ್‌ಗಳೊಂದಿಗೆ ಮಾತನಾಡಿ ತಮ್ಮ ಭಾವನೆಗಳನ್ನು ವಿನಿಮಯ ಮಾಡಿಕೊಳ್ಳುವ ಸುಸಂಧಿ ಅವರಿಗೆ ಲಭಿಸಿತ್ತು.

ವಿದ್ಯಾರ್ಥಿ ವೇತನದ ಮೇಲೆ ಓದುತ್ತಿದ್ದ ಅವರು ಹದಿನಾರನೇ ವಯಸ್ಸಿನಲ್ಲೇ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಮಿಟ್ರರ್ ಶಾಲೆಯಿಂದ ಉತ್ತೀರ್ಣರಾದರು. ಕಾಲೇಜು ವಿದ್ಯಾಭ್ಯಾಸಕ್ಕಾಗಿ ಕಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜನ್ನು ಸೇರಿದರು. 1919ರಲ್ಲಿ ಇಂಟರ್ ಆರ್ಟ್ಸ್ ಪರೀಕ್ಷೆಯಲ್ಲಿ ಅವರು ಚರ್ಚೆ ಪ್ರಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. 1921 ರಲ್ಲಿ ಇಂಗ್ಲೀಷ್ ಐಚ್ಛಿಕೆ ಬಿ.ಎ. ಆನರ್ಸ್ ಪರೀಕ್ಷೆಯಲ್ಲೂ ಸಹ ಅವರು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿದ್ದರು. ಅವರಲ್ಲಿ ಸ್ವದೇಶಾಭಿಮಾನ ಜಾಗೃತಗೊಂಡು, ತಮ್ಮ ಎಂ.ಎ. ಪರೀಕ್ಷೆಗೆ ಅವರು ಇಂಗ್ರೀಷ್‌ನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳದೆ ಭಾರತದ ಭಾಷೆಗಳಾದ ಬಂಗಾಲಿ ಮತ್ತು ಮತ್ತೊಂದು ಭಾರತದ ಭಾಷೆಯನ್ನು ತೆಗೆದುಕೊಂಡರು. 1923 ರಲ್ಲಿ ಎಂ.ಎ. ಪರೀಕ್ಷೆಯಲ್ಲಿ ಸಹ ಅವರು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಅವರು ಎಂ.ಎ. ನಲ್ಲಿ ಭಾರತೀಯ ಭಾಷೆಗಳನ್ನು ಅಧ್ಯಯನ ಮಾಡಲಿಕ್ಕೆ ಮುಖ್ಯ ಕಾರಣವೆಂದರೆ ಅವರ ತಂದೆಯವರ ದೃಷ್ಟಿಕೋನ. ಅದುವರೆಗೂ, ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ರೀಷ್ ಭಾಷೆ ಮಾತ್ರವೇ ತನ್ನ ಆಧಿಪತ್ಯವನ್ನು ಸ್ಥಾಪಿಸಿತ್ತು. ಭಾರತೀಯ ಭಾಷೆಗಳಿಗೆ ವಿಶ್ವವಿದ್ಯಾನಿಲಯದಲ್ಲಿ ಸಾಕಷ್ಟು ಪ್ರಾಮುಖ್ಯತೆ ಲಭಿಸಿರಲಿಲ್ಲ. ಆ ಭಾಷೆಗಳಿಗೆ ಸರಿಯಾದ ಸ್ಥಾನಮಾನಗಳನ್ನು ಒದಗಿಸುವ ಸದುದ್ದೇಶದಿಂದ ಅವರು ನಮ್ಮ ಭಾರತೀಯ ಭಾಷೆಗಳನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡರು. 1922ರ ಏಪ್ರಿಲ್, ತಿಂಗಳಲ್ಲಿ ಅವರಿನ್ನೂ ಎಂ.ಎ. ಓದುತ್ತಿದ್ದಾಗ ಅವರ ವಿವಾಹ ಸುಧಾದೇವಿಯವರೊಡನೆ ಆಯಿತು, ಆಕೆ ನಾಲ್ಕು ಮಕ್ಕಳಿಗೆ ಜನ್ಮ ನೀಡಿದಳು. 1934 ರಲ್ಲಿ ಆಕೆ ಮರಣ ಹೊಂದಿದಳು. ಶ್ಯಾಮ್ ಪ್ರಸಾದ್‌ರವರಿಗೆ ಆಗ ಕೇವಲ 33 ವರ್ಷಗಳು ಮಾತ್ರ. ಆದರೆ ಪುನಃ ವಿವಾಹವಾಗಬಾರದೆಂದು ಅವರು ನಿರ್ಧರಿಸಿದರು.

ಉಜ್ವಲ ಪ್ರತಿಭೆಯಿಂದಾಗಿ ಅವರು ವಿಶ್ವವಿದ್ಯಾನಿಲಯದಲ್ಲೆಲ್ಲಾ ಉತ್ತಮ ವಿದ್ಯಾರ್ಥಿ ಎಂಬ ಗೌರವಕ್ಕೆ ಪಾತ್ರರಾಗಿದ್ದರು, ಪ್ರೆಸಿಡೆನ್ಸಿ ಕಾಲೇಜಿನ ಮ್ಯಾಗ್‌ಜೈನ್‌ಗೆ ಅವರನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿತ್ತು. ಇದು, ಯುವಕ ಶ್ಯಾಮ್ ಪ್ರಸಾದನಿಗೆ ಸಂದ ಅತ್ಯುನ್ನತ ಗೌರವಯುತವಾದ ಸ್ಥಾನ. ಈ ಪತ್ರಿಕೆಯ ಸಂಪಾದಕತ್ವದಿಂದ ಶ್ಯಾಮ್ ಪ್ರಸಾದನಿಗೆ ತನ್ನ ಸ್ವಂತ ಅಭಿಪ್ರಾಯಗಳನ್ನು ಅಭಿವ್ಯಕ್ತಪಡಿಸುವ ಸದವಕಾಶ ದೊರಕಿ, ಕೆಲವು ಕಾಲ ಪತ್ರಿಕೋದ್ಯಮದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಲು ಸಾಧ್ಯವಾಯಿತು. 1922 ರಲ್ಲಿ ಅವರು "ಬಂಗವಾಣಿ" ಎಂಬ ಬಂಗಾಲಿ ಪತ್ರಿಕೆಯನ್ನು ಪ್ರಾರಂಭಿಸಿದರು. 1923 - 1924 ರಲ್ಲಿ "ಕ್ಯಾಪಿಟರ್" ಎಂಬ ಪತ್ರಿಕೆಗೆ ಅಂಕಣಕಾರರಾಗಿ ಲೇಖನಗಳನ್ನು ಬರೆಯುತ್ತಿದ್ದರು, ಈ ಪತ್ರಿಕೆಯು, ಪಾಲ್ ತಾವೆಲ್ ಸಂಪಾದಕತ್ವದಲ್ಲಿ ನಡೆಯುತ್ತಿತ್ತು. ಈ ಪತ್ರಿಕೆಗೆ ಶ್ಯಾಮ್ ಪ್ರಸಾದ್‌ರವರು "ಡಿ. ಜೆ" ಎಂಬ ಹೆಸರಿನಿಂದ ಬರೆಯುತ್ತಿದ್ದರು.

ಪತ್ರಿಕೋದ್ಯಮದ ಆಕರ್ಷಣೆ ಅವರನ್ನು ಎಡೆಬಿಡದೆ ಕಾಡಿತು. ಅವರ ನಲವತ್ತನೆ ವರ್ಷದಲ್ಲಿ ಅವರು ಮತ್ತೆ ಪತ್ರಿಕೋದ್ಯಮಕ್ಕೆ ಮರಳಿ "ದ ನ್ಯಾಷನಲಿಸ್ಟ್" ಎಂಬ ದಿನಪತ್ರಿಕೆಯನ್ನು ಅವರು ಕಲ್ಕತ್ತಾದಲ್ಲಿ ಪ್ರಾರಂಭಿಸಿದರು. 1924ರಲ್ಲಿ ಅವರು ಬಿ. ಎಲ್. ಪರೀಕ್ಷೆಯಲ್ಲಿ ಸಹ ಅವರು ವಿಶ್ವವಿದ್ಯಾನಿಲಯಕ್ಕೆ ಮೊದಲಿಗರಾಗಿ ಉತ್ತೀರ್ಣರಾದರು. ಅವರ ಪದವಿಗಳ ಸಾಲಿಗೆ ಚಿನ್ನದ ಕಳಶವಿಟ್ಟಂತೆ 1927ರಲ್ಲಿ ಡಿ. ಲಿಟ್ ಮತ್ತು ಎಲ್. ಎಲ್ ಡಿ ಪದವಿಗಳನ್ನು ಪಡೆದರು. 1926 ರಲ್ಲಿ ಅವರನ್ನು ಇಂಗ್ಲೀಷರ ವಕೀಲರ ಸಂಘ, "ಲಿಂಕನ್ಸ್‌ಇನ್" (ಇಂಗ್ಲೆಂಡ್) ಗೆ ಆಹ್ವಾನಿಸಿತು. ಅವರು ಅದಕ್ಕೆ ಸೇರಿಕೊಂಡರೂ ಅಲ್ಲಿ ವಕೀಲಿ ವೃತ್ತಿನಡೆಸಲಿಲ್ಲ. ಬ್ರಿಟಿಷ್ ಚಕ್ರಾಧಿಪತ್ಯದ ವಿಶ್ವವಿದ್ಯಾನಿಲಯಗಳ ಸಮ್ಮೇಳನದಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ತದನಂತರ, ಅವರು ಭಾರತ ದೇಶದ ಪ್ರಮುಖ ಶಿಕ್ಷಣ ತಜ್ಞನೆಂದು ಪರಿಗಣಿತರಾದರು.

## ಅಂತ್ಯಂತ ಕಿರಿಯ ಉಪಕುಲಪತಿ

1923 ರಲ್ಲಿ ಅವರ ತಂದೆ ಸ್ವರ್ಗಸ್ಥರಾದರು, ಕಲ್ಕತ್ತಾ ವಿಶ್ವವಿದ್ಯಾನಿಲಯದ ನಿರ್ವಹಣೆಯಲ್ಲಿ ಅವರ ತಂದೆಗೆ ಶ್ಯಾಮ್ ಪ್ರಸಾದ್‌ರವರು ತಮ್ಮ ವಿದ್ಯಾರ್ಥಿ ಜೀವನದಿಂದಲೂ, ಸಹಾಯ ಹಸ್ತ ನೀಡುತ್ತಿದ್ದರು. ತಮ್ಮ ತಂದೆ ಉಪಕುಲಪತಿಗಳಾಗಿದ್ದುದರಿಂದ ಅವರು ಶಿಕ್ಷಣ ಕ್ಷೇತ್ರದಲ್ಲಿನ ಶೈಕ್ಷಣಿಕ ಯೋಜನೆಗಳನ್ನು ಮತ್ತು ಅವರ ವಿಧಿವಿಧಾನಗಳನ್ನು ನಿಕಟವಾಗಿ ತಿಳಿದುಕೊಂಡಿದ್ದರು. ವಿಶ್ವವಿದ್ಯಾನಿಲಯದ ಸೆನೆಟ್ ಮತ್ತು ಸಿಂಡಿಕೇಟ್‌ಗೆ 1924ರಲ್ಲಿ ಚುನಾಯಿತರಾದರು. ಅವರು ಬಂಗಾಳದ ವಿಧಾನ ಪರಿಷತ್‌ನಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಕಲ್ಕತ್ತಾ ವಿಶ್ವವಿದ್ಯಾಲಯವನ್ನು ಪ್ರತಿನಿಧಿಸಿದ್ದರು.

ಶಾಶನ ಸಭೆಗಳನ್ನು ಬಹಿಷ್ಕರಿಸಲು ಕಾಂಗ್ರೆಸ್ ನಿರ್ಧರಿಸಿದಾಗ ಅವರು ವಿಧಾನ ಪರಿಷತ್ತಿನ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಆದರೆ ತಕ್ಷಣವೇ ಸ್ವತಂತ್ರ ಅಭ್ಯರ್ಥಿಯಾಗಿ ವಿಧಾನಪರಿಷತ್ತನ್ನು ಪ್ರವೇಶಿಸಿದರು, ತಮ್ಮ ವಿಶ್ವವಿದ್ಯಾನಿಲಯದ ಹಿತಾಸಕ್ತಿಯನ್ನು ಕಾಪಾಡುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸುವುದೇ ಅವರ ಮುಖ್ಯ ಧ್ಯೇಯವಾಗಿತ್ತು.

1934ರಲ್ಲಿ ಶ್ಯಾಮ್ ಪ್ರಸಾದ್‌ರವರು, ಅತ್ಯಂತ ಕಿರಿಯ ವಯಸ್ಸಿನಲ್ಲೇ ಕಲ್ಕತ್ತ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕಗೊಂಡರು. ಈ ಸದವಕಾಶದಿಂದ, ಜನರನ್ನು ವಿದ್ಯಾವಂತರನ್ನಾಗಿ ಮಾಡುವ ತಮ್ಮ ಗುರಿ ಮತ್ತು ಆದರ್ಶಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಯಿತು. ಅವರು ಉಪಕುಲಪತಿಗಳಾಗಿದ್ದ ಅವಧಿಯಲ್ಲಿ ರವೀಂದ್ರನಾಥ್ ಟಾಗೂರ್‌ರವರು ಪದವಿ ಪ್ರಧಾನ ಸಮಾರಂಭದಲ್ಲಿ ಬಂಗಾಳಿಯಲ್ಲಿ ಭಾಷಣ ಮಾಡಿದರು. ಇದರಿಂದ ಇಂಗ್ಲೀಷಿನ ಅತ್ಯುನ್ನತ ಸ್ಥಾನ ಕುಂದಿ ಬಂಗಾಳಿ ಮತ್ತು ಇತರೆ ಭಾರತೀಯ ಭಾಷೆಗಳು ತಲೆ ಎತ್ತುವಂತಾಯ್ತು.

ಸ್ವದೇಶಾಭಿಮಾನಿ:

1935ನೇ ಇಸವಿಯ ಭಾರತ ಸರ್ಕಾರದ ಕಾಯ್ದೆಯ ಪ್ರಾಂತೀಯ ಭಾಗವನ್ನು 1937 ರಲ್ಲಿ ಜಾರಿಗೆ ತಂದಿದ್ದರಿಂದ ಮತ್ತು ಭಾರತದಲ್ಲಿ ಪ್ರಾಂತೀಯ ಶಾಸನ ಸಭೆಗಳಿಗೆ ಚುನಾವಣೆ ನಡೆದ ಪ್ರಯುಕ್ತ ದೇಶದಲ್ಲಿ ಒಂದು ರೀತಿಯ ಹೊಸ ತಿರುವು ಬಂದಂತಾಯ್ತು. ಅವರು ಮತ್ತೆ ವಿಶ್ವವಿದ್ಯಾನಿಲಯದ ಕ್ಷೇತ್ರದಿಂದ ಬಂಗಾಳದ ಶಾಸನ ಸಭೆಗೆ ಮರಳಿದರು. ಹೀಗಾಗಿ, ಪ್ರಾಂತೀಯ ಸ್ವಯಮಾಡಳಿತದ ರೀತಿನೀತಿಗಳನ್ನು ನಿಕಟವಾಗಿ ಅಧ್ಯಯನ ಮಾಡುವ ಅವಕಾಶ ಅವರಿಗೆ ದೊರೆಯಿತು. 250 ಸದಸ್ಯರಿರುವ ಶಾಸನಸಭೆಯಲ್ಲಿ ಹಿಂದೂಗಳಿಗೆ ಕೇವಲ 8 ಸ್ಥಾನಗಳನ್ನು ಮಾತ್ರ ಕೊಡಲಾಗಿತ್ತು. ಈ ಸ್ಥಾನಗಳಿಗೆ ಹೆಚ್ಚಾಗಿ ಕಾಂಗ್ರೆಸ್‌ನವರೇ ಆಯ್ಕೆಯಾಗಿದ್ದರು. ಉಳಿದ ಸ್ಥಾನಗಳಿಗೆ ಮುಸ್ಲಿಮರು ಮತ್ತು ಬ್ರಿಟಿಷ್ ಆಸಕ್ತರು ಆಯ್ಕೆಯಾಗಿದ್ದರು. ಈ ಮುಸ್ಲಿಂರಲ್ಲೂ ಮುಸ್ಲಿಂ ಲೀಗ್ ಮತ್ತು ಕೃಷಿಕ ಪ್ರಜಾಪಾರ್ಟಿ ಸದಸ್ಯರಿದ್ದರು. ಕಾಂಗ್ರೆಸ್ ಪಾರ್ಟಿಯು ಕೃಷಿಕ್ ಪ್ರಜಾಪಾರ್ಟಿಯ ಸಹಯೋಗದೊಂದಿಗೆ ಸರ್ಕಾರ ಸ್ಥಾಪಿಸುವ ತಂತ್ರ ಮಾಡಿದ್ದರೆ. ಬಂಗಾಳದಲ್ಲಿ ಮುಸ್ಲಿಂಮೇತರ ಸುಭದ್ರ ಸರ್ಕಾರ ಇರುತ್ತಿತ್ತು. ಆದರೆ, ಕಾಂಗ್ರೆಸ್ ಈ ಬಗೆಯ ಪರಿಸ್ಥಿತಿಯನ್ನು ಶಾಸನ ಸಭೆಯ ಒಳಗಡೆ ಮತ್ತು ಹೊರಗಡೆ ನಿಭಾಯಿಸಿದ ರೀತಿ ನೀತಿಯನ್ನು ಕಂಡ ಅವರು, ಕಾಂಗ್ರೆಸ್‌ನ ನೀತಿಗಳು ಮತ್ತು ರಾಜಕೀಯ ದೂರದೃಷ್ಟಿ ಕುರಿತಂತೆ ಹೊಸ ಚಿಂತನೆಗೆ ತೊಡಗಿದರು.

ಶ್ಯಾಮ್ ಪ್ರಸಾದ್ ಮುಖರ್ಜಿ ಮತ್ತು ಅವರ ತಂದೆ ಇಬ್ಬರೂ ನಿಷ್ಠೆಯಿಂದ, ತತ್ಪರತೆಯಿಂದ, ಶ್ರದ್ಧೆಯಿಂದ ಬೆಳೆಸಿದ್ದ ಶಿಕ್ಷಣ ವ್ಯವಸ್ಥೆಯನ್ನು ಮುಸ್ಲಿಂಲೀಗ್ ತನ್ನ ಮಂತ್ರಿ ಮಂಡಲವನ್ನು ರಚಿಸಿದ ನಂತರ ಬದಲಾಯಿಸಲು ಪ್ರಾರಂಭಿಸಿತು.

ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮುಸ್ಲಿಂಲೀಗ್‌ನೊದನೆ ರಾಜಿ ಮಾಡಿಕೊಳ್ಳುವ ನೀತಿಗೆ ಈತನ ಮನಸ್ಸು ಒಪ್ಪಲಿಲ್ಲ. ಈತನ ಸ್ವದೇಶಾಭಿಮಾನದ ಕಿಚ್ಚು ಕಾರ್ಯರೂಪಕ್ಕೆ ಬರಲು ಹವಣಿಸುತ್ತಿತ್ತು. ಮುಸ್ಲಿಂ ಲೀಗ್ ಅಧಿಕಾರಕ್ಕೆ ಬರಲು ಅವಕಾಶ ಕೊಡದಂತೆ ಕಾಂಗ್ರೆಸ್ ತನ್ನ ನೀತಿಯಲ್ಲಿ ಬದಲಾವಣೆ ಮಾಡಿಕೊಳ್ಳುವಂತೆ ಒಪ್ಪಿಸಲು ಅಸಮರ್ಥನಾದಾಗ ಅವರು ಒಬ್ಬಂಟಿಗನಾಗಿ ಮುಸ್ಲಿಂ ಲೀಗ್ ಮಂತ್ರಿ ಮಂಡಲವನ್ನು ಉರುಳಿಸುವ ಸಂಕಲ್ಪ ಮಾಡಿದರು. ಅಭಿವೃದ್ಧಿ ಶೀಲ ವಿಚಾರಗಳ ಪರವಾಗಿದ್ದ, ಕಾಂಗ್ರೆಸ್ಸಿಗರಲ್ಲದ ಹಿಂದೂ ಶಾಸಕರನ್ನು ಒಗ್ಗೂಡಿಸಿ, ಕೃಷಿಕ ಪ್ರಜಾಪಾರ್ಟಿಯೊಂದಿಗೆ, ಫಜಲ್-ಉಲ್ ಹಕ್‌ರವರ ನಾಯಕತ್ವದಲ್ಲಿ ಸಮ್ಮಿಶ್ರ ಮಂತ್ರಿ ಮಂಡಲದ ರಚನೆಮಾಡಿದ್ದರಿಂದಾಗಿ ಶ್ಯಾಮ್ ಪ್ರಸಾದ್‌ರವರನ್ನು ದೂರದೃಷ್ಟಿಯುಳ್ಳ ಮತ್ತು ಕಾರ್ಯ ಸಾಧಕ ನಾಯಕನೆಂದು ಜನತೆ ಗುರುತಿಸಿದರು. ಅವರ ವ್ಯಕ್ತಿತ್ವ ವೃದ್ಧಿಸತೊಡಗಿತು.

ಇದೇ ಸಮಯದಲ್ಲಿ, ವೀರ ಸಾವರ್‌ಕರ್‌ರವರ ಪ್ರಭಾವಕ್ಕೆ ಒಳಗಾಗಿ ಅವರು ಹಿಂದೂ ಮಹಾ ಸಭೆಯನ್ನು ಸೇರಿದರು ಮತ್ತು ದೇಶದ್ರೋಹಿಗಳ ಕಾರ್ಯಗಳನ್ನು ವಿಫಲಗೊಳಿಸಲು ಮುಂದಾದರು. ಅವರು ಹಿಂದೂ ಮಹಾಸಭಾ ಸೇರಿದ ಕೆಲವು ದಿನಗಳಲ್ಲೇ ಅಂದರೆ 1939ರಲ್ಲಿ ಅದರ ಹಂಗಾಮಿ ಅಧ್ಯಕ್ಷರಾದರು. ಭಾರತದ ಪೂರ್ಣ ಸ್ವಾತಂತ್ರ್ಯವೇ ಹಿಂದೂ ಮಹಾಸಭಾದ ಮುಖ್ಯಗುರಿಯಾಗಿತ್ತು. ಅದೇ ಅದರ ರಾಜಕೀಯ ಧ್ಯೇಯವಾಗಿತ್ತು. ಈತ ಹಿಂದೂ ಮಹಾ ಸಭೆಗೆ ಸೇರಿದ್ದನ್ನು ಮಹಾತ್ಮಾಗಾಂಧೀಜಿಯವರು ಸಹ ಸ್ವಾಗತಿಸಿದರು. ಮಾಳವಿಯಾರ ನಂತರ ಹಿಂದೂಗಳನ್ನು ಸಂಘಟಿಸಿ ಆದರ ನಾಯಕತ್ವವನ್ನು ವಹಿಸುವ ಸಮರ್ಥ ನಾಯಕನೊಬ್ಬನು ಬೇಕಾಗಿತ್ತು. ಶ್ಯಾಮ್ ಪ್ರಸಾದರ ವಿಶಾಲ ಮನೋಭಾವ ಮತ್ತು ಸ್ವದೇಶಾಭಿಮಾನ ಕಂಡ ಮಹಾತ್ಮಾಗಾಂಧಿಯವರು ಇವರ ಬಗ್ಗೆ ಅತ್ಯಂತ ಕಾಳಜಿ ಉಳ್ಳವರಾಗಿದ್ದರು. ಒಮ್ಮೆ ಗಾಂಧಿಯವರು "ಪಟೇಲರು ಕಾಂಗ್ರೆಸ್ ವ್ಯಕ್ತಿ, ಆದರೆ ಅವರ ಮನಸ್ಸು ಹಿಂದುತ್ವದಿಂದ ಕೂಡಿದೆ, ನೀನು ಹಿಂದೂ ಸಭಾ ವ್ಯಕ್ತಿ, ಆದರೆ ನಿನ್ನಲ್ಲಿ ಕಾಂಗ್ರೆಸ್ ಮನಸ್ಸಿದೆ" ಎಂದು ಹೇಳಿದ್ದರು.

ಮಂತ್ರಿ ಮಂಡಲದ ಕಾರ್ಯಕಲಾಪಗಳಲ್ಲಿ ಗೌರ್ನರ್‌ರವರ ಹಸ್ತಕ್ಷೇಪವನ್ನು ಪ್ರತಿಭಟಿಸಿ 1943ರಲ್ಲಿ ಶ್ಯಾಮ್ ಪ್ರಸಾದ್‌ರವರು ಬಂಗಾಳ ಮಂತ್ರಿ ಮಂಡಲವನ್ನು ತ್ಯಜಿಸಿದರು. ಗೌರ್ನರ್‌ರವರ ಅಧಿಕಾರಶಾಹಿ ಮನೋವೃತ್ತಿ ಧೋರಣೆ ಸಹಿಸದಾದರು. ಪೋಲೀಸ್ ಮತ್ತು ಸಾರ್ವಜನಿಕ ಆಡಳಿತದಲ್ಲಿ ಹಸ್ತಕ್ಷೇಪ ಅಧಿಕವಾಗತೊಡಗಿತು. ಪ್ರಾಂತ್ಯಗಳ ಸ್ವಾಯತ್ತತೆ

ಕೇವಲ ತೋರಿಕೆ ಎನಿಸಿತು. ಈತ ಮಂತ್ರಿ ಪದವಿಯನ್ನು ತ್ಯಜಿಸಿದ್ದನ್ನು ನೋಡಿ, ಈತ ಯಾವ ಆಮಿಷಗಳಿಗೂ ಒಳಗಾಗುವ ವ್ಯಕ್ತಿಯಲ್ಲ, ಆತ ತನ್ನ ಕರ್ತವ್ಯದಿಂದ ವಿಮುಖನಾಗಲಾರ ಎಂದು ಜನ ಭಾವಿಸಿದರು. ಶ್ಯಾಮ್ ಪ್ರಸಾದರು ಲಾರ್ಡ್ ಲಿನ್‌ಲಿತ್ ಗೋ ರವರೊಡನೆ ನಡೆಸಿದ ಪತ್ರ ವ್ಯವಹಾರದಿಂದ, ರಾಜಕೀಯ ನಾಯಕರನ್ನು ಬಿಡುಗಡೆ ಮಾಡಬೇಕೆಂದೂ ಹಾಗೂ ಜನತೆಯಲ್ಲಿ ನಂಬಿಕೆ ಇಡಬೇಕೆಂದೂ ಮತ್ತು ಜಪಾನಿಯರ ಬೆದರಿಕೆಯನ್ನು ಹತ್ತಿಕ್ಕಲು ರಾಷ್ಟ್ರೀಯ ರಕ್ಷಣಾದಳವನ್ನು ರಚಿಸಲು ಅನುಮತಿ ಕೊಡಬೇಕೆಂದು ಅವರನ್ನು ಒತ್ತಾಯಿಸಿರುವುದು ತಿಳಿದು ಬರುತ್ತದೆ. ಅವರ ಸ್ವದೇಶಾಭಿಮಾನಕ್ಕೆ ಇದು ಜ್ವಲಂತ ನಿದರ್ಶನ.

**ಮಾನವೀಯತಾವಾದಿ :**

1943 ರಲ್ಲಿ ಬಂಗಾಳದಲ್ಲಿ ಭೀಕರ ಕ್ಷಾಮ ತಲೆದೋರಿತು. ಈ ದಾರುಣ ಪರಿಸ್ಥಿತಿಯಲ್ಲಿ ಶ್ಯಾಮ್ ಪ್ರಸಾದ್ ಮುಖರ್ಜಿಯವರು ಮುಂಚೂಣಿಯಲ್ಲಿದ್ದು ನಡೆಸಿದ ಕಾರ್ಯಕ್ರಮಗಳು ಯಾರಿಂದಲೂ ಮರೆಯಲಸಾಧ್ಯ. ಕೆಲವರು ಅವರ ರಾಜಕೀಯ ಸಿದ್ಧಾಂತಗಳನ್ನು ಒಪ್ಪದಿರಬಹುದಾದರೂ ಅವರಲ್ಲಿದ್ದ ಮಾನವೀಯತೆ ಶ್ಲಾಘನೀಯ. ಬಂಗಾಳದಲ್ಲಿನ ಭೀಕರ ಬರಗಾಲದ ಪರಿಸ್ಥಿತಿಗೆ ದೇಶದ ಎಲ್ಲ ಜನರ ಗಮನವನ್ನು ಸೆಳೆಯಲು ಪ್ರಯತ್ನಿಸಿದರಲ್ಲದೆ, ಅವರು ಅನೇಕ ರಾಜಕಾರಣಿಗಳನ್ನು, ವ್ಯಾಪಾರಸ್ಥರನ್ನು ಮತ್ತು ದಾನಿಗಳನ್ನು ಆಹ್ವಾನಿಸಿ ಕಷ್ಟ ಪರಿಸ್ಥಿಯಿಲ್ಲಿ ಸಿಲುಕಿರುವ ಬಂಗಾಳದ ಜನತೆಗೆ ಯಾವ ರೀತಿಯಲ್ಲಿ ಪರಿಹಾರ ಒದಗಿಸಬಹುದೆಂಬುದನ್ನು ಸಮಾಲೋಚಿಸಿ, "ಬಂಗಾಳ ಬರ ಪರಿಹಾರ ಸಮಿತಿ" ಯನ್ನು ಸ್ಥಾಪಿಸಿದರು. ಅಲ್ಲದೆ, "ಹಿಂದು ಮಹಾಸಭಾ ಪರಿಹಾರ ಸಮಿತಿ" ಯನ್ನು ಸಹ ಸ್ಥಾಪಿಸಿದರು. ಈ ಎರಡು ಸಮಿತಿಗಳಲ್ಲಿ ಶ್ಯಾಮ್ ಪ್ರಸಾದ್‌ರವರು ಜೀವಂತ ಚೇತನವಾಗಿ ದುಡಿಯುತ್ತಿದ್ದರು. ಸಹಾಯಕ್ಕಾಗಿ ಶ್ಯಾಮಪ್ರಸಾದರು ಮಾಡಿಕೊಂಡ ಮನವಿಗೆ ದೇಶದಾದ್ಯಂತ ಒಳ್ಳೆಯ ಪ್ರತಿಕ್ರಿಯೆ ದೊರೆಯಿತು. ಹಣದ ಹೊಳೆ ಹರಿಯಿತು, ದೇಶವೆಲ್ಲಾ ಒಂದಾಗಿ ಪರಿಹಾರದ ಕಾರ್ಯಕ್ರಮದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿತು. ಶ್ಯಾಮ್ ಪ್ರಸಾದ್ ಮುಖರ್ಜಿಯವರ ನೇತೃತ್ವದಲ್ಲಿ ಎಲ್ಲ ಕಾರ್ಯಕ್ರಮಗಳೂ ನಡೆಯತೊಡಗಿದವು. ಸಾವಿನ ಅಂಚಿನಲ್ಲಿದ್ದ ಅನೇಕ ಪ್ರಾಣಗಳು ಉಳಿದವು.

ಅವರ ಕರುಣೆ ಕೇವಲ ಬಾಯಿಮಾತಿನದ್ದಾಗಿರುತ್ತಿರಲಿಲ್ಲ, ಅವರ ಸಲಹೆಗಳು ಕಾರ್ಯರೂಪಕ್ಕೆ ತರುವಂಥವುಗಳಾಗಿರುತ್ತಿದ್ದವು. ಸ್ಪಂದನ ಶೀಲನಾಗಿರುತ್ತಿದ್ದವು, ಮಾನವನ ಕಷ್ಟಕಾರ್ಪಣ್ಯಗಳನ್ನು ನೀಗುವತ್ತ ಅವರ ಹೃದಯ ಸದಾ ಮಿಡಿಯುತ್ತಿರುತ್ತಿತ್ತು.

ಸ್ವಾತಂತ್ರ್ಯಾನಂತರ ಸಂಸತ್ತಿನಲ್ಲಿ ಅವರು, "ನಾವುಗಳು ದಿನ ಒಂದಕ್ಕೆ 40ರೂ.ಗಳು ಪಡೆಯುತ್ತಿದ್ದೇವೆ. ಲೋಕಸಭಾ ಸದಸ್ಯರು ಎಷ್ಟು ಭತ್ಯ ಪಡೆಯುವರೋ ತಿಳಿಯದು. ಸ್ವಯಂ ಸ್ಫೂರ್ತಿಯಿಂದ 10ರೂ.ಗಳನ್ನು ಕಡಿಮೆ ಮಾಡಿಕೊಂಡು ಆ ಹಣದಿಂದ, ಬರಗಾಲ

ಪೀಡಿತ ಸಂತ್ರಸ್ತರಿಗೆ, ಮಹಿಳೆಯರಿಗೆ ಮತ್ತು ಮಕ್ಕಳಿಗೆ ಆಶ್ರಯಕ್ಕಾಗಿ ಮನೆಗಳನ್ನು ಕಟ್ಟಿಕೊಡೋಣ, ಅವರ ಉಟೋಪಚಾರದ ವ್ಯವಸ್ಥೆ ಮಾಡೋಣ" ಎಂದು ಸಲಹೆ ಮಾಡಿದ್ದರು.

## ಅಖಂಡ ಭಾರತಕ್ಕಾಗಿ ಹೋರಾಡಿದ ಧೀರ :

ಕ್ರಿಪ್ಸ್‌ನ ಸಲಹೆಗಳನ್ನು ತಿರಸ್ಕರಿಸಿದಾಗ, ಆನೇಕ ಕಾಂಗ್ರೆಸ್ ನಾಯಕರುಗಳನ್ನು ಬಂಧಿಸಲಾಯಿತು. ಪ್ರಪ್ರಥಮವಾಗಿ ಧರ್ಮದ ಆಧಾರದ ಮೇಲೆ ಇಂಡಿಯಾ ದೇಶದ ವಿಭಜನೆ ತತ್ತ್ವ ತಲೆ ಎತ್ತಿತ್ತು. ಚಿಂತಾಕ್ರಾಂತರಾಗಿದ್ದ ಮುಸ್ಲಿಂರ ಮನಗೆಲ್ಲುವ ಹಾಗೂ ತಾನೇ ಭಾರತೀಯ ಮುಸ್ಲಿಂರ ವಕ್ತಾರ ಎಂಬ ಭಾವನೆ ಮೂಡಿಸುವ ಪ್ರಯತ್ನವನ್ನು ಮುಸ್ಲಿಂ ಲೀಗ್ ಮಾಡಹತ್ತಿತ್ತು. ವಿಭಜನೆಗಾಗಿ ಮುಸ್ಲಿಂ ಲೀಗ್ ಪಟ್ಟು ಹಿಡಿಯತೊಡಗಿತು. ಈ ವಿಷಯವನ್ನು ಮುಂದಿಟ್ಟುಕೊಂಡೇ ಪ್ರಾಂತೀಯ ಶಾಸನ ಸಭೆಗಳಿಗೆ ನಡೆದ ಚುನಾವಣೆಗಳಲ್ಲಿ ಹೋರಾಡಿತು. ಪಂಜಾಬ್ ಮತ್ತು ಬಂಗಾಲ, ಸಿಂಧ್ ಪ್ರಾಂತ್ಯದಲ್ಲಿ ಮುಸ್ಲಿಂ ಲೀಗ್ ಪಕ್ಷಕ್ಕೆ ಬಹುಮತ ದೊರಕಿತು. ಇದು, ಭಾರತದ ವಿಭಜನೆಗೆ ಉತ್ತೇಜನ ನೀಡಿತು.

ಶ್ರೀ ರಾಜಗೋಪಾಲಾಚಾರಿಯವರು ಮುಂದಿಟ್ಟ ಯೋಜನೆಯನ್ನು "ಸಿ.ಆರ್. ಫರ್ಮುಲಾ" ಎಂದೆ ಕರೆಯಲಾಗಿತ್ತು. ಮಾತೃಭೂಮಿಯನ್ನು ವಿಭಜಿಸಲು ಉದ್ದೇಶಿಸಲಾಗಿತ್ತು. ಶ್ಯಾಮ್ ಪ್ರಸಾದ್‌ರವರು ಇದು ಬಹಳ ಅಪಾಯಕಾರಿ ಹಾಗೂ ಅಘಾತಕಾರಿ ಬೆಳವಣಿಗೆಯೆಂದು ಹೇಳಿದರು. ಮಾತೃಭೂಮಿಯ ವಿಭಜನೆಯ ವಿರುದ್ಧ ದೇಶದಾದ್ಯಂತ ಚಳುವಳಿಯನ್ನು ಹೂಡಿ ಜನತೆಯನ್ನು ಸಂಘಟಿಸಿದರು. ಆದರೆ, ಭಾರತದಲ್ಲೇ ಉಳಿಯುವಂತೆ ಯಾರನ್ನೂ ಒತ್ತಾಯಿಸುವುದಿಲ್ಲವೆಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಪೂನಾ ಅಧಿವೇಶನದಲ್ಲಿ ಕೈಗೊಂಡಿದ್ದ ನಿರ್ಣಯವನ್ನು ಅವರ ಗಮನಕ್ಕೆ ತಂದಾಗ ಅವರು ತಲ್ಲಣಿಸಿದರು.

ಏಕೆಂದರೆ ಕಾಂಗ್ರೆಸ್ ಪಕ್ಷವು ಎಂದಿಗೂ ವಿಭಜನೆಗೆ ಒಪ್ಪುವುದಿಲ್ಲವೆಂದು ಸರ್ದಾರ್ ಪಟೇಲ್ ಆಶ್ವಾಸನೆ ನೀಡಿದ್ದರಿಂದ ಶ್ಯಾಮ್ ಪ್ರಸಾದ್‌ರವರು 1946ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ನೀಡಿದ್ದರು. ಮುಸ್ಲಿಂ ಪ್ರಾಂತ್ಯಗಳು ಭಾರತದ ಹೊರಗಿರಲು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಒಪ್ಪಿಗೆಯನ್ನು ನೀಡಿರುವುದು ಅವರಿಗೆ ಗೊತ್ತೇ ಇರಲಿಲ್ಲ.

ತದನಂದರ, ಶ್ಯಾಮ್ ಪ್ರಸಾದ್‌ರವರು ತಮ್ಮ ಪ್ರಯತ್ನವನ್ನೆಲ್ಲಾ ಭಾರತದ ಹಿತದೃಷ್ಟಿಯ ರಕ್ಷಣೆಗೆ ಮಿಸಲಿಟ್ಟರು, ಬಂಗಾಳದ ಹಿಂದೂಗಳ ಬೇಡಿಕೆಯನುಸಾರ ಬಂಗಾಳದ ವಿಭಜನೆ ಆಗಬೇಕೆಂದು ಅವರು ಒತ್ತಾಯಿಸತೊಡಗಿದರು, ಶ್ಯಾಮ್ ಪ್ರಸಾದ್‌ರವರ ನಿಲುವು ನ್ಯಾಯಬದ್ಧವಾಗಿತ್ತು. ಎಲ್ಲಕಡೆಯಿಂದಲೂ ಪ್ರೋತ್ಸಾಹ ದೊರಕಿತು, ಬಂಗಾಳದ ವಿಭಜನೆಗೆ

ಕೆಲವು ಕಡೆಗಳಿಂದ ವಿರೋಧ ವ್ಯಕ್ತವಾಗಿದ್ದರೂ, ಪಾಕಿಸ್ತಾನ ಬೇಕೆಂಬ ಹಿನ್ನೆಲೆಯಲ್ಲಿ ಶ್ಯಾಮ್ ಪ್ರಸಾದರ ತರ್ಕ ಎಷ್ಟೊಂದು ಜನಪ್ರಿಯ ಮತ್ತು ಪ್ರಬಲವಾಗಿತ್ತೆಂದರೆ ಬ್ರಿಟಿಷ್ ಸರ್ಕಾರಕ್ಕೆ, ಕಾಂಗ್ರೆಸ್‌ಗೆ ಮತ್ತು ಮುಸ್ಲಿಂಲೀಗ್‌ಗೆ ಅದನ್ನು ವಿರೋಧಿಸಲು ಸಾಧ್ಯವಾಗಲೇ ಇಲ್ಲ. ಶ್ಯಾಮ್ ಪ್ರಸಾದ್‌ರವರ ಪ್ರಯತ್ನದ ಫಲವಾಗಿ ಪಂಜಾಬಿನ ಅರ್ಧ ಭಾಗ ಮತ್ತು ಬಂಗಾಳದ ಅರ್ಧ ಭಾಗ ಭಾರತದಲ್ಲೇ ಉಳಿಯಿತು. “ಭಾರತವನ್ನು ಕಾಂಗ್ರೆಸ್ ವಿಭಜನೆ ಮಾಡಿತು. ನಾನು ಪಾಕಿಸ್ತಾನವನ್ನು ವಿಭಜನೆ ಮಾಡಿದೆ” ಎಂದು ಅವರು ಘೋಷಿಸಿದರು.

ಮಂತ್ರಿಯಾಗಿ :

1947ರ ಆಗಸ್ಟ್‌ನಲ್ಲಿ ಶ್ಯಾಮ್ ಪ್ರಸಾದ್‌ರವರನ್ನು ಮಹಾತ್ಮಾಗಾಂಧಿಯವರು ಮೊದಲ ರಾಷ್ಟ್ರೀಯ ಸರ್ಕಾರವನ್ನು ಸೇರುವಂತೆ ಆಹ್ವಾನಿಸಿದರು. ಈ ಆಹ್ವಾನಕ್ಕೆ ಗೌರವ ಕೊಟ್ಟು ಅವರು ಮಂತ್ರಿ ಮಂಡಲಕ್ಕೆ ಸೇರಿದರು. ಸ್ವತಂತ್ರ ಭಾರತದ ಪ್ರಾರಂಭದ ವರ್ಷಗಳಲ್ಲಿ ಸರಿಯಾದ ನೀತಿಗಳನ್ನು ಅಳವಡಿಸಿಕೊಳ್ಳಬಹುದು ಎಂಬ ನಂಬಿಕೆಯಿಂದ ಮಂತ್ರಿಮಂಡಲಕ್ಕೆ ಸೇರಿದ್ದರು. ಒಲ್ಲದ ಮನಸ್ಸಿನಿಂದ ಮತ್ತು ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಪಾಕಿಸ್ತಾನದಲ್ಲಿ ಉಳಿದಿರುವ ಕೋಟ್ಯಾಂತರ ಹಿಂದೂಗಳ ರಕ್ಷಣೆ ಮಾಡಬಹುದೆಂದು ಭಾವಿಸಿದ್ದರು. ಶ್ಯಾಮ್ ಪ್ರಸಾದ್‌ರವರು ಕೈಗಾರಿಕೆ ಮತ್ತು ವಿತರಣೆ ಮಂತ್ರಿಯಾಗಿದ್ದರು. ಕೈಗಾರಿಕೆ ಮತ್ತು ಆರ್ಥಿಕ ಸಮಸ್ಯೆಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದರು.

ಕೈಗಾರಿಕೆ ಮತ್ತು ವಿತರಣೆ ಮಂತ್ರಿಗಳಾಗಿದ್ದ ಕಾಲದಲ್ಲಿ ಕೈಗಾರಿಕಾಭಿವೃದ್ಧಿಗೆ ಭದ್ರ ಬುನಾದಿಯನ್ನು ಹಾಕಿದರು. ಮೂರು ಮುಖ್ಯ ಬೃಹತ್ ಕೈಗಾರಿಕೆಗಳನ್ನು ನಾಡಿಗೆ ಅರ್ಪಿಸಿದರು. “ಚಿತ್ತರಂಜನ್ ಲೋಕೊಮೋಟಿವ್ ಫ್ಯಾಕ್ಟರಿ”. “ದಿ ಸಿಂಧ್ರಿ ಫರ್ಟಿಲೈಜರ್ ಕಾರ್ಪೊರೇಷನ್” ಮತ್ತು “ದ ಹಿಂದೂಸ್ತಾನ್ ಏರ್ ಕ್ರಾಫ್ಟ್ಸ್ ಫ್ಯಾಕ್ಟರಿ” ಬೆಂಗಳೂರು. ಅವರು ಪ್ರತಿಯೊಂದು ಯೋಜನೆಗಳನ್ನು ಸಹ ನ್ಯಾಯಬದ್ಧವಾಗಿ ಯೋಜಿಸಿ, ಯೋಚಿಸಿ ನಿರ್ಧಾರ ಕೈಗೊಳ್ಳುತ್ತಿದ್ದರು. ಪ್ರಯೋಗಾತ್ಮಕವಾಗಿ ಮತ್ತು ಉಪಯೋಗವನ್ನು ಗಮನಿಸಿ ಕಾರ್ಯಪ್ರವೃತ್ತರಾಗುತ್ತಿದ್ದರು. ಅವರು ಯಾರಿಗೂ ಮಣಿಯುತ್ತಿರಲಿಲ್ಲ.

ನೀತಿ ವಿಷಯಗಳಲ್ಲಿ ಅದರಲ್ಲೂ ಅತಿ ಮುಖ್ಯವಾದ ಪಾಕಿಸ್ತಾನದ ಬಗೆಗಿನ ನೀತಿ ಬಗ್ಗೆ ಪಂಡಿತ ನೆಹರುರವರ ಮತ್ತು ಅವರ ನಡುವೆ ಭಿನ್ನಾಭಿಪ್ರಾಯಗಳು ಮೊದಮೊದಲಲ್ಲೇ ಕಾಣಿಸಿಕೊಂಡವು. ನಿರಾಶ್ರಿತರ ಬಗ್ಗೆ ಅವರ ಹೃದಯ ಅನುಕಂಪದಿಂದ ಮಿಡಿಯುತ್ತಿತ್ತು. ಪೂರ್ವ ಬಂಗಾಳದ ಶಾಂತಿಪ್ರಿಯ ಹಿಂದೂಗಳ ಮೇಲೆ ಪಾಕಿಸ್ತಾನಿಗಳು ಧಾಳಿ ನಡೆಸಿ ಅನೇಕ ಹಿಂದೂಗಳನ್ನು ಕೊಚ್ಚಿಹಾಕಿದ ಸಂಗತಿ ತಿಳಿದು ದಿಗ್ಭ್ರಾಂತರಾದರು. ಪೂರ್ವ ಪಾಕಿಸ್ತಾನದಿಂದ ಬಲವಂತವಾಗಿ ಹೊರಹಾಕಲ್ಪಟ್ಟ ಹಿಂದೂಗಳಿಗೆ ಸೇರಿದ ಪ್ರದೇಶವನ್ನು

ಪಾಕಿಸ್ತಾನವು, ಭಾರತಕ್ಕೆ ವರ್ಗಾಯಿಸುವಂತೆ ಸರ್ದಾರ್ ಪಟೇಲರು ಒತ್ತಾಯಿಸುತ್ತಿದ್ದುದನ್ನು ಮಾನ್ಯ ಮಾಡಬೇಕೆಂಬ ಮುಖರ್ಜಿಯವರ ಸಲಹೆಯನ್ನು ನೆಹರೂ ಒಪ್ಪಲಿಲ್ಲ. ಪಾಕಿಸ್ಥಾನದಿಂದ ಓಡಿಸಲ್ಪಟ್ಟ ನಿರಾಶ್ರಿತ ಹಿಂದೂಗಳ ಪರಿಸ್ಥಿತಿ ಹೀನಾಯವಾಗಿತ್ತು ಅವರ ಆಸ್ತಿಪಾಸ್ತಿಗಳನ್ನೆಲ್ಲಾ ಪಾಕಿಸ್ತಾನಿಗಳು ಕಬಳಿಸಿದ್ದರು. ಸರಿಯಾದ ಪರಿಹಾರವನ್ನು ಸಹ ಕೊಟ್ಟಿರಲಿಲ್ಲ. ಈ ವಿಷಯದಲ್ಲಿ ಶ್ಯಾಮ್ ಪ್ರಸಾದ್‌ರವರ ಮತ್ತು ನೆಹರೂರ ನಡುವೆ ಭಿನ್ನಾಭಿಪ್ರಾಯ ಬೆಳೆಯತೊಡಗಿತು. 1950ರಲ್ಲಿ "ನೆಹರು - ಲಿಯಾಖತ್ ಒಪ್ಪಂದ" ಆಯಿತು. ಈ ಒಪ್ಪಂದದಿಂದಾಗಿ ಇಬ್ಬರ ಭಿನ್ನಾಭಿಪ್ರಾಯಗಳು ಪರಾಕಾಷ್ಠತೆಯನ್ನು ಮುಟ್ಟಿತು. ಈ ಒಪ್ಪಂದಕ್ಕೆ ಸಹಿ ಹಾಕಬಾರದೆಂದು ತಡೆಯುವಲ್ಲಿ ಮುಖರ್ಜಿಯವರು ವಿಫಲರಾದರು, ಅವರು ಮಂತ್ರಿ ಮಂಡಲವನ್ನು ತ್ಯಜಿಸಲು ನಿರ್ಧರಿಸಿದರು. ನೆಹರುರವರ ನೀತಿಗಳನ್ನು ವಿರೋಧಿಸಿ ಸರ್ಕಾರದ ಹೊರಗಿನಿಂದ ಹೋರಾಡಲು ನಿರ್ಧರಿಸಿದರು. ಭಾರತ ಸರ್ಕಾರವು, ಮುಸ್ಲಿಂಮರಿಗೆ ಶಾಸನ ಸಭೆಗಳಲ್ಲಿ ಮತ್ತು ಸರ್ಕಾರದ ಸೇವೆಯಲ್ಲಿ ಇಂತಿಷ್ಟು ಸ್ಥಾನಗಳನ್ನು ಕಾದಿರಿಸಬೇಕು ಎಂಬುದೇ ನೆಹರೂ - ಲಿಯಾಖತ್ ಒಪ್ಪಂದದ ಸಾರಾಂಶ. ಶ್ಯಾಮ್ ಪ್ರಸಾದ್‌ರವರ ವಿರೋಧದ ಪರಿಣಾಮವಾಗಿ ಈ ವಿಧಿಗಳು ಪರಿಷ್ಕೃತ ಒಪ್ಪಂದದಲ್ಲಿ ಸೇರಲಿಲ್ಲ.

1950ರ 19ನೇ ಏಪ್ರಿಲ್‌ನಲ್ಲಿ ಅವರು ಸಂಸತ್‌ನಲ್ಲಿ ತಮ್ಮ ರಾಜೀನಾಮೆಯನ್ನು ಘೋಷಿಸಿ ಮಾಡಿದ ಹೇಳಿಕೆ ಬಹಳ ಘನತೆಯಿಂದ ತುಂಬಿತ್ತು. ಭಾರತ ಮತ್ತು ಪಾಕಿಸ್ತಾನದ ನಡುವೆ ಕೆಟ್ಟ ಸಂಬಂಧ ಇದ್ದುದನ್ನು ಅವರ ರಾಜೀನಾಮೆ ಎತ್ತಿ ತೋರಿಸಿತ್ತು. ನೆಹರು - ಲಿಯಾಖತ್ ಒಪ್ಪಂದವು, ಯಾವ ಸಮಸ್ಯೆಗಳನ್ನೂ ಪರಿಹರಿಸುವುದಿಲ್ಲ ಎಂಬುದಕ್ಕೆ ಅವರು 1950ರಲ್ಲಿ ಯಾವ ಕಾರಣಗಳನ್ನು ಕೊಟ್ಟಿದ್ದರೋ ಅವುಗಳಲ್ಲಿ ಈಗಲೂ ಯಾವ ಬದಲಾವಣೆಯೂ ಆಗಿಲ್ಲ.

### ಜನಸಂಘದ ಆದ್ಯ ಪ್ರವರ್ತಕ :

ಮಂತ್ರಿ ಮಂಡಲವನ್ನು ತ್ಯಜಿಸಿದ ಮೇಲೆ ಶ್ಯಾಮ್ ಪ್ರಸಾದ್ ಮುಖರ್ಜಿಯವರು ತಮ್ಮ ಪ್ರಯತ್ನವನ್ನೆಲ್ಲಾ ಕೇಂದ್ರೀಕರಿಸಿ ಮತ್ತೊಂದು ರಾಜಕೀಯ ವೇದಿಕೆಯನ್ನು ಸ್ಥಾಪಿಸುವಲ್ಲಿ ನಿರತರಾದರು. ಆ ವೇದಿಕೆಯ ಮುಖಾಂತರ ಅವರು ತಮ್ಮ ಸಿದ್ಧಾಂತಗಳನ್ನು ಮಂಡಿಸಲು ಮುಂದಾದರು. ಅದೊಂದು ರಾಜಕೀಯ ವೇದಿಕೆಯಾಗಿತ್ತು. ಅವರು ಅದಾಗಲೇ, ಹಿಂದೂ ಮಹಾಸಭೆಯನ್ನು ತ್ಯಜಿಸಿದ್ದರು. ಎಲ್ಲ ಹಿಂದೂಗಳಿಗೂ ಮಹಾಸಭಾ ಮುಕ್ತವಾಗಿರಬೇಕು, ಜಾತಿ ಮತ ಎಂಬ ಭೇದ ಮಾಡಬಾರದೆಂಬ ಅವರ ಸಲಹೆಗಳನ್ನು ಮಹಾಸಭೆ ಒಪ್ಪದಿದ್ದುದೇ ಅವರು ಹಿಂದೂ ಮಹಾ ಸಭೆಯನ್ನು ತ್ಯಜಿಸಲು ಮುಖ್ಯ ಕಾರಣ.

ಪ್ರತಿ ಪಕ್ಷಕ್ಕೆ ಅವರು ಒಂದು ಹೊಸ ರಾಷ್ಟ್ರೀಯ ನಾಯಕತ್ವದ ರೂಪ ಕೊಡಲು ನಿರ್ಧರಿಸಿದರು. ಅದು ರಾಷ್ಟ್ರೀಯ ಪಕ್ಷವಾಗಬೇಕೆಂದು ಅವರು ಬಯಸಿದ್ದರು, ಅವರ

ಪ್ರಯತ್ನಗಳ ಫಲವಾಗಿ 1950ರ ಆಕ್ಟೋಬರ್‌ನಲ್ಲಿ ಭಾರತೀಯ ಜನಸಂಘವು ಉದಯವಾಯಿತು. ಈ ಪಕ್ಷವನ್ನು ಸಮರ್ಥ ರೀತಿಯಲ್ಲಿ ಮುನ್ನೆಯೆಸಲು ಅಧ್ಯಕ್ಷರನ್ನಾಗಿ ಶ್ಯಾಮ್ ಪ್ರಸಾದ್‌ರನ್ನೇ ಚುನಾಯಿಸಲಾಯಿತು. ಜನಸಂಘವು, ರಾಷ್ಟ್ರೀಯ ಶಕ್ತಿಗಳ ಮುಖವಾಣಿಯಾಗಬೇಕು ಮತ್ತು ಅಂಥ ಎಲ್ಲ ಶಕ್ತಿಗಳೂ ಈ ರಾಷ್ಟ್ರೀಯ ಸಂಘಟನೆಯ ಮುಖ್ಯ ವಾಹಿನಿಗೆ ಸೇರಿಕೊಳ್ಳುವುದಕ್ಕೆ ಅನುವು ಮಾಡಿಕೊಡುವ ವಿಶಾಲ ತಳಹದಿ ಜನಸಂಘಕ್ಕೆ ಇರಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಭಾರತಕ್ಕೆ ಹಾಗೂ ಭಾರತೀಯ ಭವ್ಯ ಪರಂಪರೆ ಮತ್ತು ಸಂಸ್ಕೃತಿಗೆ ನಿಷ್ಠೆಯುಳ್ಳ ಎಲ್ಲ ನಾಗರೀಕರಿಗೂ ಅದು ಮುಕ್ತವಾಗಿತ್ತು.

ನೂತನ ಪಕ್ಷದ ಅಗತ್ಯದ ಬಗ್ಗೆ ವಿವರಣೆ ನೀಡುತ್ತಾ ಅವರು "ಕಾಂಗ್ರೆಸ್ ಪಕ್ಷದ ಸರ್ವಾಧಿಕಾರೀ ಮನೋಭಾವಕ್ಕೆ ಸುಸಂಘಟಿತವಾದ ಪ್ರತಿಪಕ್ಷ ಇಲ್ಲದಿರುವುದೇ ಮುಖ್ಯ ಕಾರಣ. ಬಹುಮತ ಉಳ್ಳ ಪಕ್ಷಕ್ಕೆ ಇದೊಂದೇ ಆರೋಗ್ಯಕರವಾದ ನಿರ್ಬಂಧ. ಪ್ರತಿ ಪಕ್ಷ ಇದ್ದರೆ, ರಾಷ್ಟ್ರಕ್ಕೆ ಪರ್ಯಾಯ ಸರ್ಕಾರ ಕೊಡಬಲ್ಲದು" ಎಂದು ಹೇಳಿದ್ದರು. ಶ್ಯಾಮ್ ಪ್ರಸಾದ್‌ರವರು ತಮ್ಮ ಉಳಿದ ಜೀವನವನ್ನು ಭಾರತೀಯ ಜನ ಸಂಘವನ್ನು ಸುಸಂಘಟಿತವಾಗಿ ಕಟ್ಟಲು ಮತ್ತು ಅದನ್ನು ಆಗಿನ ಆಡಳಿತ ಪಕ್ಷಕ್ಕೆ ಪರ್ಯಾಯವಾಗಿ ಬೆಳೆಸಲು ಮುಡುಪಾಗಿಟ್ಟರು.

ಸಂಸದೀಯ ಪಟುವಾಗಿ :

ಶ್ಯಾಮ್ ಪ್ರಸಾದ್ ಮುಖರ್ಜಿಯವರು 1952ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಲೋಕಸಭೆಗೆ ಸ್ಪರ್ಧಿಸಿ ಗೆದ್ದರು. ಜನಸಂಘದಿಂದ ಸ್ಪರ್ಧಿಸಿದ್ದ ಉಮೇದುವಾರರಲ್ಲಿ ಕೇವಲ ಇಬ್ಬರು ಮಾತ್ರ ಗೆದ್ದಿದ್ದರು. ಆದರೆ, ಇದರಿಂದ ಅವರು ಧೃತಿಗೆಡಲಿಲ್ಲ, ಅಧೀರರಾಗಲಿಲ್ಲ.

ಅದೇ ಮೊಟ್ಟ ಮೊದಲ ಚುನಾಯಿತ ಲೋಕಸಭೆ, ಪ್ರತಿ ಪಕ್ಷಗಳಲ್ಲಿದ್ದವರಲ್ಲಿ ಧೈರ್ಯದಿಂದ ಎದ್ದು ನಿಂತು ವಾದಿಸುತ್ತಿದ್ದವರೆಂದರೆ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿ ಯವರೊಬ್ಬರೇ. ಅವರ ಸ್ನೇಹಿತರು ಮತ್ತು ಪ್ರತಿಪಕ್ಷದವರೂ ಸಹ ಅವರ ಮಾತುಗಳನ್ನು ಗಮನವಿಟ್ಟು ಆಲಿಸುತ್ತಿದ್ದರು. ಭಾರತೀಯ ಜನ ಸಂಘದ ಜೊತೆಗೆ ಅವರು ಇನ್ನೂ ಹಲವು ಸಣ್ಣಪುಟ್ಟ ಪ್ರತಿ ಪಕ್ಷಗಳನ್ನು ಎಂದರೆ, ಒರಿಸ್ಸಾದ ಗಣತಂತ್ರ ಪರಿಷದ್, ಪಂಜಾಬಿನ ಅಕಾಲಿದಳ, ಹಿಂದೂ ಮಹಾಸಭಾ ಮತ್ತು ಅನೇಕ ಪಕ್ಷೇತರರನ್ನು ಒಗ್ಗೂಡಿಸಿ "ನ್ಯಾಷನಲ್ ಡೆಮೊಕ್ರೆಟಿಕ್ ಪಾರ್ಟಿ" ಯನ್ನು ರಚಿಸಿದರು. ಆ ಪಾರ್ಟಿಗೆ ಅವರೇ ನಾಯಕರಾಗಿ ಚುನಾಯಿತರಾದರು. ಆ ಎಲ್ಲ ಪಕ್ಷಗಳೂ, ಶ್ಯಾಮ್ ಪ್ರಸಾದ್‌ರನ್ನು ತಮ್ಮ ಪ್ರಮುಖ ವಕ್ತಾರನೆಂದೇ ಪರಿಗಣಿಸಿದ್ದವು. ಎಲ್ಲ ಪ್ರಮುಖ ಪ್ರಶ್ನೆಗಳಿಗೆ ಪ್ರತಿ ಪಕ್ಷದ ಪರವಾಗಿ ಉತ್ತರಿಸುವ

ಅಧಿಕಾರ ನೀಡಿದ್ದವು. ಆಡಳಿತ ಪಕ್ಷವು ಸಹ ಇವರನ್ನು ಪ್ರತಿ ಪಕ್ಷಗಳ ಅನಧಿಕೃತ ನಾಯಕನೆಂದೇ ಪರಿಗಣಿಸಿತ್ತು.

ತಮ್ಮ ವ್ಯಕ್ತಿತ್ವ ಮತ್ತು ತೀಕ್ಷ್ಣ ಬುದ್ಧಿಯಿಂದಾಗಿ ಅವರು ಉತ್ತಮ ರಾಜನೀತಿ ನಿಪುಣನೆಂದು ಪ್ರಖ್ಯಾತಿ ಪಡೆದಿದ್ದರು. ಅವರ ಮಾತಿನ ಮೋಡಿ, ಮತ್ತು ಅವರಿಗಿದ್ದ ಸಂಸದೀಯ ಕೌಶಲ್ಯದಿಂದಾಗಿ ಅವರು ಸರ್ಕಾರದ ನಿಜವಾದ ಎದುರಾಳಿ ಎನಿಸಿದ್ದರು. ಸಂಸತ್ತಿನ ಮುಂದೆ ಬರುತ್ತಿದ್ದ ಸಮಸ್ಯೆಗಳ ಬಗ್ಗೆ ಅವರಿಗಿದ್ದ ಆಳವಾದ ಜ್ಞಾನ ಮತ್ತು ಆ ವಿಷಯಗಳ ಬಗ್ಗೆ ಅವರು ಮುಂಡಿಸುತ್ತಿದ್ದ ವಿಚಾರಧಾರೆಯನ್ನು ಕಂಡ ಟ್ರೆಜರಿ ಬೆಂಚ್‌ನವರು ಅವರನ್ನು ತುಂಬಾ ಗೌರವಿಸುತ್ತಿದ್ದರು. ಆಡಳಿತ ಪಕ್ಷದ ನೀತಿ, ವ್ಯವಹಾರಗಳನ್ನು ಒಳಹೊಕ್ಕು ನೋಡುವ ಜಾಣ್ಮೆ ಅವುಗಳ ಬಗ್ಗೆ ಸಮರ್ಥವಾಗಿ, ಸುಲಲಿತವಾಗಿ ವಿಚಾರಗಳನ್ನು ಮಂಡಿಸುತ್ತಿದ್ದರೀತಿ ನೋಡಿದವರಿಗೇ ಗೊತ್ತು.

"ದಿ ಟೈಂಸ್ ಆಫ್ ಇಂಡಿಯಾ" ಪತ್ರಿಕೆಯು "ಸರ್ದಾರ್ ಪಟೇಲರ ಉಜ್ವಲ ವ್ಯಕ್ತಿತ್ವ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿಯವರ ಮೇಲೆ ಬಿದ್ದಿದೆ" ಎಂದು ಬರೆದಿತ್ತು. ಸರ್ದಾರ್ ಪಟೇಲರು ಸರ್ಕಾರದಲ್ಲಿದ್ದುಕೊಂಡೇ ನೆಹರೂ ಸರ್ಕಾರದ ಮೇಲೆ ಯಾವ ರೀತಿಯಲ್ಲಿ ಹಿತಮಿತವಾದ ಹಾಗೂ ಪ್ರತಿಬಂಧಕ ರೀತಿಯ ಪ್ರಭಾವ ಬೀರುತ್ತಿದ್ದರೋ ಹಾಗೆಯೇ ಮುಖರ್ಜಿಯವರು ಹೊರಗಿದ್ದುಕೊಂಡೇ ಆ ರೀತಿಯ ಪ್ರಭಾವ ಬೀರುತ್ತಿದ್ದುದನ್ನು ಗಮನಿಸಿದರೆ ನಿಜಕ್ಕೂ, ಅದು ಮುಖರ್ಜಿಯವರಿಗೆ ಆ ಪತ್ರಿಕೆಯಿಂದ ಸಂದ ಗೌರವ.

ಅವರಲ್ಲಿದ್ದ ರಚನಾತ್ಮಕ ಮತ್ತು ರಾಷ್ಟ್ರೀಯ ಭಾವನೆಯ ಪ್ರವೃತ್ತಿ ಮತ್ತು ಎಲ್ಲ ರಾಷ್ಟ್ರ ವಿರೋಧಿ ನೀತಿಗಳು ಮತ್ತು ಪ್ರವೃತ್ತಿಗಳನ್ನು ಅವರು ದೃಢ ಸಂಕಲ್ಪದಿಂದ ವಿರೋಧಿಸುತ್ತಿದ್ದ ಚಾತುರ್ಯ, ಅವರನ್ನು ರಾಷ್ಟ್ರದ ಸ್ವಾತಂತ್ರ್ಯದ ಮತ್ತು ಪ್ರಜಾಪ್ರಭುತ್ವದ ರಕ್ಷಕನಾನ್ನಾಗಿ ರೂಪಿಸಿದ್ದವು. ಸಂಸತ್ತಿನಲ್ಲಿ ಅವರು ಪ್ರತಿಪಕ್ಷದ ನಾಯಕನಾಗಿ ನಿರ್ವಹಿಸುತ್ತಿದ್ದ ರೀತಿ ಅವರಿಗೆ "ಸಂಸತ್ತಿನ ಸಿಂಹ" ವೆಂಬ ಪ್ರಶಂಸೆಗಳಿಸಿಕೊಟ್ಟಿತ್ತು.

**ಭಾರತದ ಏಕತೆಗಾಗಿ ದುಡಿದ ಹುತಾತ್ಮ :**

ಈ ಮಹಾನ್ ರಾಜನೀತಿಜ್ಞನ ಸಂಸದೀಯ ಜೀವನ ಹಾಗೂ ಸಂಸದೀಯ ಪಟ್ಟುತ್ವ 1953ರಲ್ಲಿ ಪರಾಕಾಷ್ಠತೆಗೆ ಮುಟ್ಟಿತ್ತು. ಅಂದಿನ ದಿನಗಳಲ್ಲಿ ನಡೆಯುತ್ತಿದ್ದ ಪ್ರತ್ಯೇಕತೆ ಚಟುವಟಿಕೆಗಳನ್ನು ಹತ್ತಿಕ್ಕುವ ದೃಷ್ಟಿಯಿಂದ ಅವರ ಮನಸ್ಸು ಜಮ್ಮು ಮತ್ತು ಕಾಶ್ಮೀರದ ಸಮಸ್ಯೆಗಳನ್ನು ಪರಿಹರಿಸುವತ್ತ ಪೂರ್ಣ ಮಗ್ನವಾಗಿತ್ತು. ಭಾರತದಲ್ಲಿ ಜಮ್ಮು ಮತ್ತು ಕಾಶ್ಮೀರವನ್ನು ವಿಲೀನಗೊಳಿಸಬೇಕೆಂದು ಮತ್ತು ಇದೇ ರಾಜ್ಯಾಂಗ ಅನ್ವಯವಾಗಬೇಕೆಂದು ಒತ್ತಾಯಿಸುತ್ತಿದ್ದ ಜಮ್ಮು ಮತ್ತು ಕಾಶ್ಮೀರದ ಪರಿಷತ್ತಿನ ಬೇಡಿಕೆಯನ್ನು ಕೈಗೆತ್ತಿಕೊಂಡರು.

1952ರ ಆಗಸ್ಟ್‌ನಲ್ಲಿ ಮುಖರ್ಜಿಯವರು ಜಮ್ಮುಗೆ ಭೇಟಿಯನ್ನಿತ್ತಿದ್ದರು. ಒಮ್ಮೆ ಒಂದು ದೊಡ್ಡ ಸಭೆಯನ್ನು ಉದ್ದೇಶಿಸಿ, "ನಿಮಗೆ ಭಾರತ ರಾಜ್ಯಾಂಗ ಅನ್ವಯವಾಗುವಂತೆ ಮಾಡುತ್ತೇನೆ, ಇಲ್ಲವಾದರೆ ನಾನು ಪ್ರಾಣ ಕಳೆದುಕೊಳ್ಳಲೂ ಸಿದ್ಧನಿದ್ದೇನೆ" ಎಂದು ಘೋಷಿಸಿದರು. ಇವರ ಮಾತುಗಳು ಪ್ರವಾದಿಯ ನುಡಿಗಳಂತಿದ್ದವು. ಪುನಃ ಇವರು 1953ರ ಮೇ ನಲ್ಲಿ ಜಮ್ಮುಗೆ ಭೇಟಿ ನೀಡಲು ನಿಶ್ಚಯಿಸಿದರು. ಅಲ್ಲಿನ ಪರಿಸ್ಥಿತಿಯನ್ನು ಅರಿಯಬಯಸಿದರು. ಅವರ ಆರೋಗ್ಯ ಪರಿಸ್ಥಿತಿ ಚನ್ನಾಗಿರಲಿಲ್ಲ. ಅವರು ಹಿಂದೂಗಳ ಬಗೆಗೆ ಅತೀವ ಪ್ರೀತಿಯುಳ್ಳವರಾಗಿದ್ದರು. ಜಮ್ಮು ಮತ್ತು ಕಾಶ್ಮೀರ ಭಾರತದ ಒಕ್ಕೂಟದಲ್ಲಿ ಇರಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಆ ಉದ್ದೇಶಕ್ಕಾಗಿ ಅವರು ಜಮ್ಮುಗೆ ಧಾವಿಸಿದರು. ಅಲ್ಲಿ ಅವರನ್ನು ಬಂಧಿಸಲಾಯಿತು. ಸೆರೆಮನೆಯಲ್ಲಿ ಅವರು ತೀವ್ರವಾಗಿ ಅಸ್ವಸ್ಥರಾದರು. ಭಾರತದ ಏಕತೆಯ ಪ್ರತೀಕವಾಗಿ ಅಲ್ಲೇ ಅವರು ಹುತಾತ್ಮರಾದರು.

ಸಂತಾಪ ಸೂಚನೆ :

ಸಂಸತ್ತು, ರಾಜ್ಯ ಶಾಸನ ಸಭೆಗಳು, ಪತ್ರಿಕೆಗಳು ಮತ್ತು ರಾಜಕೀಯ ನಾಯಕರುಗಳು, ಸಾರ್ವಜನಿಕ ಮುಂದಾಳುಗಳು ಪಕ್ಷಭೇಧ ಮರೆತು ಅವರ ಮರಣದ ಬಗ್ಗೆ ಶೋಕಿಸಿದರು, ಆಗ್ನೇಯ ಏಷ್ಯಾದ ಬೌದ್ಧ ರಾಷ್ಟ್ರಗಳು ಸಹ ಇವರ ಮರಣದ ಬಗ್ಗೆ ಸಂತಾಪ ಸೂಚಿಸಿದವು ಅವರ ಸಾವು ರಾಷ್ಟ್ರಕ್ಕೆ ಅತೀವ ನಷ್ಟ, ಮಾತೃಭೂಮಿಯ ಸೇವೆಗಾಗಿ ತನ್ನನ್ನು ತಾನೇ ಅರ್ಪಿಸಿಕೊಂಡ ವ್ಯಕ್ತಿ ಎಂದು ಹೊಗಳಿದವು. ಲೋಕಸಭೆಯಲ್ಲಿ ಸಂತಾಪ ಸೂಚಿಸುತ್ತ ಆಗಿನ ಲೋಕ ಸಭಾಧ್ಯಕ್ಷರಾಗಿದ್ದ ಶ್ರೀಯುತ ಜಿ.ವಿ. ಮಾವಲಂಕರ್‌ರವರು :

"ಅವರು ನಮ್ಮ ರಾಷ್ಟ್ರದ ಮಹಾನ್ ದೇಶಭಕ್ತರಲ್ಲೊಬ್ಬರು, ರಾಷ್ಟ್ರೀಯ ಧ್ಯೇಯೋದ್ದೇಶಗಳಿಗೆ ಅವರು ಸಲ್ಲಿಸಿದ ಸೇವೆ ಬಹು ಅಮೂಲ್ಯವಾದುದು, ಅವರ ಅಗಲಿಕೆಯೇ ಒಂದು ದುರಂತ. ಅದು, ದೈವಚಿತ್ತ, ಅದನ್ನು ಯಾರು ತಾನೆ ಪಡೆಯಬ್ಬರು ? ಅವರ ಸಾಮರ್ಥ್ಯ, ಪ್ರಾಮಾಣಿಕತೆ, ವಿಷಯಗಳನ್ನು ಪ್ರಬುದ್ಧವಾಗಿ ನಿಭಾಯಿಸುತ್ತಿದ್ದ ಜಾಣ್ಮೆ ವಾಕ್ಪಟುತ್ವ, ಇವೆಲ್ಲವುಗಳಿಗಿಂತ ಮಿಗಿಲಾಗಿ ಅವರ ದೇಶಪ್ರೇಮ, ಜೊತೆಗೆ ತನ್ನ ನಾಡಿನ ಜನತೆಯ ಬಗೆಗೆ ಅವರಿಗಿದ್ದ ಅತ್ಯಂತ ಪ್ರೀತಿ, ಇವೆಲ್ಲಾ ಗುಣಗಳಿಂದಾಗಿ ಅವರೊಬ್ಬ ಅತ್ಯಂತ ಗೌರವಾನ್ವಿತ ವ್ಯಕ್ತಿ" - ಎಂದು ಕೊಂಡಾದಿದ್ದರು.

ಆಗಿನ ಪ್ರಧಾನ ಮಂತ್ರಿಗಳಾಗಿದ್ದ ಜವಾಹರ್ ಲಾಲ್ ರವರು ಲೋಕಸಭೆಯಲ್ಲಿ ಸಭಾನಾಯಕರಾಗಿದ್ದರು. ಶ್ಯಾಮ್ ಪ್ರಸಾದ್‌ರವರ ಸಾವಿನ ಬಗ್ಗೆ ಮಾತನಾಡುತ್ತಾ, "ಅವರ ಸಾವು ನಿಜಕ್ಕೂ ದುರದೃಷ್ಟ" ಎಂದರು. ನೆಹರುರವರು ಅವರ ವ್ಯಕ್ತಿತ್ವದ ಬಗ್ಗೆ ಹೊಗಳುತ್ತಾ "ಲೋಕಸಭೆಯ ಪ್ರಮುಖ ವ್ಯಕ್ತಿಗಳಲ್ಲಿ ಅವರು ಒಬ್ಬರಾಗಿದ್ದರು ಮತ್ತು ಪ್ರತಿಪಕ್ಷದ ನಾಯಕರಾಗಿ

ಅವರು ಲೋಸಭೆಯ ಕಾರ್ಯಕಲಾಪಗಳಲ್ಲಿ ಪ್ರಮುಕ ಪಾತ್ರ ವಹಿಸುತ್ತಿದ್ದರು." ಎಂದು ಹೊಗಳಿದರು.

ಹಲವಾರು ವಿಷಯಗಳ ಬಗೆಗೆ ತಮ್ಮ ಮತ್ತು ಮುಖರ್ಜಿಯವರ ನಡುವೆ ಭಿನ್ನಾಭಿಪ್ರಾಯ ಇದ್ದ ಬಗ್ಗೆ ನೆಹರುರವರು ಮಾತನಾಡಿ :

"ನಾವು ಒಟ್ಟಿಗೇ ಕೆಲಸ ಮಾಡಿದ್ದೇವೆ. ಭಿನ್ನಾಭಿಪ್ರಾಯಗಳೂ ಇದ್ದವು. ಆದರೂ, ನಮ್ಮಿಬ್ಬರಲ್ಲಿ ಪರಸ್ಪರ ಗೌರವಿತ್ತು. ಭಿನ್ನಾಭಿಪ್ರಾಯಗಳಿದ್ದಾಗ್ಯೂ, ನಾನು ಮತ್ತು ಅವರು ಜನತೆಯ ಒಳಿತಿಗಾಗಿ ಕೆಲಸ ಮಾಡಿದ್ದೇವೆ".

"ಡಾ|| ಮುಖರ್ಜಿಯವರ ಜೊತೆ ಸರ್ಕಾರದಲ್ಲಿ ಅನೇಕ ವರ್ಷಗಳ ಕಾಲ ಕೆಲಸ ಮಾಡಿದ್ದು ನನ್ನ ಭಾಗ್ಯ, ತದನಂತರ ಅವರು ಪ್ರತಿಪಕ್ಷದಲ್ಲಿದ್ದರು, ಅನೇಕ ವಿಷಯಗಳಲ್ಲಿ ನನಗೂ ಅವರಿಗೂ ಭಿನ್ನಾಭಿಪ್ರಾಯಗಳಿದ್ದವು. ಕೆಲವು ವಿಷಯಗಳಲ್ಲಿ ಒಮ್ಮತದ ಅಭಿಪ್ರಾಯಗಳು ಇರುತ್ತಿದ್ದವು. ಅವರ ಕೊನೆ ದಿನಗಳಲ್ಲಿ ಉದ್ಭವಿಸಿದ್ದ ಒಂದು ವಿಶಿಷ್ಟ ಪ್ರಸಂಗದಿಂದಾಗಿ ಕೊನೆ ಕೊನೆಯಲ್ಲಿ ನನಗೂ ಅವರಿಗೂ ತುಂಬಾ ಬೇಧ ಭಾವನೆಗಳು ಉತ್ಪನ್ನವಾದವು, ಅದಕ್ಕಾಗಿ ನಾನು ತುಂಬಾ ಪಶ್ಚಾತ್ತಾಪಪಟ್ಟಿದ್ದೇನೆ. ಅದರಿಂದ ನನಗೆ ದುಃಖವೂ ಆಗಿದೆ, ಅವರ ವ್ಯಕ್ತಿತ್ವದಿಂದ ವಂಚಿತರಾಗಿದ್ದೇವೆ, ರಾಷ್ಟ್ರಕ್ಕೆ ಆತ ಗಮನಾರ್ಹವಾದ ಸೇವೆ ಸಲ್ಲಿಸಿದ್ದಾರೆ. ಅವರು ವಯಸ್ಸಿನಲ್ಲಿ ಕಿರಿಯವರಾಗಿದ್ದರು. ಆತನ ಮುಂದಿನ ಭವಿಷ್ಯ ಅತ್ಯಂತ ಉಜ್ವಲವಾಗಿತ್ತು. ಅವರು ಕಣ್ಮರೆಯಾದುದು ದುರ್ದೈವ" ಎಂದು ತಮ್ಮ ಸಂತಾಪ ವ್ಯಕ್ತಪಡಿಸಿದರು.

## ಗ್ರಂಥಋಣ


1. ಮಧೋಕ್, ಬಲರಾಜ್

   ಪೋರ್‌ಟ್ರೈಟ್ ಆಫ್ ಎ ಮಾರ್‌ಟೈರ್, ಬಾಂಬೆ ಜೈ ಕೊ ಪಬ್ಲಿಷಿಂಗ್ ಹೌಸ್ 1969.

2. ಸೇನೆ ಎಸ್. ಪಿ (ಸಂ.)

   ಡಿಕ್ಷನರಿ ಆಫ್ ನ್ಯಾಷನಲ್ ಬಯಾಗ್ರಫೀಸ್, ವಾಲ್ಯೂಂ III, ಕಲ್ಕತ್ತ ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್ 1973.

3. ವರ್ಮ ವಿ.ಪಿ. (ಎಡಿಟೆಡ್) ಮಾಡ್ರನ್ ಇಂಡಿಯನ್ ಪೊಲಿಟಿಕಲ್ ಥಾಟ್, ಆಗ್ರಾ: ಎಜುಕೇಷನಲ್ ಪಬ್ಲಿಷರ್ಸ್ 1967.

4. ರಂಗಾ, ಎನ್.ಜಿ. ಡಿಸ್ಟಿಂಗ್ವಿಷ್ಡ್ ಅಕ್ಟೆಯ್‌ನ್‌ಟನ್‌ಸ್‌ಸ್, ಹೈದರಾಬಾದ್, ದೇಸಿ ಬುಕ್ ಹೌಸ್ 1976.

5. ಲೋಕಸಭಾ ಡಿಬೆಟ್ಸ್, 3 ಆಗಸ್ಟ್ 1953.

# ಡಾ॥ ಮುಖರ್ಜಿ ಮತ್ತು ಕಾಶ್ಮೀರ

## ಪ್ರೊ. ಬಲರಾಜ್ ಮಧೋಕ್ *

ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿ (ಜುಲೈ 6, 1901, ಜೂನ್ 23, 1953)ಯವರು ಅತ್ಯಂತ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾಗಿದ್ದರು. ಶ್ರೇಷ್ಠ ರಾಜ ನೀತಿಜ್ಞ, ಭಾರತದ ಪ್ರತಿಭಾವಂತ ಸಂಸದೀಯ ಪಟು ಆಗಿದ್ದರು. ಭಾರತ ಅತ್ಯಂತ ಕ್ಲಿಷ್ಟಕರವಾದ ಪರಿಸ್ಥಿತಿಯಲ್ಲಿದ್ದಾಗ ಅವರು ರಾಷ್ಟ್ರೀಯ ಜೀವನದಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿದರು. ಭಾರತದ ರಾಜಕೀಯಕ್ಕೆ ಮತ್ತು ರಾಷ್ಟ್ರವ್ಯವಸ್ಥೆಗೆ ಅವರ ಕೊಡುಗೆ ಅಪಾರ. ಭಾರತದ ಇತಿಹಾಸದಲ್ಲಿ ಅಳಿಸಲಾಗದ ಸ್ವಂತಿಕೆಯನ್ನು ಮೂಡಿಸಿದರು.

ಡಾ॥ ಮುಖರ್ಜಿಯವರು ತಮ್ಮ ಸಾರ್ವಜನಿಕ ಜೀವನವನ್ನು ಕಲ್ಕತ್ತಾ ವಿಶ್ವವಿದ್ಯಾನಿಲಯು ಉಪಕುಲಪತಿಗಳಾಗಿ 1934ರಲ್ಲಿ ಪ್ರಾರಂಭಿಸಿದರು. ಆ ವಿಶ್ವವಿದ್ಯಾನಿಲಯದ ಅತ್ಯಂತ ಕಿರಿಯ ಉಪಕುಲಪತಿಗಳಾಗಿದ್ದರು. ಆ ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಅಸ್ಸಾಂ, ಬಂಗಾಳ ಮತ್ತು ಒರಿಸ್ಸಾ ಸೇರಿದ್ದವು. ಅವರು ನ್ಯಾಷನಲಿಸ್ಟ್ ಪಾರ್ಟಿ ಮತ್ತು ಫಜಲ್-ಉಲ್-ಹಕ್ ರವರ ಕೃಷಿಕ್ ಪ್ರಜಾಪಾರ್ಟಿಗಳನ್ನು ಒಗ್ಗೂಡಿಸಿದ ಶಿಲ್ಪಿ, 1940ರಲ್ಲಿ ಈ ಪಾರ್ಟಿಗಳು ಮುಸ್ಲಿಂಲೀಗ್‌ನ್ನು ಆಡಳಿತದಿಂದ ಹೊರಹಾಕಿದವು, ಸಂಯುಕ್ತ ಬಂಗಾಳದಲ್ಲಿ, ರಾಷ್ಟ್ರೀಯ ಸರ್ಕಾರದ ರಚನೆಗೆ ಕಾರಣರಾದರು, ಫಜಲ್-ಉಲ್-ಹಕ್‌ರವರ ಆ ಮಂತ್ರಿ ಮಂಡಲದಲ್ಲಿ ಆರ್ಥಿಕ ಮಂತ್ರಿಗಳಾಗಿದ್ದ ಅವರು 1942ರಲ್ಲಿ ಮಂತ್ರಿ ಮಂಡಲಕ್ಕೆ ರಾಜೀನಾಮೆಯನ್ನಿತ್ತರು.

ಲಾರ್ಡ್ ಲಿನ್‌ಲಿತ್ ಗೋರವರು ಭಾರತದ ಗೌರ್ನರ್ ಜನರಲ್ ಆಗಿದ್ದಾಗ, "ಭಾರತ ಬಿಟ್ಟು ತೊಲಗಿ" ಚಳುವಳಿಯ ಕಾಲದಲ್ಲಿ ಗೌರ್ನರವರ ರಾಜ್ಯಭಾರ ಅತಿ ಭಯಾನಕ ವಾಗಿದ್ದರಿಂದ ಮುಖರ್ಜಿಯವರು ಹೋರಾಟಕ್ಕಿಳಿದಿದ್ದರು. ಕಾಂಗ್ರೆಸ್‌ನ ಮುಖ್ಯ ನೇತಾರರೆಲ್ಲಾ ಸೆರೆಮನೆಯಲ್ಲಿದ್ದುದರಿಂದ, ಆ ಕಷ್ಟಕರ ಪರಿಸ್ಥಿತಿಯಲ್ಲಿ ಮುಖರ್ಜಿಯವರು ಭಾರತದ ರಾಷ್ಟ್ರೀಯತೆಯ ವಕ್ತಾರರಾಗಿ ಕಾರ್ಯಪ್ರವೃತ್ತರೂ ಆದರು. 1943ರಲ್ಲಿ ಬಂಗಾಳ ದೇಶದಲ್ಲಿ ಮಾನವ ನಿರ್ಮಿತ ಬರಗಾಲವು ಬಂಗಾಳದ ಜನರನ್ನು ತತ್ತರಿಸುವಂತೆ ಮಾಡಿತು. ಆಗ ಮುಖರ್ಜಿಯವರು ಕಷ್ಟದಲ್ಲಿದ್ದ ಬಂಗಾಳದ ಜನರ ಸೇವೆ ಮಾಡತೊಡಗಿದರು. ರಾಷ್ಟ್ರೀಯ

---

* ಪ್ರೊ. ಬಲರಾಜ್ ಮಧೋಕ್, ಮಾಜಿ ಸಂಸತ್ ಸದಸ್ಯರು ಹಾಗೂ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿಯವರ ನಿಕಟವರ್ತಿಗಳು.

ಮಟ್ಟದಲ್ಲಿ ಜನ ಅವರನ್ನು ಗುರುತಿಸತೊಡಗಿದರು. ಅವರು ಅತ್ಯಂತ ಜನಪ್ರಿಯ ವ್ಯಕ್ತಿ ಎನಿಸಿದರು. ನಾಡಿನಾದ್ಯಂತ ಪ್ರಖ್ಯಾತಿ ಗಳಿಸಿದರು.

ತದನಂತರ, ಡಾ|| ಮುಖರ್ಜಿಯವರು ಹಿಂದೂ ಮಹಾಸಭೆಯ ನಾಯಕತ್ವವನ್ನು ವಹಿಸಿ ಅದರ ಮುಖಾಂತರ ಅಖಂಡ ಭಾರತದ ಒಕ್ಕೂಟದ ಕಲ್ಪನೆಯನ್ನು ಕ್ಯಾಬಿನೆಟ್ ಮಿಷನ್ನಿನ ಮುಂದೆ ತರ್ಕಬದ್ಧವಾಗಿ ಮಂಡಿಸಿದರು. ಆದರೆ, ಪೂನಾ ನಿರ್ಣಯದಂತೆ ವಿಭಜನೆಗೆ, ಕಾಂಗ್ರೆಸ್ ತತ್ವಶಃ ಒಪ್ಪಿರುವುದಾಗಿಯೂ ಮತ್ತು ಮೂಲತಃ "ಭಾರತದಲ್ಲಿ ವಿಲೀನಗೊಳ್ಳಲು ಇಷ್ಟಪಡದ ಸಂಸ್ಥಾನವನ್ನು ಬಲಾತ್ಕಾರ ಮಾಡಿ ಉಳಿಸಿಕೊಳ್ಳುವ ಇಚ್ಛೆ ಇಲ್ಲವೆಂದು" ಕಾಂಗ್ರೆಸ್ ಸಂಸ್ಥೆ ಅಹಿತಕರ ನಿರ್ಧಾರ ತೆಗೆದುಕೊಂಡಿರುವುದನ್ನು ಲಾಡ್ ಪೆಥಿಕ್ ಲಾರೆನ್ಸ್ ಅವರು ಮುಖರ್ಜಿಯವರಿಗೆ ಹೇಳಿದಾಗ ಅವರ ಕಲ್ಪನೆ ಮೂಲೆ ಗುಂಪಾಯಿತು.

ಮೂಲ ಯೋಜನೆಯಂತೆ ಇಡೀ ಪಂಜಾಬ್ ಮತ್ತು ಬಂಗಾಳವನ್ನು ಪಾಕಿಸ್ತಾನಕ್ಕೆ ಕೊಡಬೇಕಾಗಿತ್ತು. ಡಾ|| ಮುಖರ್ಜಿಯವರು ತಮ್ಮ ಶಕ್ತಿ ಸಾಮರ್ಥ್ಯವನ್ನೆಲ್ಲಾ ಉಪಯೋಗಿಸಿ ಹಿಂದೂಗಳು ಅಧಿಕವಾಗಿರುವ ಪಂಜಾಬ್ ಮತ್ತು ಬಂಗಾಳ ಪ್ರಾಂತ್ಯಗಳ ಭಾಗಗಳು ಭಾರತದಲ್ಲೇ ಉಳಿಯುವಂತೆ ಪ್ರಯತ್ನಿಸಿದರು. "ಜಿನ್ನಾರವರು ಭಾರತವನ್ನು ವಿಭಜಿಸಿದರು, ನಾನು ಪಾಕಿಸ್ತಾನವನ್ನು ವಿಭಜಿಸಿದೆ" ಎಂದು ಘೋಷಿಸಿದರು.

ಅವರು 1946ರಲ್ಲಿ ಭಾರತದ ರಾಜ್ಯಾಂಗ ರಚನಾ ಸಭೆಗೆ ಆಯ್ಕೆಯಾದರು. 1947ರ 15ರಲ್ಲಿ ಮೊಟ್ಟಮೊದಲ ರಾಷ್ಟ್ರೀಯ ಸರ್ಕಾರದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿಗಳಾದರು, ಸ್ವತಂತ್ರ ಭಾರತದ ಪ್ರಾರಂಭದ ವರ್ಷಗಳಲ್ಲಿ ಮಂತ್ರಿಯಾಗಿ ಅವರ ಪಾತ್ರ ಸ್ಮರಣೀಯವಾದುದು. ಭಾರತದ ಕೈಗಾರಿಕಾ ನೀತಿಗೆ ತಳಹದಿಯನ್ನು ಹಾಕಿದವರೇ ಅವರು. 1950ರ ಏಪ್ರಿಲ್ 8 ರಿಂದ ಮುಖರ್ಜಿಯವರ ಜೀವನದಲ್ಲಿ ಅತ್ಯಂತ ಉಜ್ವಲವಾದ ಕಾಲ ಪ್ರಾರಂಭವಾಯಿತು. ಪಾಕಿಸ್ಥಾನದ ಬಗ್ಗೆ ತಳೆದಿದ್ದ ನಿಲುವಿನ ವಿರುದ್ಧ ಸಿಡಿದೆದ್ದು ಮಂತ್ರಿ ಮಂಡಲಕ್ಕೆ ರಾಜೀನಾಮೆ ಸಲ್ಲಿಸಿದರು. ನೀತಿಯ ವಿಚಾರದ ಮೇಲೆ ಮಂತ್ರಿ ಪದವಿಯನ್ನೇ ತ್ಯಜಿಸಿದ ಸ್ವತಂತ್ರ ಭಾರತದ ಮೊಟ್ಟಮೊದಲ ಮಹಾನ್ ವ್ಯಕ್ತಿಅವರು ; ಸಂಸದೀಯ ಪ್ರಜಾಪ್ರಭುತ್ವದ ಉತ್ತಮ ಪರಂಪರೆಯನ್ನು ಎತ್ತಿ ಹಿಡಿದು ಇತರರಿಗೆ ಮೇಲ್ಪಂಕ್ತಿಯಾದರು.

ಸರ್ಕಾರಕ್ಕೆ ರಾಜೀನಾಮೆ ಕೊಟ್ಟ ತರುವಾಯ ಅವರು, ಬಲಪಂಥೀಯ ಆಡಳಿತಾ ರೂಢ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯವಾಗಿ ರಾಷ್ಟ್ರೀಯ ಪಕ್ಷವನ್ನು ಕಟ್ಟುವಲ್ಲಿ ಶ್ರಮಿಸತೊಡಗಿದರು. ಸರ್ದಾರ್ ಪಟೇಲರ ಮರಣಾನಂತರ ಕಾಂಗ್ರೆಸ್ ಪಕ್ಷ ಪಂಡಿತ್ ನೆಹರುರವರ ನಾಯಕತ್ವದಲ್ಲಿ ಎಡ ಪಂಥೀಯ ಪಕ್ಷವಾಗಿ ರೂಪುಗೊಂಡಿತ್ತು. ಭಾರತೀಯ ಜನಸಂಘವು ದೇಶಕ್ಕೆ ಕೊಟ್ಟ ಅವರ ಅತ್ಯುತ್ತಮವಾದ ಕೊಡುಗೆ, ಈ ಪಕ್ಷವು 1951ರ

ಅಕ್ಟೋಬರ್ 21ರಲ್ಲಿ ಅಸ್ತಿತ್ವಕ್ಕೆ ಬಂತು. ಅದೂ ಡಾ|| ಮುಖರ್ಜಿಯವರ ನಾಯಕತ್ವದಲ್ಲಿ ಮತ್ತು ಅವರ ಪರಿಶ್ರಮದ ಫಲರಾಗಿ ಎಂದರೆ ಉತ್ಪ್ರೇಕ್ಷೆಯಲ್ಲ.

ಮೊಟ್ಟಮೊದಲ ಲೋಕಸಭಾ ಚುನಾವಣೆಯಲ್ಲಿ ಮುಖರ್ಜಿಯವರು ಜನಸಂಘದ ಅಭ್ಯರ್ಥಿಯಾಗಿ ದಕ್ಷಿಣ ಕಲ್ಕತ್ತಾ ಕ್ಷೇತ್ರದಿಂದ ಸ್ಪರ್ಧಿಸಿ ಲೋಕಸಭೆಗೆ ಚುನಾಯಿತರಾದರು. ಚುನಾಯಿತರಾದ ಒಂದು ತಿಂಗಳಲ್ಲೇ ಅವರು ಜನಸಂಘ, ಹಿಂದೂ ಮಹಾಸಭಾ, ರಾಮ ರಾಜ್ಯ ಪರಿಷತ್, ಗಣತಂತ್ರ ಪರಿಷತ್ ಮತ್ತು ಹಲವು ಪಕ್ಷೇತರ ಸದಸ್ಯರನ್ನು ಒಗ್ಗೂಡಿಸಿದರು. ಈ ಪಕ್ಷವನ್ನು ಸಾಮಾನ್ಯ ಕಾರ್ಯಕ್ರಮಗಳ ಆಧಾರದ ಮೇಲೆ "ನ್ಯಾಷನಲ್ ಡೆಮೊಕ್ರೆಟಿಕ್ ಪಾರ್ಟಿ" (ಎನ್.ಡಿ.ಪಿ) ಯಾಗಿ ರೂಪಿಸಿದರು. ಸೈದ್ಧಾಂತಿಕ ಆಧಾರದ ಮೇಲೆ ರಾಷ್ಟ್ರದಲ್ಲಿ ರಾಜಕೀಯ ಧೃವೀಕರಣದ ನಿಟ್ಟಿನಲ್ಲಿ ಇದೇ ಮೊಟ್ಟ ಮೊದಲ ಪ್ರಯತ್ನ. ಆಕಾಲದಲ್ಲಿ ಪ್ರತಿ ಪಕ್ಷದಲ್ಲಿ ಅತಿ ದೊಡ್ಡ ಪಕ್ಷವಾಗಿ ಎನ್. ಡಿ. ಪಿ. ಯು ಅಸ್ತಿತ್ವಕ್ಕೆ ಬಂದ ಪರಿಣಾಮವಾಗಿ ಡಾ|| ಮುಖರ್ಜಿಯವರು ಪ್ರತಿಪಕ್ಷದ ಸಮರ್ಥ ನಾಯಕರೆನಿಸಿದರು ಮತ್ತು ರಾಜಕೀಯದಲ್ಲಿ ತಮ್ಮ ಛಾಪನ್ನು ಒತ್ತಿದರು. ಪಂಡಿತ ನೆಹರುರವರಿಗೆ ಸರಿಸಮಾನವಾದ ಸಾಮರ್ಥ್ಯ ಉಳ್ಳ ವ್ಯಕ್ತಿ ಎನಿಸಿದರು.

ಅತ್ಯಂತ ಮೇಧಾವಿ ವ್ಯಕ್ತಿಯಾಗಿದ್ದುದರಿಂದಲೂ ಮತ್ತು ಆಡಳಿತದಲ್ಲಿ ಅಪಾರವಾದ ಅನುಭವವಿದ್ದುದರಿಂದಲೂ ಸಂಸದೀಯ ಸೂಕ್ಷ್ಮ ವ್ಯತ್ಯಾಸಗಳನ್ನು ಬೇಗ ಗ್ರಹಿಸುತ್ತಿದ್ದುದ ರಿಂದಲೂ ಅವರನ್ನು ಕಂಡರೆ ಟ್ರೆಜರಿ ಬೆಂಚಿನವರು ಸಹ ಹೆದರುತ್ತಿದ್ದರು.

ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿಷಯಗಳ ಬಗ್ಗೆ ಅವರಲ್ಲಿ ವಿಶಿಷ್ಟ ದೃಷ್ಟಿಕೋನ ಇತ್ತು. ಜಮ್ಮು ಮತ್ತು ಕಾಶ್ಮೀರವನ್ನು ಭಾರತದೊಡನೆ ವಿಲೀನ ಗೊಳಿಸುವ ಬಗ್ಗೆ, ಪಾಕಿಸ್ತಾನದಲ್ಲಿ ಉಳಿದಿದ್ದ ಹಿಂದೂಗಳ ಬಗ್ಗೆ ಮತ್ತು ಗಡಿಯಾಚೆಯಿಂದ ಬಂದ ಹಿಂದೂ ನಿರಾಶ್ರೀತರ ಬವಣೆ ಬಗ್ಗೆ ತುಂಬಾ ಕಾಳಜಿ ವ್ಯಕ್ತಪಡಿಸುತ್ತಿದ್ದರು.

ಡಾ|| ಮುಖರ್ಜಿಯವರು ಮೊದಲು ಕಾಶ್ಮೀರದ ವಿವಾದವನ್ನು ಪರಿಹರಿಸಲು ಶ್ರಮಿಸಿದರು. ತದನಂತರ ಪೂರ್ವ ಬಂಗಾಳದ ಹಿಂದೂಗಳ ಸಮಸ್ಯೆಯನ್ನು ಕೈಗೆತ್ತಿಕೊಳ್ಳಬಯಸಿದ್ದರು. ದೈವ ನಿಯಾಮಕ ಬೇರೆಯದೇ ಇತ್ತು.

ಅವರು ಜೀವಿತದ ಕೊನೆಯ ಹದಿನೈದು ತಿಂಗಳುಗಳ ತಮ್ಮ ಸಮಯವನ್ನೆಲ್ಲಾ, ಮುಖ್ಯವಾಗಿ ಜಮ್ಮು ಮತ್ತು ಕಾಶ್ಮೀರವು ಭಾರತದೊಡನೆ ವಿಲೀನವಾಗುವ ಧ್ಯೇಯಕ್ಕೆ ಅರ್ಪಿಸಿದರು, ಷೇಕ್ ಅಬ್ದುಲ್ಲಾರವರ ಪ್ರತ್ಯೇಕತೆ ನೀತಿಗಳು, ಜಮ್ಮುವಿನ ಮತ್ತು ಅದರಲ್ಲೂ ಲಢಖ್ ಜನತೆಯಲ್ಲಿ ಹಾಗೂ ಒಟ್ಟಾರೆ ರಾಷ್ಟ್ರೀಯತಾವಾದಿಗಳಲ್ಲಿ ಅಸಮಾಧಾನವನ್ನು ಷೇಕ್‌ರವರು ಪ್ರಚೋದಿಸುತ್ತಿದ್ದ ರೀತಿ ಡಾ|| ಮುಖರ್ಜಿಯವರು ಕಾಶ್ಮೀರ ವಿವಾದಕ್ಕೆ

ಆದ್ಯತೆ ಕೊಡುವಂತೆ ಮಾಡಿದವು. ಕಾಶ್ಮೀರ ವಿವಾದದ ಬಗ್ಗೆ ಅವರು ತಳೆದಿದ್ದ ಧೋರಣೆ, ರಾಷ್ಟ್ರೀಯ ಮತ್ತು ನ್ಯಾಯಸಮ್ಮತ ಪರಿಹಾರಕ್ಕಾಗಿ ಅವರು ಮಾಡಿದ ಪ್ರಯತ್ನಗಳು ಇಂದಿಗೂ ಸ್ಮರಣೀಯ ಏಕೆಂದರೆ, ಕಾಶ್ಮೀರದ ಪರಿಸ್ಥಿತಿ 1952ರ ಪರಿಸ್ಥಿತಿಗಿಂತ ಇಂದು ಇನ್ನೂ ಸ್ಫೋಟವಾಗಿದೆ.

ಕಾಶ್ಮೀರ ವಿವಾದದಿಂದಾಗಿ 1948ರಲ್ಲಿ ಮೊಟ್ಟಮೊದಲು ನನಗೆ ಮುಖರ್ಜಿಯವರ ಪರಿಚಯವಾಯಿತು. ಜಮ್ಮು ಮತ್ತು ಲಡಾಖ ಪ್ರಾಂತಗಳಿಗೆ ಸ್ವಾಯತ್ತತೆ ಇರಬೇಕು ಹಾಗೂ ಜಮ್ಮು ಮತ್ತು ಕಾಶ್ಮೀರವು ಭಾರತದಲ್ಲಿ ಸಂಪೂರ್ಣವಾಗಿ ವಿಲೀನವಾಗಬೇಕೆಂಬುದಕ್ಕೆ ಬದ್ಧವಾಗಿದ್ದ ಜಮ್ಮು ಮತ್ತು ಕಾಶ್ಮೀರ ಪ್ರಜಾ ಪರಿಷತ್ತಿನ ಮಹಾಕಾರ್ಯದರ್ಶಿಯಾಗಿದ್ದ ನನ್ನನ್ನು ಅಬ್ದುಲ್ಲಾ ಸರ್ಕಾರ ಜಮ್ಮು ಮತ್ತು ಕಾಶ್ಮೀರದಿಂದ ಗಡೀಪಾರು ಮಾಡಿತ್ತು.

ನನ್ನ ಬಗೆಗೆ ಅನುಕಂಪ ದೃಷ್ಟಿ ಉಳ್ಳವರಾಗಿದ್ದ ಸರ್ದಾರ್ ಪಟೇಲರು "ಬಲರಾಜ್, ಮನವರಿಕೆ ಮಾಡಿಕೊಂಡಿರುವ ವ್ಯಕ್ತಿಗೇ ನೀವು ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಿದ್ದೀರಿ. ಆದರೆ, ನಾನೇನೂ ಮಾಡಲಾರೆ, ಏಕೆಂದರೆ, ಕಾಶ್ಮೀರ, ಪಂಡಿತ್ ನೆಹರುರ ನೇರ ಅಧಿಕಾರದ ವ್ಯಾಪ್ತಿಯಲ್ಲಿದೆ."

ಡಾ|| ಮುಖರ್ಜಿಯವರು, ಕ್ಯಾಬಿನೆಟ್ ಸಚಿವರಾಗಿದ್ದು ಕಾಶ್ಮೀರದಲ್ಲಾಗುತ್ತಿದ್ದ ವಿದ್ಯಾಮಾನಗಳ ಬಗ್ಗೆ ಹಾಗೂ ಜಮ್ಮುವಿನ ಜನಗಳ ಭಾವನೆಗಳ ಬಗ್ಗೆ ಅತ್ಯಂತ ಆಸಕ್ತಿ ಹೊಂದಿದವರಾಗಿದ್ದರು. ಮಂತ್ರಿಮಂಡಲಕ್ಕೆ ರಾಜೀನಾಮೆಯನ್ನಿತ್ತ ಮೇಲೆ, ಜಮ್ಮು ಮತ್ತು ಶ್ರೀನಗರದ ಪರಿಸ್ಥಿತಿಯನ್ನು ಪ್ರತ್ಯಕ್ಷದರ್ಶಿಯಾಗಿ ವೀಕ್ಷಿಸಲು ಅವರು ಜಮ್ಮು ಮತ್ತು ಶ್ರೀನಗರಕ್ಕೆ ಭೇಟಿಯಿತ್ತರು, ಷೇಕ್ ಅಬ್ದುಲ್ಲಾ, ಪಂಡಿತ್ ಪ್ರೇಮ್‌ನಾಥ್ ಡೋಗ್ರಾರವರನ್ನು ಮತ್ತು ಸಾಮಾನ್ಯ ಜನರನ್ನು ಸಹ ಭೇಟಿಯಾದರು. ಆ ಭೇಟಿಯಿಂದ ಅವರಿಗೆ ಅಬ್ದುಲ್ಲಾರವರ ನೀತಿ ನಿಯಮಾವಳಿಗಳಲ್ಲಿನ ಅಪಾಯಕಾರಿ ಅಂಶಗೊತ್ತಾಯಿತು. ಆ ನೀತಿ, ದೇಶದ ಸಮಗ್ರತೆಗೆ ಮತ್ತು ಜಮ್ಮು ಮತ್ತು ಲಢಖ್‌ನ ಜನತೆಯ ಪ್ರಜಾಪ್ರಭುತ್ವದ ಹುಕ್ಕುಗಳಿಗೆ ವಿರುದ್ಧವಾಗಿದ್ದವು. ಆದ್ದರಿಂದ, ಅವರು, ಕಾಶ್ಮೀರದ ವಿಷಯವನ್ನು ಸಂಸತ್ತಿನ ಒಳಗೂ ಮತ್ತು ಹೊರಗೂ ಚರ್ಚಿಸಲು ಮುಂದಾದರು.

1952ರ ಜೂನ್ 26ರಂದು ಲೋಕಸಭೆಯಲ್ಲಿ ಕಾಶ್ಮೀರದ ಬಗ್ಗೆ ಅತ್ಯಂತ ಪ್ರಭಾವ ಪೂರ್ಣವಾದ ವಾದವನ್ನು ಮಂಡಿಸಿ, ಚರಿತ್ರಾರ್ಹ ಭಾಷಣ ಮಾಡಿ, ಪ್ರಧಾನ ಮಂತ್ರಿಗಳಾಗಿದ್ದ ನೆಹರೂರವರಿಗೆ, ಕಾಶ್ಮೀರಕ್ಕೆ ಸಂಬಂಧಿಸಿದ ತಮ್ಮ ನೀತಿ ಬಗ್ಗೆ ಯಾರು ಯಾರು ಭಿನ್ನಾಭಿಪ್ರಾಯತಾಳಿದ್ದಾರೋ ಅವರ ಬಗ್ಗೆ, ದಯಮಾಡಿ ಸಹನೆಯಿಂದಿರಿ, ಒಬ್ಬರ ಮೇಲೆ ಒಬ್ಬರು ದೋಷಾರೋಪಣೆ ಮಾಡುವುದು ಸಲ್ಲದ ವಿಚಾರ, ಜಾತಿವಾದಿ ಅಥವಾ ಪ್ರತಿಗಾಮಿ ಎಂದು ಪರಸ್ಪರ ಬಡಿದಾಡುವುದರಿಂದ ಪ್ರಯೋಜನವಿಲ್ಲ ತಮ್ಮ ಧೋರಣೆ

ಮತ್ತು ಈ ಸಮಸ್ಯೆ ಬಗ್ಗೆ ಯಾವುದು ರಾಷ್ಟ್ರೀಯ ಧೋರಣೆಯಾಗಿರಬೇಕು ಎಂದು ನಾವಂದುಕೊಂಡಿದ್ದೇವೋ ಅದರ ನಡುವೆ ಮೂಲಭೂತ ವ್ಯತ್ಯಾಸಗಳಿವೆ ಎಂಬುದನ್ನು ತಾವು ಅರ್ಥ ಮಾಡಿಕೊಳ್ಳಬೇಕು" ಎಂದು ಮನವಿಮಾಡಿಕೊಂಡರು.

ಡಾ|| ಮುಖರ್ಜಿಯವರು ತಮ್ಮ ಭಾಷಣಗಳಲ್ಲಿ 370ನೇ ವಿಧಿ ಬಗ್ಗೆ ವಿಸ್ತಾರವಾಗಿ ಮಾತನಾಡುತ್ತ ಸಂಸ್ಥಾನಗಳ ವಿಲೀನಗೊಂಡ ರೀತಿ, ಮೊದ ಮೊದಲು ಆ ಸಂಸ್ಥಾನಗಳೆಲ್ಲಾ ಮೂರು ವಿಷಯಗಳನ್ನು - ರಕ್ಷಣೆ, ವಿದೇಶ ವ್ಯವಹಾರಗಳು ಮತ್ತು ಸಂಪರ್ಕ - ಹೇಗೆ ಒಪ್ಪಿಸಿದವು ಮತ್ತು ರಾಜ್ಯಗಳಿಗೆ ಎಲ್ಲ ವಿಷಯಗಳಲ್ಲಿ ಸರಿ ಸಮಾನತೆ ಇರುವಂಥ ಒಕ್ಕೂಟ ವ್ಯವಸ್ಥೆಯನ್ನು ಒಪ್ಪಿಕೊಳ್ಳುವಂತೆ ಸರ್ದಾರ ಪಟೇಲರು ರಾಜರುಗಳ ಮನಸ್ಸನ್ನು ಹೇಗೆ ಪರಿವರ್ತಿಸಿದರು ಎಂಬುದನ್ನು ಎಳೆ ಎಳೆಯಾಗಿ ಬಿಡಿಸಿ ಹೇಳಿದರು. ಡಾ|| ಮುಖರ್ಜಿಯವರು ತಮ್ಮ ಭಾಷಣದಲ್ಲಿ, ಎನ್. ಗೋಪಾಲ ಸ್ವಾಮಿ ಐಯ್ಯಂಗಾರರು ರಾಜ್ಯಾಂಗ ರಚನಾ ಸಭೆಯ ಮುಂದೆ ರಾಜ್ಯಾಂಗದಲ್ಲಿ 370ನೇ ವಿಧಿಯನ್ನು ಸೇರಿಸುವ ನಿರ್ಣಯವನ್ನು ಮಂಡಿಸುತ್ತ ಹೇಳಿದ ಮಾತುಗಳನ್ನು ಉದಾಹರಿಸಿದರು : "ಕಾಶ್ಮೀರವು ಭಾರತದಲ್ಲಿ ಹೇಗೆ ವಿಲೀನವಾಗಲಿದೆ ? ಕಾಶ್ಮೀರವು, ಗಣರಾಜ್ಯದೊಳಗೇ ಮತ್ತೊಂದು ಗಣರಾಜ್ಯವಾಗಲಿದೆಯೇ ? ಈ ಸಾರ್ವಭೌಮ ಸಂಸತ್ತೇ ಅಲ್ಲದೆ ಭಾರತದ ನಾಲ್ಕು ಮೂಲೆಗಳ ಒಳಗೆ ಮತ್ತೊಂದು ಸಾರ್ವಭೌಮ ಸಂಸತ್ತಿನ ಬಗ್ಗೆ ನಾವು ಆಲೋಚಿಸುತ್ತಿದ್ದೇವೆಯೇ ? ತಾಳಕ್ಕೆ ನೀವು ಕುಣಿಯುವುದಾದರೆ ಮತ್ತು ನಾವು ಅಸಹಾಯಕರೆಂದು, ಹಾಗೂ ಷೇಕ್ ಅಬ್ದುಲ್ಲಾ ರವರು ತಮಗೆ ಇಷ್ಟಬಂದಂತೆ ಮಾಡಿಕೊಳ್ಳಲಿ ಎಂದು ಹೇಳ ಹೊರಟರೆ, ಕಾಶ್ಮೀರವನ್ನು ನಾವು ಕಳೆದುಕೊಂಡಂತೆಯೆ. ಕಾಶ್ಮೀರವನ್ನು ನಾವು ಕಳೆದುಕೊಂಡಂತೆಯೇ ಎಂಬುದನ್ನು ನಾನು ತುಂಬಾ ವಿಚಾರ ಮಂಥನ ಮಾಡಿಯೇ ಒತ್ತಿ ಒತ್ತಿ ಹೇಳುತ್ತಿದ್ದೇನೆ".

ಡಾ|| ಮುಖರ್ಜಿಯವರು, ಭಾರತದ ಸಂಸ್ಥಾನಗಳ ಬಗೆಗಿನ ಸರ್ಕಾರದ ಶ್ವೇತಪತ್ರವನ್ನು ಉಲ್ಲೇಖಿಸುತ್ತಾ ವಿಲೀನಗೊಳ್ಳುತ್ತಿರುವ ಎಲ್ಲ ಸಂಸ್ಥಾನಗಳು ಯಾವುದೇ ವಿಶೇಷ ಹಕ್ಕುಗಳನ್ನು ಕೋರದೆ ಸಂಪೂರ್ಣವಾಗಿ ವಿಲೀನಗೊಳ್ಳಲು ಇರಬೇಕಾದ ಆಧಾರ, ಹಿನ್ನೆಲೆ ಮತ್ತು ಅಗತ್ಯತೆ ಬಗ್ಗೆ ಸರ್ದಾರ್ ಪಟೇಲರು ಏನು ಹೇಳಿದ್ದಾರೆಂಬುದನ್ನು ಹೇಳುತ್ತಾ "ಭಾರತದ ಜನತೆಗೆ ನಾವು ಯಾವ ಯಾವ ಮೂಲಭೂತ ಹಕ್ಕುಗಳನ್ನು ಕೊಟ್ಟಿದ್ದೇವೆಯೋ ಆ ಹಕ್ಕುಗಳಿಗೆ ಜಮ್ಮು ಮತ್ತು ಕಾಶ್ಮೀರದ ಜನತೆ ಅರ್ಹರಲ್ಲವೇ ? ಷೇಕ್ ಅಬ್ದುಲ್ಲಾರನ್ನು ಕಾಶ್ಮೀರದ ಚಕ್ರವರ್ತಿಯನ್ನಾಗಿ ಮಾಡಿದವರಾರು ? ಭಾರತದ ಸೇನೆ, ಅಲ್ಲಿಗೆ ಹೋಗಿದ್ದರಿಂದ ಅವರು ಹಾಗಾಗಿದ್ದಾರೆ. ಸಾರ್ವಭೌಮ ಗಣರಾಜ್ಯದೊಳಗೇ ಇನ್ನೊಂದು ಸಾರ್ವಭೌಮ ಗಣರಾಜ್ಯವನ್ನು ಸೃಷ್ಟಿಸಲು ನಾವು ಹಾಗೆ ಮಾಡಿದೆವೇ ? ಬೇರೆ ಬೇರೆ ರಾಜ್ಯಾಂಗಗಳಿಗೆ ಅವಕಾಶ ಇರಬಾರದು ಮತ್ತು ಒಕ್ಕೂಟದಲ್ಲಿ ವಿಲೀನಗೊಳ್ಳಲಿರುವ ಸಂಸ್ಥಾನಗಳ ನಡುವೆ ತಾರತಮ್ಯ ಇರಕೂಡದು" ಎಂದು ಹೇಳಿದರು.

ಅವರು, ಹಲವು ರಚನಾತ್ಮಕ ಸಲಹೆ ನೀಡಿ ಚರಿತ್ರಾರ್ಹ ಭಾಷಣ ಮಾಡಿದರು 1952ರಲ್ಲಿ ಅವರು ಮಾಡಿದ್ದ ಸಲಹೆಗಳು ಎಷ್ಟೊಂದು ಪ್ರಸ್ತುತವಾಗಿದ್ದವೋ ಇಂದಿಗೂ ಸಹ ಅವು ಅಷ್ಟೇ ಪ್ರಸ್ತುತವಾಗಿವೆ. "ಪ್ರಧಾನ ಮಂತ್ರಿಗಳು, ನಮಗೆ ಈ ಬಗೆಯ ಕಾಶ್ಮೀರಿ ರಾಷ್ಟ್ರೀಯತೆ ಬೇಕಿಲ್ಲವೆಂದು ದೃಢವಾಗಿ ಪ್ರತಿಪಾದಿಸಬೇಕು. ನಮಗೆ ಈ ಬಗೆಯ ಸಾರ್ವಭೌಮ ಕಾಶ್ಮೀರದ ಕಲ್ಪನೆ ಬೇಕಿಲ್ಲ. ಇದನ್ನು ಕಾಶ್ಮೀರದಲ್ಲಿ ಪ್ರಾರಂಭಿಸಿದರೆ ಬೇರೆಯವರು ಸಹ ಇದೇ ರೀತಿಗಾಗಿ ಒತ್ತಾಯಿಸುತ್ತಾರೆ" ಎಂದು ಹೇಳಿದರು. ಮುಂದುವರಿದು, ಅವರು "ಷೇಕ್ ಅಬ್ದುಲ್ಲಾರವರು ಕಾಶ್ಮೀರದ ಪರಿಮಿತ ವಿಲೀನಕ್ಕೆ ಒತ್ತಾಯಿಸಿದರೆ, ಆಗ ನಾವು, ಸಂಪೂರ್ಣವಾಗಿ ವಿಲೀನಗೋಳ್ಳುವ ಅಥವಾ ವಿಲೀನಗೊಳ್ಳದಿರುವ ಸಂಪೂರ್ಣ ಸ್ವಾತಂತ್ರ್ಯವನ್ನು ಜಮ್ಮು ಮತ್ತು ಲಢಖ್‌ಗೆ ಕೊಡುವ ವಿಧಾನವೊಂದನ್ನು ರೂಪಿಸೋಣ".

ಭಾರತ ಒಕ್ಕೂಟದೊಂದಿಗೆ ಕಾಶ್ಮೀರವು ಸಂಪೂರ್ಣವಾಗಿ ವಿಲೀನವಾಗಬೇಕೆಂಬ ಮತ್ತು ಮೂರು ಪ್ರಾಂತ್ಯಗಳಿಗೆ ಎಂದರೆ - ಕಾಶ್ಮೀರ ಕಣಿವೆ, ಜಮ್ಮು ಮತ್ತು ಲಢಖ್‌ಗೆ ಸ್ವಾಯತ್ತತೆ ಇರಬೇಕೆಂಬ ತನ್ನ ಬೇಡಿಕೆಯನ್ನು ಬೆಂಬಲಿಸಿ ಜಮ್ಮು ಮತ್ತು ಕಾಶ್ಮೀರದ ಪ್ರಜಾ ಪರಿಷದ್ ಶಾಂತಿಯುತವಾದ ಸತ್ಯಾಗ್ರಹವನ್ನು ಮಾಡತೊಡಗಿತು. ಪರಿಷತ್ತಿನ ನಾಯಕತ್ವ ಡಾ|| ಮುಖರ್ಜಿಯವರ ಮಾರ್ಗದರ್ಶನ ಮತ್ತು ಬೆಂಬಲ ಬಯಸಿತು.

ಯಾವುದೇ ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕೂ ಮೊದಲು ಪ್ರಜಾ ಪರಿಷತ್ತಿನ ಬೇಡಿಕೆಗಳನ್ನು ಸಹಾನುಭೂತಿಯಿಂದ ಪರಿಗಣಿಸಬೇಕೆಂದು ಅವರು ಪ್ರಧಾನ ಮಂತ್ರಿ ನೆಹರು ಮತ್ತು ಷೇಕ್ ಅಬ್ದುಲ್ಲಾರವರ ಮನ ವಲಿಸಲು ಪ್ರಯತ್ನಿಸಿದರು.

1953ರ ಜನವರಿ 9 ಮತ್ತು 23ರ ಮಧ್ಯೆ ಮುಖರ್ಜಿಯವರು ಈ ಇಬ್ಬರು ನಾಯಕರೊಂದಿಗೆ ಅನೇಕ ವ್ಯವಹಾರ ನಡೆಸಿದರು. ಈ ಪತ್ರ ವ್ಯವಹಾರಗಳೆಲ್ಲಾ ತದನಂತರ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿತು. ಈ ಕೃತಿ ಡಾ|| ಮುಖರ್ಜಿಯವರು ಕಾಶ್ಮೀರ ಸಮಸ್ಯೆಗೆ "ನೈಜವಾದ, ರಾಷ್ಟ್ರೀಯ ದೃಷ್ಟಿಕೋನದ ಮತ್ತು ಅಂತಿಮ ಪರಿಹಾರಕ್ಕೆ ನಡೆಸಿದ ದೃಢ ಪ್ರಯತ್ನ"ಗಳ ಅಧಿಕೃತ ದಾಖಲೆಯಾಗಿದೆ.

ಪಂಡಿತ್ ನೆಹರುರವರಿಗೆ ಡಾ|| ಮುಖರ್ಜಿಯವರು 1953ರ ಫೆಬ್ರವರಿ 3 ರಂದು ಬರೆದಿರುವ ಪತ್ರದಲ್ಲಿ ಕಾಶ್ಮೀರದ ಸಮಸ್ಯೆಗಳ ಬಗ್ಗೆ ಅವರು ತಾಳಿದ್ದ ನಿಲುವನ್ನು ಕಾಣಬಹುದು. ಭಾರತದಲ್ಲಿ ಜಮ್ಮು ಮತ್ತು ಕಾಶ್ಮೀರದ ವಿಲೀನದ ಸಮಸ್ಯೆ ನೆನೆಗುದಿಗೆ ಬೀಳಲು ಅವಕಾಶ ಕೊಡಬಾರದು, ಕಾಶ್ಮೀರ ಹಾಗೂ ಭಾರತದ ಮಿಕ್ಕ ರಾಜ್ಯಗಳು, ಜಮ್ಮು ಮತ್ತು ಲಢಖ್ ಪ್ರಾಂತ್ಯಗಳು ಮತ್ತು ಕಾಶ್ಮೀರ ಕಣಿವೆ ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಶೀಘ್ರ ತೀರ್ಮಾನ ತೆಗೆದುಕೊಳ್ಳಬೇಕು" ಎಂದು ತಮ್ಮ ಪತ್ರದಲ್ಲಿ ಅವರು ಬರೆದಿದ್ದರು.

ಪಂಡಿತ್ ನೆಹರುರವರು ನೇರ ಉತ್ತರವನ್ನು ಕೊಡುವುದಕ್ಕೆ ಬದಲಾಗಿ ಪ್ರಜಾ ಪರಿಷತ್ತನ್ನು, ಕೋಮುವಾದಿಯೆಂದು ಮತ್ತು ಅದರ ಧೋರಣೆಯು ವಿನಾಶಕಾರಿಯೆಂದು ಖಂಡಿಸಿದರು. ಅದರಿಂದ, ಅಂತರಾಷ್ಟ್ರೀಯ ಬಿಕ್ಕಟ್ಟು ಉಂಟಾಗಬಹುದೆಂದು ಹೇಳಿದರು. ಇದು ಡಾ|| ಮುಖರ್ಜಿಯವರನ್ನು ಮತ್ತೊಂದು ಪತ್ರ ಬರೆಯುವಂತೆ ಪ್ರೇರೇಪಿಸಿತು. ಫೆಬ್ರವರಿ 8 ರಿಂದ ಅವರು ಮತ್ತೊಂದು ಪತ್ರವನ್ನು ಬರೆದರು. ಆ ಪತ್ರದಲ್ಲಿ ಅವರು ಪ್ರಜಾಪರಿಷತ್ತಿನ ಬೇಡಿಕೆಗಳ ಬಗ್ಗೆ ಪ್ರಸ್ತಾಪಿಸುತ್ತಾ, ರಾಜ್ಯಾಂಗವು ಭಾರತದ ಎಲ್ಲಾ ರಾಜ್ಯಗಳಿಗೂ ಅನ್ವಯವಾಗುವಂತೆಯೇ, ಇಡೀ ಕಾಶ್ಮೀರಕ್ಕೂ ಅನ್ವಯವಾಗಬೇಕೆಂದು ಹೇಳುತ್ತ :

"ಇದರಲ್ಲಿ ಕೋಮುವಾದದ ಅಥವಾ ಪ್ರತಿ - ಪರಿಣಾಮದ ಅಥವಾ ರಾಷ್ಟ್ರ ವಿರೋಧಿ ಅಂಶ ಏನಿದೆ ? ಭಾರತದ ರಾಜ್ಯಾಂಗವು ಭಾರತದ ಮಿಕ್ಕ ರಾಜ್ಯಗಳಿಗೆ ಅನ್ವಯವಾಗುತ್ತಿರುವಾಗ ಇದು ಜಮ್ಮು ಮತ್ತು ಕಾಶ್ಮೀರಕ್ಕೆ ಏಕೆ ಒಪ್ಪಿಗೆಯಾಗುತ್ತಿಲ್ಲ ? ಷೇಕ್ ಅಬ್ದುಲ್ಲಾ ಮತ್ತು ಅವರ ಸಹಚಾರರು ಪ್ರತ್ಯೇಕತೆಗೆ ಸನ್ನಾಹ ಮಾಡುತ್ತಿರುವುದನ್ನು ರಾಷ್ಟ್ರೀಯತೆ ಹಾಗೂ ದೇಶಭಕ್ತಿ ಎಂದು ತಾವು ಶ್ಲಾಘಿಸುತ್ತಿರುವುದು, ಆದರೆ, ಭಾರತದ ಮೂಲಭೂತ ಐಕ್ಯತೆ ಮತ್ತು ಸಮಗ್ರತೆಯನ್ನು ಕೋರುತ್ತಿರುವ ಮತ್ತು ಆ ಎಲ್ಲರೂ ಭಾರತದ ಸಾಮಾನ್ಯ ಪ್ರಜೆಗಳಾಗಿರಬೇಕೆಂದು ಹಂಬಲಿಸುತ್ತಿರುವ ಪ್ರಜಾಪರಿಷತ್ತಿನ ನಿಜವಾದ ಬಯಕೆಯನ್ನು ವಿಶ್ವಾಸಘಾತಕವಾದುದೆಂದು ನೀವು ಪರಿಗಣಿಸುತ್ತಿರುವುದು ನಿಜಕ್ಕೂ ಆಶ್ಚರ್ಯಕರ" ಎಂದು ಬರೆದಿದ್ದರು.

ಜಾತೀಯವಾದಿ ಎಂಬ ಆಪಾದನೆಯನ್ನು ತನ್ನ ಮೇಲೆ ಹೊರಿಸಿರುವದನ್ನು ಅಲ್ಲಗೆಳೆಯುತ್ತ ಮುಖರ್ಜಿಯವರು ಪಂಡಿತ್ ನೆಹರೂರವರಿಗೆ ಈ ರೀತಿ ಮನವಿ ಮಾಡಿಕೊಂಡಿದ್ದರು :

"ನೀವು ಶಾಂತಚಿತ್ತತೆಯಿಂದಿರುವ ಕ್ಷಣಗಳಲ್ಲಿ, ಸಮಾಧಾನದಿಂದ ಯೋಚಿಸಿ, ನಿಮ್ಮ ಜೀವಮಾನದಲ್ಲಿ ನೀವು ಮುಸ್ಲಿಂ ಕೋಮುವಾದದ ವಿರುದ್ಧ ಧ್ವನಿ ಎತ್ತದೆ ಇದ್ದುದು ಯಾವ ರೀತಿಯ ವಿನಾಶಕಾರಿ ಪರಿಣಾಮಗಳಿಗೆ ಆಸ್ಪದ ಕೊಟ್ಟಿದೆ ಎಂಬುದನ್ನು ಅರ್ಥಮಾಡಿಕೊಳ್ಳಿ, ನೀವು ಮತ್ತು ಇತರರು ಉದಾರ ದೃಷ್ಟಿಯಿಂದ, ರಿಯಾಯಿತಿಯ ಮತ್ತು ಸಮಾಧಾನಪಡಿಸುವ ಮಾರ್ಗ ಅನುಸರಿಸಿದ್ದೀರೆಂದು ಕಾಣುತ್ತದೆ. ಆದರೆ ಕೊನೆಗೆ ಏನಾಯಿತು ? ರಾಷ್ಟ್ರದ ವಿಭಜನೆ ಆಯಿತು. ನೀವೇ ಪದೇ ಪದೇ ಕೊಟ್ಟ ಹೇಳಿಕೆಗಳು ಫಲಪ್ರದವಾಗಲಿಲ್ಲ. ಏಕೆಂದರೆ, ಆ ಸಮಯದಲ್ಲಿ ಪರಕೀಯ ಶಕ್ತಿಯೊಂದು ನಮ್ಮ ವಿರುದ್ಧ ಕೆಲಸ ಮಾಡುತ್ತಿತ್ತು. ಅಷ್ಟೇ ಅಲ್ಲ, ನಮ್ಮನ್ನು ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿತ್ತು. ಇಂದು ನಾವು ತುಂಬಾ ಎಚ್ಚರದಿಂದಿರಬೇಕಾದರೆ ಮತ್ತು ಹಿಂದಿನ ದುರಂತಗಳು ಮತ್ತು ಆಗದಂತೆ

ನೋಡಿಕೊಳ್ಳಬೇಕಾದರೆ, ನಾವು ದೇಶದ ಸಮಗ್ರ ಹಿತದೃಷ್ಟಿಯಿಂದ ಕಾರ್ಯಮಗ್ನರಾಗ ಬೇಕೇ ಹೊರತು ಯಾವುದೇ ಸಂಕುಚಿತ ಕೋಮುವಾದದ ಅಥವಾ ಮತೀಯ ಹಿತದೃಷ್ಟಿಯಿಂದಲ್ಲ".

ಕಾಶ್ಮೀರವು ಭಾರತದಲ್ಲಿ ಸಂಪೂರ್ಣವಾಗಿ ವಿಲೀನಗೊಳ್ಳಬೇಕೆಂಬ ಚಳುವಳಿಯಿಂದ ಅಂತರರಾಷ್ಟ್ರೀಯ ಬಿಕ್ಕಟ್ಟು ಉಂಟಾಗುವ ಸಾಧ್ಯತೆಯಿದೆಯೆಂದು ಪಂಡಿತ ನೆಹರುರವರು, ಪದೇ ಪದೇ ಹೇಳುತ್ತಿರುವುದರ ಬಗ್ಗೆ ಪ್ರಸ್ತಾಪಿಸಿ ಡಾ|. ಮುಖರ್ಜಿಯವರು ಅದೇ ಪತ್ರದಲ್ಲಿ ಹೀಗೆ ಬರೆದಿದ್ದರು :

"ಕಾಶ್ಮೀರದ ಸಮಸ್ಯೆಯನ್ನು ತಾವು ನಿಭಾಯಿಸುತ್ತಿರುವುದನ್ನು ನೋಡಿದರೆ ಅದರಿಂದ ನಮ್ಮ ಅಂತರರಾಷ್ಟ್ರೀಯ ವರ್ಚಸ್ಸು ಹೆಚ್ಚುತ್ತದೆ ಅಥವಾ ನಮಗೆ ವ್ಯಾಪಕವಾಗಿ ಅಂತರಾಷ್ಟ್ರೀಯ ಬೆಂಬಲ ಅಥವಾ ಅನುಕಂಪ ದೊರಕುತ್ತದೆ ಎಂದು ಇಂದು ಯಾರೂ ಹೇಳಲಾಗದು. ಈ ಸಮಸ್ಯೆ ಬಗ್ಗೆ ನೀವು ಅನುಸರಿಸುತ್ತಿರುವ ನೀತಿಯಿಂದ ದೇಶದಲ್ಲೂ ಮತ್ತು ವಿದೇಶದಲ್ಲೂ ಬಿಕ್ಕಟ್ಟು ಉಲ್ಬಣಗೊಂಡಿದೆ. ಪಕ್ಷಪಾತ ತೋರದೆ ಮತ್ತು ಅಂತರ ರಾಷ್ಟ್ರೀಯ ಬಿಕ್ಕಟ್ಟು ಎನ್ನುವ ಸುಳ್ಳುಭೂತಕ್ಕೆ ಹೆದರದೆ ನೀವು ಈ ಸಮಸ್ಯೆಯನ್ನು ಪರಾಮರ್ಶಿಸಬೇಕು. ವಿವಿಧ ದೃಷ್ಟಿಕೋನಗಳ ಮತ್ತು ಹಿತದೃಷ್ಟಿಯ ನಡುವೆ ನ್ಯಾಯೋಚಿತ ಹೊಂದಾಣಿಕೆ ಇರುವಂಥ ರಾಷ್ಟ್ರೀಯ ಐಕಮತ್ಯಕ್ಕೆ ತಾವು ಭೂಮಿಕೆ ಸಿದ್ಧಪಡಿಸುವುದೇ ರಾಜನೀತಿ. ನೀವು ಈ ಕಾರ್ಯದಲ್ಲಿ ಸಫಲರಾದರೆ ಅದು ತಮಗೆ, ಅಂತರರಾಷ್ಟ್ರೀಯ ಮಟ್ಟದಲ್ಲಿ ಒಳ್ಳೆಯ ಬೆಂಬಲ ಮತ್ತು ಗೌರವವನ್ನು ತಂದು ಕೊಡುತ್ತದೆ".

ತಮ್ಮ ಪತ್ರವನ್ನು ಅವರು, ಮನಸ್ಸಿಗೆ ನಾಟುವಂತಹ ಮಾತುಗಳಿಂದ ಮುಕ್ತಾಯಗೊಳಿಸಿದ್ದರು:

"ನಾವು ಕೆಲವು ಮುಖ್ಯ ವಿಷಯಗಳಲ್ಲಿ ಭಿನ್ನಾಭಿಪ್ರಾಯ ಉಳ್ಳವರಾಗಿದ್ದೇವೆ, ಆದರೂ ಸಹ ನಾವೆಲ್ಲಾ ಇದೇ ತಾಯಿಯ ಮಕ್ಕಳು. ನಾವು ನಾವು, ಸ್ವಲ್ಪ ಒಳ್ಳೆಯತನ ಮತ್ತು ತಾಳ್ಮೆ ತೋರಿದರೆ ದೇಶವು ಸೀಳಿ ಹೋಗುವುದನ್ನು ತಪ್ಪಿಸಲು ಸಾಧ್ಯವಾಗುತ್ತದೇನೋ".

ವಾಸ್ತವಿಕ ನೀತಿಯೊಂದನ್ನು ಅಳವಡಿಸಿಕೊಳ್ಳುವಂತೆ ಪಂಡಿತ ನೆಹರೂ ಅವರ ಮನವೊಲಿಸಲು ಅವರು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದಾಗ ರಾಷ್ಟ್ರೀಯ ಏಕತೆಗಾಗಿ ಹೋರಾಡುತ್ತಿದ್ದ ದೇಶಾಭಿಮಾನಿ ಜನರೊಂದಿಗೆ ನಾನಿದ್ದೇನೆಂಬುದನ್ನು ದೃಢಪಡಿಸುವ ಸಲುವಾಗಿ ಡಾ|| ಮುಖರ್ಜಿಯವರು ಜಮ್ಮುವಿಗೆ ಭೇಟಿ ನೀಡಲು ನಿಶ್ಚಯಿಸಿದರು. ಮೇ ತಿಂಗಳ ಮಧ್ಯದಲ್ಲಿ ಸಂಸತ್ತಿನ ಆಯವ್ಯಯ ಅಧಿವೇಶನದ ಮುಗಿದ ನಂತರ ದೆಹಲಿಯಿಂದ

ಜಮ್ಮುವಿಗೆ ತೆರಳಿದರು. ರಾವಿ ನದಿಯ ಮಧೋಪರ್ ಸೇತುವೆಯ ಅರ್ಧ ಭಾಗಕ್ಕೆ ಬಂದಿದ್ದಾಗ ಕಾಶ್ಮೀರದ ಪೋಲೀಸರು ಅವರನ್ನು ಬಂಧಿಸಿದರು. ಭಾರತದ ಸುಪ್ರೀಂಕೋರ್ಟಿನ ಅಧಿಕಾರದ ವ್ಯಾಪ್ತಿಯನ್ನು ತಪ್ಪಿಸಲೆಂದೇ ಅವರನ್ನು ಜಮ್ಮುವಿನಲ್ಲಿ ಬಂಧಿಸಿದರೆಂದು ಕಾಣುತ್ತದೆ. ತದನಂತರ, ಅವರನ್ನು ಶ್ರೀನಗರಕ್ಕೆ ಕೊಂಡೊಯ್ಯಲಾಯಿತು. ನಂತರ ಅವರನ್ನು ಅಲ್ಲಿಂದ ಹತ್ತು ಮೈಲಿ ದೂರದ ಒಂದು ಚಿಕ್ಕ ಮನೆಯಲ್ಲಿ ಇಡಲಾಯಿತು. ಲೋಕಸಭೆಯಲ್ಲಿ ಡಾ|| ಮುಖರ್ಜಿಯವರ ಸಹಪಾಠಿಯಾಗಿದ್ದ ಬ್ಯಾರಿಸ್ಟರ್ ಯು.ಎಂ. ತ್ರಿವೇದಿಯವರು ಮುಖರ್ಜಿಯವರನ್ನು ಕೋರ್ಟಿನ ಮುಂದೆ ಹಾಜರುಪಡಿಸುವಂತೆ ಹೇಬಿಯಸ್ ಕಾರ್ಪಸ್ ಅರ್ಜಿಯನ್ನು ಶ್ರೀನಗರದಲ್ಲಿದ್ದ ಕಾಶ್ಮೀರ್ ಹೈಕೋರ್ಟಿಗೆ ಸಲ್ಲಿಸಿದರು. ನ್ಯಾಯಮೂರ್ತಿ ಕಿಮ್‌ರವರು ಈ ಮೊಕದ್ದಮೆಯನ್ನು ಜೂನ್ 23ರಂದು ವಿಚಾರಣೆ ಮಾಡಿದರು. ಮರುದಿನ ತೀರ್ಪು ಬರುವುದರಲ್ಲಿತ್ತು. ತಮ್ಮ ಅರ್ಜಿಗೆ ಪುರಸ್ಕಾರ ದೊರಕುವುದೆಂಬ ಭರವಸೆ ತ್ರಿವೇದಿಯವರಿಗೆ ಇತ್ತು ಮತ್ತು ಡಾ|| ಮುಖರ್ಜಿಯವರ ಬಿಡುಗಡೆ ಆಗುವುದೆಂಬ ಖಾತ್ರಿ ಇತ್ತು. ಆದರೆ ಆ ಹೊತ್ತಿಗೆ ಶ್ರೀನಗರದಲ್ಲಿದ್ದ ಸರ್ಕಾರಿ ಆಸ್ಪತ್ರೆಗೆ ಅವರನ್ನು ಸೇರಿಸಲಾಯ್ತು. ತ್ರಿವೇದಿಯರು ನ್ಯಾಯಾಲಯದಿಂದ ನೇರವಾಗಿ ಆಸ್ಪತ್ರೆಗೆ ತೆರಳಿದರು. ಸಂಜೆ 7 ಘಂಟೆಯ ತನಕ ಅಲ್ಲೇ ಇದ್ದರು. ಮುಖರ್ಜಿಯವರು ಆರೋಗ್ಯವಾಗಿರುವಂತೆ ಕಂಡರು ಮತ್ತು ತುಂಬಾ ಉತ್ಸಾಹ ಶಾಲಿಗಳಾಗಿರುವಂತೆಯೂ ಕಂಡರು. ತ್ರಿವೇದಿಯವರು ಹೋಟೆಲ್‌ಗೆ ಹಿಂದಿರುಗಿದ ಮೇಲೆ, ಡಾ|| ಮುಖರ್ಜಿಯವರಿಗೆ, ಡಾ|| ಅಲಿಜಾನ್ ಎನ್ನುವವರು ಒಂದು ಚುಚ್ಚುಮದ್ದು ಕೊಟ್ಟರು. ಅದು ಅವರ ಮೇಲೆ ಹಾನಿಕರ ಪರಿಣಾಮ ಉಂಟು ಮಾಡಿತು. ರಾತ್ರಿ 11 ಘಂಟೆಗೆ ಡಾ|| ಮುಖರ್ಜಿಯವರು ಸ್ವರ್ಗಸ್ಥರಾದರು.

ಲೋಕಸಭೆಯಲ್ಲಿ ಎಲ್ಲ ಪಕ್ಷಗಳೂ ಸಹ ಅವರ ನಿಗೂಢ ಸಾವಿಗೆ ಕಾರಣ ಕಂಡುಹಿಡಿದು ನ್ಯಾಯ ದೊರಕಿಸಿಕೊಡಬೇಕೆಂದು ತುಂಬಾ ಒತ್ತಾಯಿಸಿದವು. ಇದರಲ್ಲಿ ಕಾಂಗ್ರೆಸ್ ಪಕ್ಷವು ಸಹ ಸೇರಿಕೊಂಡಿತ್ತು. ಆದರೆ ಪಂಡಿತ್ ನೆಹರುರವರು ಒತ್ತಾಯಕ್ಕೆ ಮಣಿಯಲಿಲ್ಲ. ಹೀಗಾಗಿ ಸತ್ಯ ಅಧಿಕೃತವಾಗಿ ಹೊರಬರಲೇ ಇಲ್ಲ. ನಾನು ಶ್ರೀನಗರದಲ್ಲಿ ಡಾ|| ಮುಖರ್ಜಿಯವರ ಸಾವಿನ ಬಗೆಗೆ ಸವಿಸ್ತಾರವಾದ ಶೋಧನೆ ನಡೆಸಿದೆ. ಅದು ಸಹಜ ಮರಣ ಅಲ್ಲ, ಅದು "ವೈದ್ಯಕೀಯ ಹತ್ಯೆ" ಎಂಬ ನಿರ್ಧಾರಕ್ಕೆ ಬಂದೆ. ಡಾ|| ಮುಖರ್ಜಿಯವರ ಜೀವನ ಚರಿತ್ರೆ "ಪೋರ್‌ಟ್ರೈಟ್ ಆಫ್ ಮಾರ್‌ಟೈರ್" ಎಂಬ, ನಾನು ಬರೆದಿರುವ ಕೃತಿಯಲ್ಲಿ ಸವಿಸ್ತಾರವಾಗಿ ಈ ವಿಷಯಗಳನ್ನು ಪ್ರಸ್ತಾಪಿಸಿದ್ದೇನೆ.

ಕಾಶ್ಮೀರದಲ್ಲಿ ಪ್ರತ್ಯೇಕವಾದಿಗಳು ಮತ್ತು ವಿಚ್ಛಿದ್ರಕಾರಿ ಶಕ್ತಿಗಳು ತಾಂಡವವಾಡುತ್ತಿದ್ದಾಗ ಅದರಿಂದ ರಾಷ್ಟ್ರೀಯ ಐಕ್ಯತೆಗೆ ನಿಜವಾದ ಅಪಾಯ ಒದಗಿದ್ದಾಗ ಡಾ|| ಮುಖರ್ಜಿಯವರು

ಕಾಶ್ಮೀರದ ವಿಲೀನಕ್ಕೆ ಹಾಗೂ ಆ ಸಂಬಂಧ ಮಾಡಿದ ಸಲಹೆಗಳನ್ನು ಕಾರ್ಯರೂಪಕ್ಕೆ ತರುವುದೇ ನಾವು ಅವರಿಗೆ ಸಲ್ಲಿಸುವ ಶ್ರದ್ಧಾಂಜಲಿ.

ಸ್ವಾತಂತ್ರ್ಯನಂತರ ಡಾ॥ ಮುಖರ್ಜಿಯವರು ರಾಷ್ಟ್ರದ ಏಕತೆಗಾಗಿ ಹುತಾತ್ಮರಾದ ಮೊದಲ ವ್ಯಕ್ತಿ. ಕಾಶ್ಮೀರವು ಭಾರತದಲ್ಲಿ ಸಂಪೂರ್ಣವಾಗಿ ವಿಲೀನಗೊಳ್ಳುವ ಸಲುವಾಗಿಯೂ ಅವರು ಶ್ರಮಿಸಿದರು. ಡಾ॥ ಮುಖರ್ಜಿಯವರ ಶ್ರಮ ಮತ್ತು ಬಲಿದಾನ ವ್ಯರ್ಥವಾಗದಿರಲಿ.

## ಶ್ಯಾಮ್ ಪ್ರಸಾದ್ ಮುಖರ್ಜಿಯವರ ಸ್ಮರಣೆ

### ಪ್ರೊ - ಹಿರೇನ್ ಮುಖರ್ಜಿ *

"ನಾವು ನಮ್ಮ ಸುಪ್ರಸಿದ್ಧ ಮಹನೀಯರನ್ನು ಶ್ಲಾಘಿಸೋಣ" ಇದೊಂದು ಆದರ್ಶ ಸೂಕ್ತಿ. ಅತ್ಯಂತ ಗಣ್ಯ ವ್ಯಕ್ತಿಯೂ, ಪ್ರತಿಭಾವಂತ ಸಂಸದೀಯ ಪಟುವೂ ಆಗಿದ್ದ ಶ್ಯಾಮ್ ಪ್ರಸಾದ್ ಮುಖರ್ಜಿಯವರನ್ನು ನೆನವು ಮಾಡಿಕೊಳ್ಳುವುದು ಹಾಗೂ ನಮ್ಮ ನಮನಗಳನ್ನು ಸಲ್ಲಿಸುವುದೇ ಸಂತೋಷದ ಸಂಗತಿ. ಅದೊಂದು ರೀತಿಯ ಶ್ರದ್ಧಾಪೂರ್ವಕ ಅವಶ್ಯ ಕರ್ತವ್ಯ ಕೂಡ. 1953ರಲ್ಲಾದ ಅವರ ಅಕಾಲ ಮರಣ ತುಂಬಲಾರದ ನಷ್ಟ.

ಡಾ|| ಮುಖರ್ಜಿಯವರು ಗಣ್ಯ ವ್ಯಕ್ತಿ, ಶ್ರೀ ಅಶುತೋಷ್ ಮುಖರ್ಜಿಯವರ ಸುಪುತ್ರ. ಅಶುತೋಷ್ ಮುಖರ್ಜಿಯವರು 1917ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ವ್ಯಾಸಂಗ ವಿಭಾಗಗಳನ್ನು ಪ್ರಾರಂಭಿಸಿದವರು. ಆಧುನಿಕ ಪ್ರಪಂಚದ ಸಂಶೋಧನಾ ಭೂಪಟದಲ್ಲಿ ಭಾರತಕ್ಕೆ ಬೇರಾರೂ ಕೊಡದಂತಹ ಸ್ಥಾನವನ್ನು ಕಲ್ಪಿಸಿಕೊಟ್ಟವರು. ಶ್ಯಾಮ್ ಪ್ರಸಾದ್‌ರವರಿಗೆ ಕೆಳವೊಂದು ಅಂತರ್ಗತ ಮೇಧಾ ಶಕ್ತಿಗಳಿದ್ದವು. ಅವರಿಗಿದ್ದ ಪ್ರತಿಭೆಯಿಂದಾಗಿ ಅವರು ವಿಶ್ವವಿದ್ಯಾನಿಲಯದ ಸಿಂಡಿಕೇಟ್‌ಗೆ ಅತ್ಯಂತ ಕಿರಿಯ ವಯಸ್ಸಿನಲ್ಲೇ ಸೇರ್ಪಡೆಯಾದರು. ಅವರ ಮೂವತ್ತನೇ ವರ್ಷದಲ್ಲೇ ಅವರು ವಿಶ್ವವಿದ್ಯಾನಿಲಯದ ಅತ್ಯಂತ ಕಿರಿಯ ವಯಸ್ಸಿನ ಉಪಕುಲಪತಿಗಳಾದರು. ಅವರಿಗಿದ್ದ ಬುದ್ಧಿಶಕ್ತಿ ಮತ್ತು ವ್ಯಾಪಕ ಆಸಕ್ತಿಗಳಿಂದಾಗಿ ಅವರು ರಾಜಕೀಯ ಜೀವನಕ್ಕೆ ಪ್ರವೇಶಿಸಿದರು. ಸ್ವಾತಂತ್ರ್ಯ ಪೂರ್ವದ ಭಾರತದಲ್ಲಿ ಪ್ರತಿಬಂಧಕ ಸನ್ನಿವೇಶಗಳಿದ್ದರೂ, ಮತ್ತು ನಲವತ್ತರ ದಶಕದಲ್ಲಿ ಸೀಮಿತವಾಗಿ ಆದರೆ, ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿದ್ದ ಶಾಸನ ಸಭೆಯಲ್ಲಿ ತಮ್ಮ ಅಸ್ತಿತ್ವವನ್ನು ಮೂಡಿಸಿದರೂ. ಶ್ಯಾಮ್ ಪ್ರಸಾದ್ ಮುಖರ್ಜಿಯವರು ಅಂದಿನ ಅವಿಭಾಜ್ಯ ಬಂಗಾಳ ಪ್ರಾಂತ್ಯದ ಸರ್ಕಾರದಲ್ಲಿ ಮಂತ್ರಿಗಳಾಗಿದ್ದರು. ಅವರಿಗೆ ತನ್ನದೇ ಆದ ಮನೋಭಾವನೆಗಳಿದ್ದವು. ಬರಗಾಲಕ್ಕೆ ತುತ್ತಾಗಿದ್ದ ಮಿಡ್ನಾಪುರ ಜಿಲ್ಲೆಯಲ್ಲಿ ಪರಿಹಾರ ಕಾರ್ಯಾಚರಣೆಗಳನ್ನು ಕೈಗೊಳ್ಳಲು ಸರ್ಕಾರ ವಿಫಲವಾದದ್ದನ್ನು ಪ್ರತಿಭಟಿಸಿ 1942ರ ಕೊನೆಯಲ್ಲಿ ಅವರು ತಮ್ಮ ಅಧಿಕಾರ ಸ್ಥಾನಕ್ಕೆ ರಾಜೀನಾಮೆಯನ್ನಿತ್ತರು. ಇದು ಅವರ ಸ್ವತಂತ್ರ ಮನೋಭಾವಕ್ಕೆ ಒಂದು ಉದಾಹರಣೆ.

---

* ಪ್ರೊ. ಹಿರೇನ್ ಮುಖರ್ಜಿಯವರು ಮಾಜಿ ಸಂಸತ್ ಸದಸ್ಯರು ಹಾಗೂ ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿಯವರ ಸಮಕಾಲೀನರು.

ಸ್ವಾತಂತ್ರ್ಯ ಪೂರ್ವದಲ್ಲಿ ಪ್ರಮುಖ ಪಕ್ಷವಾಗಿದ್ದ ಕಾಂಗ್ರೆಸ್ ಪಕ್ಷವನ್ನು ಅವರು ಎಂದಿಗೂ ಸೇರಲಿಲ್ಲ. ಅವರ ರಾಜಕೀಯ ದೃಷ್ಟಿಕೋನ ಮಧ್ಯಮ ಮಾರ್ಗದ ಉದರವಾದಿ ಭಾವನೆಗಳಿಂದ ಕೂಡಿತ್ತು. ಉದಾರವಾದ ಭಾವನೆಗಳನ್ನುಳ್ಳ ಹಿಂದೂ ಮಹಾಸಭಾದ ಕಡೆಗೆ ಅವರ ಮನಸ್ಸು ಒಲಿಯಿತು. ಅವರು, ಅದರ ನಾಯಕರಾದರು. ಕಾವೇರುತ್ತಿದ್ದಂತಹ ರಾಜಕಾರಣದಲ್ಲಿ ಆಗೊಮ್ಮೆ ಈಗೊಮ್ಮೆ, ಅವರು ಕೋಮುವಾದಿಯೇನೋ ಎನ್ನುವ ಭಾವನೆಗೆ ಆಸ್ಪದವಿತ್ತಾದರೂ, ಅವರೊಬ್ಬ ಕೋಮುವಾದಿಯೆಂದು ಸುಲಭವಾಗಿ ಹೇಳುವ ಹಾಗಿರಲಿಲ್ಲ. ಅವರಲ್ಲಿದ್ದ ಉದಾರಭಾವನೆ ಮತ್ತು ಅವರ ದೃಷ್ಟಿಕೋನಗಳನ್ನು ಹಾಗೂ ಅವರಿಗಿದ್ದ ಯುಕ್ತಾಯುಕ್ತ ಪರಿಜ್ಞಾನವನ್ನು ಯಾರಾದರೂ ಗುರುತಿಸ ಬಹುದಿತ್ತು. ಉದಾಹರಣೆಗೆ ಹೇಳುವುದಾದರೆ, ಕೆಲವು ವರ್ಷಗಳವರೆಗೆ ಕಲ್ಕತ್ತಾ ವಿಶ್ವವಿದ್ಯಾನಿಲಯದ ಮುಖ್ಯ ಸ್ಥರಾಗಿದ್ದಾಗ ಅವರಿಗಿದ್ದ ಹೆಮ್ಮೆಯಲ್ಲಿ ಏನು ಒಂದು ವಿಶೇಷತೆ ಇತ್ತು. ಇಸ್ಲಾಮಿಕ್ ಚರಿತ್ರೆ ಮತ್ತು ಸಂಸ್ಕೃತಿಯ ಪ್ರಸಿದ್ಧ ವಿದ್ವಾಂಸರು ಸೇವೆ ಸಲ್ಲಿಸುತ್ತಿದ್ದಂತಹ ವಿಭಾಗಗಳಲ್ಲಿ ಅವರು ಯಾವಾಗಲೂ ಹರ್ಷಚಿತ್ತರಾಗಿರುತ್ತಿದ್ದರು. ಅಭಿಪ್ರಾಯ ಸ್ವಾತಂತ್ರ್ಯದಲ್ಲಿ ಅವರು ವಿಶ್ವಾಸವಿಟ್ಟಿದ್ದರು. ಸಮಾಜವಾದ ಅವರಿಗೆ ಹಿಡಿಸುತ್ತಿರಲ್ಲಿಲ. ಆದರೆ, ಅವರಲ್ಲಿ ಅಂತರ್ಗತ ಉದಾರವಾದ ಇತ್ತು. ಉದಾಹರಣೆಗೆ ಹೇಳುವುದಾದರೆ, 1941ರಲ್ಲಿ ಕೊನೆಯಲ್ಲಿ ನಾವು ಕೆಲವು ಜನ ಸ್ನೇಹಿತರು ಸೋವಿಯೆಟ್ ಒಕ್ಕೂಟದೊಡನೆ ಸ್ನೇಹ ಸಂಬಂಧ ಬೆಳಸುವ ಪ್ರಯತ್ನ ಮಾಡಬಯಸಿದಾಗ ಅವರು ಸಹಭಾಗಿಯಾಗಲಿಲ್ಲ. ಈ ಪ್ರಯತ್ನಕ್ಕೂ ಮತ್ತು ಅವರ ಹಿಂದೂ ಮಹಾ ಸಭೆಯ ನಡುವೆ ಇದ್ದ ಸಂಬಂಧವನ್ನು ಅವರು ಮುಚ್ಚುಮರೆ ಮಾಡಲಿಲ್ಲ. ಅವರು ನಾಗರಿಕ ಸ್ವಾತಂತ್ರ್ಯದ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದರು. ಜಾತೀಯತೆಯ ಸಂಕುಚಿತ ಮನೋಭಾವ ಅವರಲ್ಲಿರಲಿಲ್ಲ. ಕೋಮುವಾದದ ಬಗ್ಗೆ ಅವರು ತಾಳಿದ್ದ ನಿಲುವನ್ನು ಅನೇಕರು ವಿರೋಧಿಸಿ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಈ ವಿಷಯದ ಬಗ್ಗೆ ತಾನೇ ತಮಾಷೆ ಮಾಡಿಕೊಳ್ಳುತ್ತಿದ್ದರು. ನಾನು ಮತ್ತು ಅವರು ಮೊದಲನೆಯ ಲೋಕಸಭಾ ಸದಸ್ಯರಾಗಿದ್ದಾಗ, ನನಗೆ ನೆನಪಿರುವಂತೆ, 1953ರಲ್ಲಿ ಒಮ್ಮೆ ಅವರು ನನಗೆ "ಹಿರೇನ್, ನಿಮಗೆ ಗೊತ್ತುಂಟೆ, ನನ್ನ ವಾಸಕ್ಕೆ, ನನಗೆ ತುಘಲಕ್ ಕ್ರೆಸೆಂಟ್ ಮನೆ ಕೊಟ್ಟಿದ್ದಾರೆ. ತೊಘಲಕ್ ರಸ್ತೆಯಲ್ಲಿ ಅಲ್ಲ, ತೋಘಲಕ್ ಕ್ರೆಸೆಂಟ್ ಕೊಟ್ಟಿದ್ದಾರೆ. ನಾನೇನೂ ಕಣ್ಣುಮಿಟುಕಿಸುತ್ತಿಲ್ಲ, ಆದರೂ ಕೆಲವು ಜನ ನನ್ನನ್ನು ಜಾತಿವಾದಿಯಾದ ಹಿಂದೂ ಅನ್ನುತ್ತಾರೆ" ಎಂದು ಹೇಳಿದ್ದರು.

ಪಂಡಿತ್ ಜವಾಹರಲಾಲ್ ನೆಹರುರವರ ಮತ್ತು ಶ್ಯಾಮ್ ಪ್ರಸಾದ್ ಮುಖರ್ಜಿಯವರ ನಡುವೆ ಭಾವನೆಗಳಲ್ಲಿ ಮತ್ತು ಮನೋಧರ್ಮಗಳಲ್ಲಿ

ಭಿನ್ನಾಭಿಪ್ರಾಯಗಳಿದ್ದವು. ಅದೊಂದು ರೀತಿಯ ಪರಸ್ಪರ ಅಲರ್ಜಿ. ಆದರೆ, ಪರಸ್ಪರ ಗೌರವಾದರಗಳಿದ್ದವು ಎಂಬುದರಲ್ಲಿ ಅನುಮಾನವೇ ಇರಲಿಲ್ಲ. ಸ್ವತಂತ್ರ ಭಾರತದ ಮೊಟ್ಟಮೊದಲ ಮಂತ್ರಿ ಮಂಡಲವನ್ನು ಪಂಡಿತ್ ಜವಾಹರಲಾಲ್ ನೆಹರುರವರು ರಚಿಸಿದಾಗ ಶ್ಯಾಮ್ ಪ್ರಸಾದ್‌ರವರನ್ನು ಮಂತ್ರಿ ಮಂಡಲಕ್ಕೆ ಸೇರಬೇಕೆಂದು ಆಹ್ವಾನಿಸಿದ್ದು ಮಹತ್ತ್ವದ ಸಂಗತಿ. ಆ ಆಹ್ವಾನವನ್ನು ಶ್ಯಾಮ್ ಪ್ರಸಾದ್ ಮುಖರ್ಜಿಯವರು ಒಪ್ಪಿಕೊಂಡು ಮಂತ್ರಿ ಮಂಡಲವನ್ನು ಸೇರಿದರು. ಆದರೆ, ವಿಷಾದದ ಸಂಗತಿ ಎಂದರೆ, ಪೂರ್ವ ಪಾಕಿಸ್ತಾನದ ನಿರಾಶ್ರಿತರ ಬವಣೆ ಬಗ್ಗೆ ಮತ್ತು ಅದಕ್ಕೆ ಸಂಬಂಧಿಸಿದ ಇನ್ನಿತರ ವಿಷಯಗಳ ಬಗ್ಗೆ ನೆಹರೂರವರಿಗೂ ಮತ್ತು ಶ್ಯಾಮ್ ಪ್ರಸಾದ್‌ರವರು ತಮ್ಮ ಮಂಡಲ ಪದವಿಗೆ ರಾಜೀನಾಮೆಯನ್ನಿತ್ತರು. ಭಾರತದ ರಾಜಕೀಯ ಮುಖ್ಯ ವಾಹಿನಿಯಿಂದ ನಿರ್ಗಮಿಸಿದರು. 1952ರ ಮೊಟ್ಟಮೊದಲು ಸಾರ್ವತ್ರಿಕ ಚುನಾವಣೆ ಹೊತ್ತಿಗೆ ಶ್ಯಾಮ್ ಪ್ರಸಾದ್‌ರವರು ತಮ್ಮದ್ರೇ ಆದ ಜನಸಂಘ (ಇಂದಿನ ಭಾರತೀಯ ಜನತಾ ಪಕ್ಷ) ವನ್ನು ಸ್ಥಾಪಿಸಿದರು. ತೀವ್ರಗಾಮಿಯಾಗಿದ್ದ ಹಿಂದೂ ಮಹಾ ಸಭಾವನ್ನು ಇದು ಹಿಂದೆ ಹಾಕಿತು. ಬಹುತೇಕ ಏಕೈಕ ವ್ಯಕ್ತಿಯ ಪಕ್ಷದ 'ನಾಯಕ'ರಾಗಿದ್ದ ಅವರಲ್ಲಿ ಸಂಸದೀಯ ತೀಕ್ಷ್ಣ ಬುದ್ಧಿಯನ್ನು ನಾವು ಕಂಡಿದ್ದೆವು. ಅವರು, ತಮ್ಮದ್ರೇ ಆದ ಪ್ರತಿಪಕ್ಷದ ತಂಡವನ್ನು ಒಗ್ಗೂಡಿಸಿ ನ್ಯಾಷನಲ್ ಡೆಮಾಕ್ರಾಟಿಕ್ ಮೈತ್ರಿ ಕೂಟವನ್ನು ರೂಪಿಸಿದ್ದರು.

ನಮ್ಮ ಹಾಗೂ ಪ್ರತಿ ಪಕ್ಷಗಳಲ್ಲಿ ಮುಖ್ಯ ಭಾಗವಾಗಿದ್ದ ಕಮ್ಯುನಿಷ್ಟ್‌ರ ನಡುವೆ ಮೂಲಭೂತವಾಗಿ ಭಾವನಾತ್ಮಕ ಭಿನ್ನಾಭಿಪ್ರಾಯಗಳಿದ್ದರೂ ಶ್ಯಾಮ್ ಪ್ರಸಾದ್‌ರವರು, ಆ ಮೈತ್ರಿ ಕೂಟವನ್ನು ಸ್ನೇಹಮಯಿ ಹಾಗೂ ದಕ್ಷ ಕೂಟವನ್ನಾಗಿ ರೂಪಿಸಿದ್ದರು. ಪ್ರತಿಬಂಧಕ ಸ್ಥಾನಬದ್ಧತೆಯಂತಹ ವಿಷಗಳ ಮೇಲೆ ನಾವು ಒಂದಾಗಿ ನಿಂತೆವು. ಶ್ಯಾಮ್ ಪ್ರಸಾದ್ ಮುಖರ್ಜಿಯವರ ವಾದ ವೈಖರಿ, ಸಂಸದೀಯ ಕಾರ್ಯಕಲಾಪಗಳಲ್ಲಿ ಅವರಿಗಿದ್ದ ಅನುಭವಗಳಿಂದಾಗಿ ಅವರು ಅಸಾಧಾರಣ ವ್ಯಕ್ತಿಯಾಗಿದ್ದರು. ನಮ್ಮ ಸಾರ್ವಜನಿಕ ಜೀವನದಲ್ಲಿ ಅವರು ಒಂದು ಅಮೂಲ್ಯ ಆಸ್ತಿ. ಬಿರುನುಡಿ, ಚುಚ್ಚು ನುಡಿಗಳನ್ನಾಡುವ ಕಲೆ ಅವರಿಗೆ ಸಿಧಿಸಿತ್ತು. ಒಂದು ಉದಾಹರಣೆಯನ್ನು ಕೊಡಬಹುದುಃ ರಾಜಕೀಯ ವಿರೋಧಿಗಳನ್ನು ಯಾವ ವಿಚಾರಣೆಯನ್ನೂ ಮಾಡದ ಸ್ಥಾನಬದ್ಧತೆಯಲ್ಲಿಟ್ಟಿದ್ದ ಸರ್ಕಾರವನ್ನು ನಗೆಪಾಟಲಿಗೆ ಗುರಿ ಮಾಡಿದಾಗ ಸರ್ಕಾರದ ಕಡೆಯಿಂದ "ಸತ್ಯವನ್ನು ಎದುರಿಸಿ" ಎಂಬ ಮಾತು ಕೇಳಿ ಬಂದಿದ್ದಕ್ಕೆ ಅವರು ಕೊಟ್ಟ ಉತ್ತರ "ಹೇಗೆ ತಾನೇ ಸಾಧ್ಯ, ನಾನೀಗ ಟ್ರೆಜರಿ ಬೆಂಚನ್ನು ಎದುರಿಸುತ್ತಿದ್ದೇನಲ್ಲ".

ನಮ್ಮ ಕಾಲದ ಅಸಾಧಾರಣ ರಾಜಕೀಯ ವ್ಯಕ್ತಿಯ ಜೀವನ ಇಷ್ಟು ಬೇಗನೆ ಮುರುಟಿ ಹೋದದ್ದು, ಅದರಲ್ಲೂ ಕಾಶ್ಮೀರವು ಭಾರತದಲ್ಲಿ ಸಂಪೂರ್ಣವಾಗಿ ವಿಲೀನಗೊಳ್ಳಲು ತಮ್ಮದೇ ಆದ ರೀತಿಯಲ್ಲಿ ಹೋರಾಟ ಮಾಡುತ್ತಿದ್ದಂತಹ ಕಷ್ಟಕರ ಸನ್ನಿವೇಶಗಳಲ್ಲಿ ಅವರು ಅಕಾಲ ಮರಣ ಹೊಂದಿದ್ದು ನಿಜಕ್ಕೂ ದುರಂತ. ಅವರು ಇನ್ನೂ ಜೀವಂತರಾಗಿದ್ದಿದ್ದರೆ, ನಮ್ಮ ಇತಿಹಾಸಕ್ಕೆ ಆ ಹಿರಿಯ ಚೇತನ ಇನ್ನೂ ಹೆಚ್ಚಿನ ಅಮೂಲ್ಯವಾದ ಕೊಡುಗೆಯನ್ನು ನೀಡುತ್ತಿತ್ತು. ಅವರ ವ್ಯಕ್ತಿತ್ವ, ಅವರ ಅಮೋಘ ಪ್ರತಿಭೆ ಎಂದಿಗೂ ಮರೆಯಲಾಗದ್ದು. ಅವರ ಜೀವಿತ ಕಾಲದಲ್ಲಿ ಅವರೊಂದಿಗೆ ತೀರಾ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದ ಈ ಲೇಖಕನಂಥ ಹಲವರೂ ಅವರಿಗೆ ಗೌರವಾರ್ಪಣೆಯನ್ನು ಸಲ್ಲಿಸುವರೆಂಬ ನಂಬಿಕೆ ನನಗಿದೆ.

## ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿ : ಕೆಲವು ನೆನಪುಗಳು.

ಚ. ರಣಬೀರ್ ಸಿಂಗ್ *

ಸ್ವಾತಂತ್ರ್ಯ ಹೋರಾಟಗಾರರ ತಾರಾ ಸಮೂಹದಲ್ಲಿ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿಯವರ ಹೆಸರೇ ಒಂದು ಉಜ್ವಲ ತಾರೆ. ಭಾರತದ ಏಕತೆ ಹಾಗೂ ಸಮಗ್ರತೆಯನ್ನು ಕಾಪಾಡಲು ಅವರು ನೀಡಿದ ಹಲವು ರೀತಿಯ ಕೊಡುಗೆಗಳಿಂದಾಗಿ ಅವರ ಜೀವನ ಕಾಲದಲ್ಲಿ ಅವರೇ ಒಂದು ಐತಿಹ್ಯವಾಗಿದ್ದರು. ಆ ಅಸಾಧಾರಣ ವ್ಯಕ್ತಿಯ ಮತ್ತು ನನ್ನ ನಡುವಣ ಒಡನಾಟಗಳನ್ನು ನೆನವು ಮಾಡಿಕೊಳ್ಳುವುದೇ ಅತ್ಯಂತ ಹರ್ಷದಾಯಕ ಸಂಗತಿ.

ನಾನು, 1935ನೇ ವರ್ಷದಿಂದ ಪ್ರಾರಂಭಿಸುತ್ತೇನೆ, ಇದೇ ವರ್ಷ ಗೌರ್ನಮೆಂಟ್ ಆಫ್ ಇಂಡಿಯಾ ಆಕ್ಟ್ 1935, ಜಾರಿಗೆ ಬಂದಿತು. ಈ ಕಾಯ್ದೆ ಅಡಿಯಲ್ಲಿ ಭಾರತವು ಬ್ರಿಟಿಷ್ ಪ್ರಾಂತ್ಯಗಳು, ರಾಜ ಸಂಸ್ಥಾನಗಳು ಹಾಗೂ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ದೆಹಲಿ ಮುಂತಾದ ಪ್ರಾಂತಗಳಿಂದ ಕೂಡಿದ ಸಂಯುಕ್ತ ರಾಷ್ಟ್ರವಾಗಬೇಕಿತ್ತು. ಎರಡು ಶಾಸನ ಸಭೆಗಳುಳ್ಳ ಸಂಯುಕ್ತ ಶಾಸನ ಸಭೆ ಇರಬೇಕಾಗಿತ್ತು. ಅದರಲ್ಲೂ ರಾಜ್ಯಗಳಿಗೆ ಅಸಮಪ್ರಮಾಣದ ಪ್ರಾತಿನಿಧ್ಯ ಕಲ್ಪಿಸಲಾಗಿತ್ತು. 11 ಬ್ರಿಟಿಷ್ ಪ್ರಾಂತಗಳ ಪೈಕಿ, 4 ಪ್ರಾಂತಗಳು, ಎಂದರೆ ವಾಯುವ್ಯ ಗಡಿ ಪ್ರಾಂತ್ಯಗಳು, ಸಿಂಧ್, ಪಂಜಾಬ್ ಮತ್ತು ಬಂಗಾಳಗಳಲ್ಲಿ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿ ಇದ್ದರು, ಈ ಕಾಯ್ದೆ ಅಡಿಯಲ್ಲಿ 1937 ರಲ್ಲಿ ಪ್ರಾಂತೀಯ ಶಾಸನ ಸಭೆಗಳಿಗೆ ಚುನಾವಣೆಗಳನ್ನು ನಡೆಸಲಾಯಿತು. ಈ ಚುನಾವಣೆಗಳಲ್ಲಿ ಸ್ಪರ್ಧಿಸಿದ ಪಕ್ಷಗಳೆಂದರೆ "ಇಂಡಿಯನ್ ನ್ಯಾಷನಲ್ ಕಾಂಗ್ರೆಸ್", "ಮುಸ್ಲಿಂ ಲೀಗ್", "ಹಿಂದು ಮಹಾಸಭಾ", "ಜಮೀನ್‌ದಾರಿ ಲೀಗ್" (ಈ ಪಕ್ಷವನ್ನು ಸ್ಥಾಪಿಸಿದುವರೆಂದರೆ ಸರ್ ಫಜಲ್ ಹುಸೇನ್, ಸರ್ ಸಿಕಂದರ್ ಹಯಾತ್‌ಖಾನ್, ಮತ್ತು ಸರ್ ಚೋಟುರಾಮ್) ಮತ್ತು ಎ.ಕೆ. ಫಜಲುಲ್ ಹಖ್‌ರ ಕೃಷಿಕ್ ಪ್ರಜಾಪಾರ್ಟಿ, ಹನ್ನೊಂದು ಪ್ರಾಂತ್ಯಗಳ ಪೈಕಿ ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ 1937ರ ಜುಲೈನಲ್ಲಿ ಮಂತ್ರಿ ಮಂಡಲವನ್ನು ರಚಿಸಿತು. ಆಶ್ಚರ್ಯವೆಂದರೆ ಮುಸ್ಲಿಂಲೀಗ್ ಪಕ್ಷ, ಮುಸ್ಲಿಂ ಜನಸಂಖ್ಯೆ ಅಧಿಕವಾಗಿದ್ದ ಪ್ರಾಂತ್ಯಗಳಲ್ಲೇ ಬಹುಮತವನ್ನು ಗಳಿಸಲಾಗಲಿಲ್ಲ. ಬಂಗಾಳದಲ್ಲಿ ಮುಸ್ಲಿಂ ಲೀಗಿನ ಚುನಾವಣಾ ಕಾರ್ಯ ತಂತ್ರವನ್ನು ವಿಫಲಗೊಳಿಸಿದ ಕೀರ್ತಿ ಡಾ॥ ಮುಖರ್ಜಿಯವರಿಗಲ್ಲದೆ ಬೇರೆ ಯಾರಿಗೂ

---

* ರಣಬೀರ್ ಸಿಂಗ್ ಅವರು ಮಾಜಿ ಸಂಸತ್ ಸದಸ್ಯರು ಹಾಗೂ ಡಾ॥ ಮುಖರ್ಜಿಯವರ ಸಮಕಾಲೀನರು.

ಸಲ್ಲದು, ಅವರ ಪ್ರಯತ್ನದ ಫಲವಾಗಿ ಶ್ರೀ ಎ.ಕೆ. ಹಕ್‌ರವರ ನೇತೃತ್ವದ ಕೃಷಿಕ್ ಪ್ರಜಾ ಪಾರ್ಟಿ ಚುನಾವಣೆಯಲ್ಲಿ ಜಯಗಳಿಸಿ ಬಂಗಾಳದಲ್ಲಿ ಮಂತ್ರಿ ಮಂಡಲವನ್ನು ರಚಿಸಿತು.

1939ರಲ್ಲಿ ಎರಡನೇ ಮಹಾಯುದ್ಧದ ಪ್ರಾರಂಭ, ಭಾರತದ ರಾಷ್ಟ್ರೀಯ ನಾಯಕರು ಮಹಾಯುದ್ಧದ ಬಗೆಗೆ ವ್ಯಕ್ತಪಡಿಸಿದ ಕಡು ವಿರೋಧ, ಕಾಂಗ್ರೆಸ್‌ನ ಮಂತ್ರಿ ಮಂಡಲಗಳ ರಾಜೀನಾಮೆ, ಮಹಾತ್ಮಗಾಂಧಿಯವರು ಸತ್ಯಾಗ್ರಹವನ್ನು ಪ್ರಾರಂಭಿಸಿದ್ದು ಇವೆಲ್ಲವೂ ಇಲ್ಲಿ ಸ್ಮರಣೀಯ. 1940ರ ಮತ್ತು ಆ ತರುವಾಯದ ಘಟನೆಗಳಿಂದಾಗಿ ಆಗಿನ ಅಖಂಡ ಭಾರತದ ರಾಜಕೀಯ ರಂಗಗಳಲ್ಲಿ ಮುಸ್ಲಿಂಲೀಗ್ ನಿರ್ಣಯವೊಂದನ್ನು ಅಂಗೀಕರಿಸಿ, ಸ್ವಾತಂತ್ರ್ಯ ನಂತರ, ಭಾರತವನ್ನು ವಿಭಜಿಸಿ ಮುಸ್ಲಿಮರು ಅಧಿಕ ಸಂಖ್ಯೆಲ್ಲಿರುವ ಬಂಗಾಳ್, ಪಂಜಾಬ್ ಸಿಂಧ್, ಮತ್ತು ವಾಯುವ್ಯ ಗಡಿ ಪ್ರಾಂತ್ಯಗಳಿಂದ ಕೂಡಿದ ಪಾಕಿಸ್ತಾನವನ್ನು ಸೃಜಿಸಬೇಕೆಂಬ ಬೇಡಿಕೆ ಮುಂದಿಟ್ಟಿತು. ಇಂಥ ಬಹು ಸೂಕ್ಷ್ಮವಾದ ಪರ್ವ ಕಾಲದಲ್ಲಿ ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿಯವರು ಮುಂದೆ ಬಂದೆ, ಮುಸ್ಲಿಂ ಲೀಗಿನ ಈ ಅಪವಿತ್ರ ತಂತ್ರವನ್ನು ಕಠೋರವಾಗಿ ವಿರೋಧಿಸಿದರು. ಬಂಗಾಳದಲ್ಲಿ ಮುಸ್ಲಿಂ ಲೀಗ್ ಸರ್ಕಾರದ ರಚನೆಗೆ ಅವಕಾಶ ಕೊಡದಿರಲು ಡಾ|| ಮುಖರ್ಜಿಯವರು ಶ್ರೀ ಎ.ಕೆ. ಫಜಲುಲ್ ಹಕ್‌ರವರಿಗೆ ನೀಡಿದ ಸಹಕಾರ ಹಾಗೂ ನೆರವು ಕಡಿಮೆಯದೇನಲ್ಲ. ಆದರೆ, ಆ ತರುವಾಯ, ನಿಜಾಮುದ್ದೀನರ ನಾಯಕತ್ವದಲ್ಲಿ ಮತ್ತು ಬ್ರಿಟಿಷರ ಸಹಕಾರದಿಂದ ಮುಸ್ಲಿಂಲೀಗ್ ಬಂಗಾಳದಲ್ಲಿ ಸರ್ಕಾರವನ್ನು ರಚಿಸುವಲ್ಲಿ ಯಶಸ್ವಿಯಾದರೂ ವಿಭಜನೆಗೆ ಡಾ|| ಮುಖರ್ಜಿಯವರು ಖಡಾ ಖಂಡಿತವಾಗಿ ವಿರೋಧಿಸಿದ್ದು ಇಂದಿಗೂ ಸ್ಮರಣೀಯ.

1946ರಲ್ಲಿ ಪ್ರಾಂತೀಯ ಶಾಸನ ಸಭೆಗಳಿಗೆ ಚುನಾವಣೆಯಗಳು ನಡೆದವು. ಮುಸ್ಲಿಂಲೀಗ್, ಬಂಗಾಳ ಮತ್ತು ಸಿಂಧ್ ಪ್ರಾಂತ್ಯಗಳಲ್ಲಿ ಸರ್ಕಾರ ರಚಿಸುವಲ್ಲಿ ಯಶಸ್ವಿ ಯಾಯಿತು. ಮಿಕ್ಕ ರಾಜ್ಯಗಳಲ್ಲಿ ಕಾಂಗ್ರೆಸ್ ಸರ್ಕಾರವನ್ನು ಸಚಿಸಿತು. ಪಂಜಾಬ್‌ನಲ್ಲಿ ಸಮ್ಮಿಶ್ರ ಸರ್ಕಾರ ರಚಿತವಾಯಿತು.

ಮುಸ್ಲಿಂ ಲೀಗ್ ಪ್ರಾರಂಭಿಸಿದ ನೇರ ಕ್ರಮದ ಪರಿಣಾಮವಾಗಿ ಬಂಗಾಳ್, ಪಂಜಾಬ್ ಮತ್ತು ಇನ್ನಿತರ ನಗರ ಪ್ರದೇಶಗಳಲ್ಲಿ ಹಿಂದೆಂದೂ ಕಾಣದಂತಹ ಕೋಮು ಗಲಭೆಗಳು ಉಂಟಾದವು. ಡಾ|| ಮುಖರ್ಜಿಯವರ ಮನಸ್ಸು ತುಂಬಾ ಕಲಕಿತು, ಕೋಮು ಗಲಭೆಯನ್ನು ಹತ್ತಿಕ್ಕಲು ಮುಖರ್ಜಿಯವರು ತಮ್ಮ ಶಕ್ತಿಮೀರಿ ಶ್ರಮಿಸಿದರು.

ಈ ಬಗೆಯ ಅಶಾಂತಿಯ ಬೆಳವಣಿಗೆಗಳ ತರುವಾಯ 1947ರಲ್ಲಿ ಬ್ರಿಟಿಷ್ ಸರ್ಕಾರ ವಿಭಜನೆಯ ಬಗೆಗೆ ತೆಗೆದುಕೊಂಡ ನಿರ್ಧಾರ ದುರದೃಷ್ಟಕರ. ಡಾ|| ಮುಖರ್ಜಿಯವರು ವಿಭಜನೆಯ ಕಲ್ಪನೆಯನ್ನು ವಿರೋಧಿಸುತ್ತಲೇ ಬಂದಿದ್ದರು. ದೇಶದ

ವಿಭಜನೆ ಅನಿವಾರ್ಯವೆಂದು ಅರಿತಾಗ ತಮ್ಮ ಎಲ್ಲಾ ಪ್ರಯತ್ನಗಳನ್ನು ಬಂಗಾಳ ಮತ್ತು ಪಂಜಾಬಿನ ಏಕತೆಗೆ ಮುಡಿಪಾಗಿಟ್ಟರು. ಕಲ್ಕತ್ತ ಮತ್ತು ಲಾಹೋರ್‌ಗಳನ್ನು ಪಾಕಿಸ್ತಾನಕ್ಕೆ ಸೇರಿಸಿಕೊಳ್ಳಲು ಮುಸ್ಲಿಂಲೀಗ್ ಅವಿರತ ಪ್ರಯತ್ನ ಮಾಡಿತ್ತು. ಆದರೆ, ಡಾ|| ಮುಖರ್ಜಿಯವರು ಇತರ ಪಕ್ಷಗಳ ನಾಯಕರುಗಳ ಅದರಲ್ಲೂ ಮುಖ್ಯವಾಗಿ ಕಾಂಗ್ರೆಸ್ ನಾಯಕರ ಸಕ್ರಿಯ ಸಹಕಾರದಿಂದ ಕಲ್ಕತ್ತಾವನ್ನು ಭಾರತದಲ್ಲೇ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದರು.

1947 ಆಗಸ್ಟ್ 15ರಂದು ಭಾರತ ಸ್ವತಂತ್ರವಾಯಿತು. ಆದರೆ, ವಿಭಜನೆ ಗೊಂಡಿತು. ಸಂಕಷ್ಟಗಳು ಪ್ರಾರಂಭವಾದರು. ರಾಜ ಸಂಸ್ಥಾನಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸಿಕೊಳ್ಳುವುದೇ ಸ್ವತಂತ್ರ ಭಾರತದ ನಾಯಕರ ಕಳಕಳಿಯಾಗಿತ್ತು. ವಿಶಾಲ ಪ್ರದೇಶವಾದ ಜಮ್ಮು ಮತ್ತು ಕಾಶ್ಮೀರ, ಅತ್ಯಂತ ಜನಸಂಖ್ಯೆಯುಳ್ಳ ಹೈದ್ರಾಬಾದ್ ಸಂಸ್ಥಾನ ಈ ಎರಡೂ ಸಂಸ್ಥಾನಗಳು ಭಾರತದ ಒಕ್ಕೂಟದಲ್ಲಿ ವಿಲೀನವಾಗಲು ಒಪ್ಪಲಿಲ್ಲ.

ಡಾ|| ಶ್ಯಾಮ್‌ಪ್ರಸಾದ್ ಮುಖರ್ಜಿಯವರು ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ಬಂಗಾಳದ ಏಕತೆಯನ್ನು ಕಾಪಾಡುವಲ್ಲಿ ಮಾಡಿದ್ದ ಪ್ರಯತ್ನಗಳು ಎಷ್ಟು ಮುಖ್ಯವೋ, ಸ್ವತಂತ್ರ ಭಾರತದಲ್ಲಿ ಹಲವಾರು ಸ್ಥಾನಮಾನಗಳಲ್ಲಿ ಅವರು ಮಾಡಿದ ಕೆಲಸಗಳು ಅಷ್ಟೇ ಮುಖ್ಯವಾದವುಗಳಾಗಿದ್ದವು. ಪಂಡಿತ ಜವಹರ್‌ಲಾಲ್ ನೆಹರು ನೇತೃತ್ವದ ಒಕ್ಕೂಟ ಮಂತ್ರಿ ಮಂಡಲದಲ್ಲಿದ್ದರು. ನಾನು ಲೋಕಸಭಾ ಸದಸ್ಯನಾಗಿದ್ದುದರಿಂದ ಅವರ ಕೆಲಸಗಳನ್ನು ಹತ್ತಿರದಿಂದ ನೋಡುವ ಅವಕಾಶ ದೊರಕಿತ್ತು. ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿಗಳಾಗಿದ್ದ ಅವರು, ತಮ್ಮ ಚತುರತೆ ಮತ್ತು ಚುರುಕು ಬುದ್ಧಿಯಿಂದ ಸಮರ್ಥ ನಾಯಕನೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು.

ಎಲ್ಲಕ್ಕಿಂತ ಮಿಗಿಲಾಗಿ ಡಾ|| ಮುಖರ್ಜಿಯವರು ಪ್ರತಿಭಾವಂತ ಸಂಸದೀಯ ಪಟುವಾಗಿದ್ದರು. ಸಂಸತ್ತಿನ ಚರ್ಚೆಗಳಲ್ಲಿ ತುಂಬಾ ಆಸಕ್ತಿವಹಿಸುತ್ತಿದ್ದರು. ಲೋಕಸಭೆಯಲ್ಲಿ ನಾನು, ನೀರಾವರಿ ಡೀಸೆಲ್ ಇಂಜಿನ್ನಿನ ಬೆಲೆಯನ್ನು ಹತೋಟಿಯಲ್ಲಿಡಬೇಕೆಂದು, ಒತ್ತಾಯಿಸಿದ ದಿನ ನನಗೆ ಈಗಲೂ ನೆನಪಿದೆ. ಅದಕ್ಕೆ ಮುಖರ್ಜಿಯವರು, ನಿಯಂತ್ರಣ ಇರಕೂಡದೆನ್ನುವ ಮತ್ತು ನಿಯಂತ್ರಿತ ಅರ್ಥ ವ್ಯವಸ್ಥೆಯನ್ನು ವಿರೋಧಿಸುವ ಸನ್ಮಾನ್ಯ ಸದಸ್ಯರೇ ಡೀಸೆಲ್ ಇಂಜಿನ್‌ಗಳ ಬೆಲೆಯ ಹತೋಟಿ ಬಗ್ಗೆ ಒತ್ತಾಯಿಸುತ್ತಿರುವುದು ನನಗೆ ಆಶ್ಚರ್ಯ ಉಂಟು ಮಾಡಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೂ, ರೈತರ ಹಿತದೃಷ್ಟಿಯಿಂದ ದವಸ ಧಾನ್ಯಗಳ ಬೆಲೆ ನಿಯಂತ್ರಣದ ವಿರುದ್ಧ ಮಾತನಾಡುವ ಅವಕಾಶವನ್ನು ನಾನು ಕಳೆದುಕೊಳ್ಳಲಿಲ್ಲ.

ಶ್ಯಾಮ್ ಪ್ರಸಾದ್‌ರವರು ನಿಷ್ಕಳಂಕರು. ಮಾತುಗಾರರೂ ಕೂಡ. ಅವರ ಧೈರ್ಯ ದೃಢ ನಿಶ್ಚಯಕ್ಕೆ ನೂರಾರು ಉದಾಹರಣೆಗಳು ಇವೆ. 370ನೇ ವಿಧಿಯನ್ನು ಹಾಗೂ ಮುಂಚಿವಾಗಿ ಅನುಮತಿ ಪಡೆಯದೇ ಜಮ್ಮು ಮತ್ತು ಕಾಶ್ಮೀರಕ್ಕೆ ಪ್ರಶೇಶಿಸುವುದರ ಮೇಲೆ ವಿಧಿಸಿದ್ದ ಇತರ ನಿರ್ಬಂಧಗಳನ್ನು ವಿರೋಧಿಸಿದ್ದರು. ಜಮ್ಮು ಮತ್ತು ಕಾಶ್ಮೀರವು ಭಾರತದ ಒಕ್ಕೂಟದಲ್ಲಿ ಸಂಪೂರ್ಣವಾಗಿ ವಿಲೀನವಾಗಬೇಕೆಂಬುದರ ಪರವಾಗಿದ್ದರು. ಸರ್ಕಾರಕ್ಕೆ ರಾಜೀನಾಮೆ ಸಲ್ಲಿಸಿದ ನಂತರ 'ಭಾರತೀಯ ಜನ ಸಂಘ'ದ ಸಂಸ್ಥಾಪಕರಾದರು ಮತ್ತು ಅದರ ಮೊಟ್ಟಮೊದಲ ಅಧ್ಯಕ್ಷರೂ ಆದರು. ಸಂಸತ್ತಿನಲ್ಲಿ ಪ್ರತಿಪಕ್ಷದ ನಾಯಕರಾಗಿ ಸ್ಪಷ್ಟವಾಗಿ ವಿಷಯಗಳನ್ನು ಪ್ರತಿಪಾದಿಸುತ್ತಿದ್ದರು. ತಮ್ಮ ಅಭಿಪ್ರಾಯಗಳ ಬಗೆಗೆ ಪ್ರತಿಕೂಲ ಟೀಕೆ ಬರುವಂತೆ ಅದರಲ್ಲೂ ಪಂಡಿತ್ ಜವಾಹರ್‌ಲಾರ್ ನೆಹರೂ ಅವರಿಂದ ಟೀಕೆ ಬರುವಂತೆ ಮಾಡುವಲ್ಲಿ ಅವರು ಯಶಸ್ವಿಯಾಗುತ್ತಿದ್ದರು.

ಅವರಿಗೆ ಭಾರತದ ಏಕತೆ ಮತ್ತು ಸಮಗ್ರತೆ ಬಗ್ಗೆ ಇದ್ದ ಪ್ರೀತಿ ಅವರಿಗೆ ಎಲ್ಲ ಜನರ ಗೌರವಾದರಗಳನ್ನು ಗಳಿಸಿಕೊಟ್ಟಿತು. ಜಮ್ಮು ಮತ್ತು ಕಾಶ್ಮೀರಕ್ಕೆ ಪ್ರವೇಶ ಮಾಡಬಾರದೆಂದು ಅವರ ಮೇಲೆ ವಿಧಿಸಿದ್ದ ನಿರ್ಬಂಧಗಳನ್ನು ಖಂಡಿಸಿ, ಅವರು ಮಾಡಿದ ಭಾಷಣ ಅವರ ದೇಶಭಕ್ತಿಯ ಪ್ರತೀಕ. ಅವರು ಭಾರತದ ಏಕೀಕರಣಕ್ಕಾಗಿ ಹೋರಾಡಿದರು. ಅದಕ್ಕಾಗಿ ಅವರು ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

## ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿ

## ಹಿರಿಯ ಚೇತನ - ಗರಿಮೆಯ ಬಾಳ್ವೆ

- ಕೆ.ಆರ್. ಮಲ್ಕಾನಿ *

"ಹಿರಿಯ ಚೇತನ ಆಗಲಿದೆ ......... ನೋಡಲ್ಲಿ: ಅಸಾಧಾರಣ ಪ್ರತಿಭೆ ಅಸ್ತಂಗತವಾಗಿದೆ .........

ಕಾಶ್ಮೀರದಲ್ಲಿ ಸ್ಥಾನಬದ್ಧತೆಯಲ್ಲಿದ್ದಾಗ, ನಿಗೂಢ ಸನ್ನಿವೇಶಗಳಲ್ಲಿ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿಯವರು ಆಕಾಲಿಕ ಮರಣ ಹೊಂದಿದಾಗ ಇವು ಕವಿ ಹರೀಂದ್ರನಾಥ್ ಚಟ್ಟೋಪಾಧ್ಯಾಯರು ನುಡಿದ ನುಡಿಮುತ್ತುಗಳು. ಮುಖರ್ಜಿಯವರು ನಿಜವಾಗಿಯೂ, ವಿದ್ವಾಂಸ, ರಾಜನೀತಿಜ್ಞ ಮತ್ತು ಸಜ್ಜನ. ಈ ಎಲ್ಲವೂ ಮೇಳವಿಸಿದ ಅದ್ಭುತ ವ್ಯಕ್ತಿ.

ಉನ್ನತ ವ್ಯಾಸಂಘವನ್ನು ಯಶಸ್ವಿಯಾಗಿ ಮುಗಿಸಿದ್ದ ಅವರು ತಮ್ಮ 32ರ ಕಿರಿ ವಯಸ್ಸಿನಲ್ಲೇ ಕಲ್ಕತ್ತಾ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು. ಅವರು ತಮ್ಮ ಜೀವಿತದ ಹೆಚ್ಚಿನ ವೇಳೆಯನ್ನೆಲ್ಲಾ ಶೈಕ್ಷಣಿಕ ಕ್ಷೇತ್ರದಲ್ಲೇ ವಿನಿಯೋಗಿಸಬಹುದಾಗಿದ್ದರೂ ಕೋಮುವಾದದ ಸುಳಿಗೆ ಸಿಕ್ಕಿದ ರಾಜಕೀಯದಿಂದಾಗಿ ಅನಿವಾರ್ಯವಾಗಿ ಅವರು ಸಾರ್ವಜನಿಕ ಕ್ಷೇತ್ರವನ್ನು ಪ್ರವೇಶಿಸಬೇಕಾಯಿತು. ಬಂಗಾಳದ ವಿಧಾನ ಪರಿಷತ್‌ನಲ್ಲಿ 1930 ರಿಂದ ವಿಶ್ವವಿದ್ಯಾಲಯವನ್ನು ಪ್ರತಿನಿಧಿಸಿದಂದಿನಿಂದಲೂ ಆಧುನಿಕ ವಿಚಾರಗಳಿಗೆ ಅವರೇ ಮುಂಚೂಣಿಯಲ್ಲಿದ್ದು ಮಾತನಾಡುತ್ತಿದ್ದರು.

ಢಾಕಾ ನವಾಬನ ರಕ್ತ ಸಂಬಂಧಿಯಾದ, ಮೆಟ್ರಿಕ್ಯುಲೇಷನ್ ಸಹ ಪಾಸಾಗದ ಷಹಬುದ್ದೀನ್‌ರನ್ನು ಉಪಕುಲಪತಿಯನ್ನಾಗಿ ನೇಮಿಸಿದಾಗ ಅವರು ಚಕಿತರಾದರು. ಆ ಬಗ್ಗೆ ಡಾ॥ ಶ್ಯಾಮ್ ಪ್ರಸಾದ್‌ರವರು ಗುರುತರ ಚಳುವಳಿಯನ್ನು ಪ್ರಾರಂಭಿಸಿದರು, ಬಂಗಾಳದಲ್ಲಿ ಜಾತೀವಾರು ವಿದ್ಯಾಭ್ಯಾಸಕ್ಕೆ ಉದ್ದೇಶಿಸಿದ್ದ ಹೊಸ ಶಿಕ್ಷಣ ವಿಧೇಯಕವನ್ನು ಕೈಬಿಡುವವರೆಗೂ ಚಳುವಳಿ ನಿಲ್ಲಿಸಲಿಲ್ಲ.

ರಾಷ್ಟ್ರೀಯ ರಾಜಕಾರಣದಲ್ಲಿ ಅವರು ಸಕ್ರಿಯವಾಗಿದ್ದಾಗ 1939ರಲ್ಲಿ ಗಾಂಧೀಜಿಯವರು ಅವರನ್ನು ಕಾಂಗ್ರೆಸ್‌ಗೆ ಸೇರುವಂತೆ ಆಹ್ವಾನಿಸಿದರು. ಆದರೆ, ಹೆಚ್ಚುತ್ತಿದ್ದ ಮುಸ್ಲಿಂ ಲೀಗಿನ ಹಾವಳಿಯನ್ನು ತಡೆಯಬಲ್ಲದು ಎಂದು ಅವರು ಭಾವಿಸಿದ್ದ ಹಿಂದೂ ಮಹಾಸಭಾವನ್ನು ಸೇರಲು ಅವರು ನಿಶ್ಚಯಿಸಿದರು. ಬಂಗಾಳದಲ್ಲಿ ಹಿಂದೂ ಮಹಾಸಭಾ ಜನಪ್ರಿಯವಾಯಿತು.

---

* ಶ್ರೀ ಮಲ್ಕಾನಿಯವರು ಹಿರಿಯ ಪತ್ರಿಕೋದ್ಯಮಿ

ಕಾಂಗ್ರೆಸ್ ಪಕ್ಷವು 1937ರಲ್ಲಿ ಸಂಮಿಶ್ರ ಸರ್ಕಾರವನ್ನು ರಚಿಸಲು ಫಜಲುಲ್ ಹಕ್‌ರವರ ಕೃಷಿಕ್ ಪ್ರಜಾ ಪಾರ್ಟಿಯೊಡನೆ ಸೇರದೆ ತಪ್ಪು ಮಾಡಿತು. ಪರಿಣಾಮವಾಗಿ ಹಕ್, ಮುಸ್ಲಿಂ ಲೀಗ್‌ನೊಡನೆ ಸೇರಿ ಸಂಮಿಶ್ರ ಸರ್ಕಾರವನ್ನು ರಚಿಸಿದರು. ಅವರೂ ಸಹ ಆ ಪಕ್ಷಕ್ಕೆ ಸೇರಿಕೊಂಡರು. ಜಿನ್ನಾರವರು "ಅತಿ ಪ್ರತಿಷ್ಠೆಯ ಘೇರೋಗಿಂತಲೂ ಅತಿ ಪ್ರತಿಷ್ಠೆ"ಯ ವ್ಯಕ್ತಿಯೆಂಬುದು ಹಕ್‌ರಿಗೆ ಕಂಡುಬಂದಾಗ ಹಾಗೂ ಜಿನ್ನಾರಿಂದ ಬೇರ್ಪಟ್ಟಾಗ ಡಾ॥ ಮುಖರ್ಜಿಯವರು ಶೀಘ್ರವಾಗಿ ಹಕ್‌ರೊಂದಿಗೆ ಸೇರಿ ಇಬ್ಬರೂ ಬಂಗಾಳಕ್ಕೆ ಕೋಮುವಾದಿ ಅಲ್ಲದ ಸರ್ಕಾರವನ್ನು ಕೊಟ್ಟರು. ಹಿಂದೂ ಮಹಾಸಭಾದ ನಾಯಕನನ್ನು ಹಕ್‌ರವರು ಆರ್ಥಿಕ ಮಂತ್ರಿಯನ್ನಾಗಿ ಮಾಡಿದ್ದನ್ನು ಮುಸ್ಲಿಂ ಲೀಗಿನವರು ಮೂದಲಿಸಿದರು. ಹಕ್‌ರವರು ಹಾಸ್ಯ ಚಟಾಕಿ ಹಾರಿಸಿ "ಯಾವುದು ಒಳ್ಳೆಯದು ? ಸಿಂಹ ಬೋನಿನಲ್ಲಿ ಇರುವುದೆ ಅಥವಾ ಹೊರಗೆ ಇರುವುದೇ ?".

ಹಕ್‌ರವರು ತಮ್ಮ ಚಿಕ್ಕ ವಯಸ್ಸಿನಲ್ಲಿ, ಡಾ॥ ಶ್ಯಾಮ್ ಪ್ರಸಾದರ ತಂದೆ, ಅಶುತೋಷಮುಖರ್ಜಿಯವರ ಸಹಾಯಕರಾಗಿದ್ದರು. ಪ್ರಯುಕ್ತ, ಶ್ಯಾಮ್ ಮತ್ತು ಹಕ್‌ರವರು ಆತ್ಮೀಯ ಸ್ನೇಹಿತರಾಗಿದ್ದರು. ಶ್ಯಾಮ್ ಪ್ರಸಾದ್‌ರವರು ಹಕ್‌ರವರನ್ನು ಹಿಂದೂ ಮಹಾಸಭೆಯ ಕಾರ್ಯಕಾರಿ ಸಮಿತಿಗೆ ಸಹ ಕರೆದುಕೊಂಡು ಹೋಗುತ್ತಿದ್ದರು.

ಶ್ಯಾಮ್ ಪ್ರಸಾದ್‌ರಲ್ಲಿದ್ದ ಸಿಂಹ ಬಹಳ ದಿನಗಳವರೆಗೆ ಪಂಜರದೊಳಗಿರಲಿಲ್ಲ. ಗೌರ್‍ನರ್‌ರವರು ಪ್ರವಾಹ ಪೀಡಿತ ಮಿಡ್ನಾಪುರ್ ಜನಗಳಿಗೆ ನೆರವು ನೀಡಲು ನಿರಾಕರಿಸಿದಾಗ ಮತ್ತು 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಆ ಜನರು ಕ್ರಿಯಾಶೀಲರಾಗಿ ಭಾಗವಹಿಸಿದ್ದಕ್ಕಾಗಿ ಶಿಕ್ಷಿಸ ಹೊರಟಾಗ ಮುಖರ್ಜಿಯುವರು ತಮ್ಮ ಸ್ಥಾನಕ್ಕೆ ರಾಜೀನಾಮೆಯನ್ನಿತ್ತರು. ಅವರ ರಾಜೀನಾಮೆ ಪತ್ರ ಬ್ರಿಟಿಷ್‌ರ ದುರಾಡಳಿತಕ್ಕೆ ಹಿಡಿದ ಕನ್ನಡಿಯಂತಿತ್ತು. ಈ ಪತ್ರದ ಪ್ರಕಟಣೆಯಾಗದಂತೆ ಸರ್ಕಾರ ನಿಷೇಧಿಸಿತು.

ಬಂಗಾಳದಲ್ಲಿ ಭೀಕರ ಕ್ಷಾಮ ತಲೆದೋರಿದಾಗ, ಬಂಗಾಳದ ಪ್ರಮುಖ ನಾಯಕರಲ್ಲಿ ಶ್ಯಾಮ್ ಪ್ರಸಾದ್ ಮುಖರ್ಜಿಯವರೊಬ್ಬರೇ ಸೆರೆಮನೆಯಿಂದ ಹೊರಗಿದ್ದವರು. ಹಸಿವಿನಿಂದ ಕಂಗೆಟ್ಟಿದ್ದ ಜನತೆಗೆ ಹಗಲು ರಾತ್ರಿಯೆನ್ನದೆ ಸೇವೆ ಮಾಡಿದರು. ಕ್ಷಾಮ ಪೀಡಿತರ ಬಗ್ಗೆ ಅವರು ಸಲ್ಲಿಸಿದ ಸೇವೆಯನ್ನು ಮಹಾತ್ಮಾ ಗಾಂಧೀಜಿಯವರು ಹೊಗಳಿ ಮುಖರ್ಜಿಯವರು ತಮ್ಮ ಕರ್ತವ್ಯ ಮಾಡಿದ್ದಾರೆಂದು ಮೆಚ್ಚುಗೆ ವ್ಯಕ್ತಪಡಿಸಿದರು.

1946ರಲ್ಲಿ ಚುನಾವಣೆಗಳನ್ನು ಘೋಷಿಸಿದಾಗ ಶ್ಯಾಮ್ ಪ್ರಸಾದ್‌ರವರು ನೆಹರುರವರಿಗೆ ಕೆಲವು ಕ್ಷೇತ್ರಗಳಲ್ಲಿ ಹಿಂದೂ ಮಹಾಸಭಾ ಗೆಲ್ಲುವುದಕ್ಕೆ ಅವಕಾಶ ಮಾಡಿಕೊಡಬೇಕು, ಇದರಿಂದ ಮುಸ್ಲಿಂ ಲೀಗ್‌ನ್ನು ತಡೆಯಬಹುದು ಎಂದು ಸಲಹೆ ಮಾಡಿದರು. ಆದರೆ, ನೆಹರುರವರು ಅವರ ಸಲಹೆಗಳನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

ಕಾಂಗ್ರೆಸ್ಸೇ ಮುಸ್ಲಿಂ ಕ್ಷೇತ್ರಗಳಲ್ಲಿ ಸ್ಪರ್ಧಿಸುತ್ತದೆ. ಹಾಗೂ ಆ ಕ್ಷೇತ್ರಗಳಲ್ಲಿ ಗೆಲ್ಲುತ್ತದೆ ಎಂದರು. ಹಿಂದೂ ಮಹಾಸಭೆಯು ಕೆಲವು ಕ್ಷೇತ್ರಗಳಲ್ಲಿ ಜಯಗಳಿಸಿತು. ವಾಯುವ್ಯ ಗಡಿನಾಡು ಪ್ರಾಂತ್ಯದ ಹೊರಗೆ ಮುಸ್ಲಿಂ ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದ ಕಾಂಗ್ರೆಸ್ ಎಲ್ಲ ಸ್ಥಾನಗಳಲ್ಲೂ ಪರಾಭಾವಗೊಂಡಿತು. ವಿಭಜನೆಗಾಗಿ ಮತ್ತಷ್ಟು ಒತ್ತಾಯ ಬರತೊಡಗಿತು. ಕಾಂಗ್ರೆಸ್ ಆ ಸುಳಿಯಲ್ಲಿ ಸಿಲುಕಿಕೊಂಡಿತು.

ಈ ಸಂದರ್ಭದಲ್ಲಿ ಸ್ವತಂತ್ರ ಬಂಗಾಳ ರಾಜ್ಯದ ಪ್ರಸ್ತಾವನೆ ಬಂದಿತು. ಅದು ಕಾರ್ಯರೂಪಕ್ಕೆ ಬಂದಿದ್ದರೆ ಕಲ್ಕತ್ತಾವೂ ಸೇರಿ ಪಶ್ಚಿಮ ಬಂಗಾಳ ಭಾರತಕ್ಕೆ ದಕ್ಕುತ್ತಿರಲಿಲ್ಲ. ಸೆಣಬು ಬೆಳೆಯುವ ಜಮೀನುಗಳೂ ಹಾಗೂ ಜವಳಿ ಕಾರ್ಖಾನೆಗಳು ಭಾರತದಲ್ಲಾಗಲೀ ಅಥವಾ ಪಾಕಿಸ್ತಾನದಲ್ಲಾಗಲೀ ಉಳಿಯುವುದು ಬ್ರಿಟಿಷರಿಗೆ ಬೇಕಿರಲಿಲ್ಲವಾದ್ದರಿಂದ ವಾಣಿಜ್ಯ ದೃಟಿಯಿಂದ ಬ್ರಿಟಿಷರು ಈ ಪ್ರಸ್ತಾವನೆ ಮುಂದಿಟ್ಟಿದ್ದಾರೆಂದು ಮುಖರ್ಜಿಯವರು ಗಾಂಧೀಜಿಯವರಿಗೆ ಸ್ಪಷ್ಟಪಡಿಸಿದರು. ಪ್ರಸ್ತಾವನೆ ಬಿದ್ದು ಹೋಯಿತು. ಇಂದು ಸ್ವತಂತ್ರ ಬಂಗಾಳ, ನಾಳೆ ಸ್ವತಂತ್ರ ಮುಂಬಯಿ, ಸ್ವತಂತ್ರ ಮದ್ರಾಸ್, ಪ್ರಸ್ತಾವನೆಗಳು, ಏಳಬಹುದೆಂಬ ಭೀತಿ ಆವರಲ್ಲಿತ್ತು. ವಿಭಜನೆಗೆ ಮುಖರ್ಜಿಯವರು ಸಹ ಒಪ್ಪಿದ್ದರೆಂದು ಕೆಲವು ವರ್ಷಗಳ ನಂತರ ನೆಹರು ಹೇಳಿದ್ದಕ್ಕೆ ಉತ್ತರವಾಗಿ ಮುಖರ್ಜಿಯವರು “ನೀವು ಬಾರತವನ್ನು ವಿಭಜಿಸಿದಿರಿ, ನಾನು ಪಾಕಿಸ್ತಾನವನ್ನು ವಿಭಜಿಸಿದೆ” ಎಂದು ಮಾರ್ನುಡಿದರು.

ಸ್ವಾತಂತ್ರ್ಯ ಬಂದಾಗ, ಗಾಂಧೀಜಿಯವರ ರಚನಾತ್ಮಕ ಧೋರಣೆಯಿಂದ ಭಾರತಕ್ಕೆ ರಾಷ್ಟ್ರೀಯ ಸರ್ಕಾರ ದೊರಕಿತು. ಕಾಂಗ್ರೆಸ್ ಪಕ್ಷಕ್ಕೆ ಅಭೂತಪೂರ್ವ ಬಹುಮತ ಇದ್ದರೂ ಸಹ, 14 ಜನರ ಹೊಸ ಮಂತ್ರಿ ಮಂಡಲದಲ್ಲಿ ಏಳು ಜನ ಕಾಂಗ್ರೆಸ್ ಅಲ್ಲದವರು ಇದ್ದರು. ಡಾ|| ಮುಖರ್ಜಿ, ಡಾ|| ಅಂಬೇಡ್ಕರ್, ಮಥಾಯ್, ಬಲದೇವ್ ಸಿಂಗ್, ಭಾಭ, ನಿಯೋಗಿ ಮತ್ತು ಷಣ್ಮುಗಮ್ ಚೆಟ್ಟಿ. ಇಂದು ಕೆಲವರು ಮನಸ್ಸಿದ್ದೋ ಅಥವಾ ಇಲ್ಲದೆಯೋ ರಾಷ್ಟ್ರೀಯ ಸರ್ಕಾರದ ಕಲ್ಪನೆಗೆ ಒಪ್ಪಬಹುದು ಅಥವಾ ಒಪ್ಪದಿರಬಹುದು. ಆದರೆ, 1947ರ ಉದಾಹರಣೆಯಿಂದ ರಾಷ್ಟ್ರಕ್ಕೆ ಎಲ್ಲ ಪ್ರತಿಭೆಗಳನ್ನು ಕೊಡುವ ಅಗತ್ಯವನ್ನು ಮನಗಾಣಬೇಕು.

ಶ್ಯಾಮ್ ಪ್ರಸಾದ್‌ರವರು ಕೈಗಾರಿಕಾ ಮಂತ್ರಿಗಳಾಗಿದ್ದಾಗ ರಾಷ್ಟ್ರಕ್ಕೆ ಸಿಂದ್ರಿ ಫರ್ಟಿಲೈಸರ್ಸ್, ಮತ್ತು ಚಿತ್ತರಂಜನ್ ಲೋಕೋಸ್ ಸಮರ್ಪಿಸಿದರು. ನಾಲ್ಕು ವರ್ಷಗಳಲ್ಲಿ ಅಂತಹ ಸೂಕ್ಷ್ಮ ಖಾತೆಯ ನಿರ್ವಹಣೆಯಲ್ಲಿ ಅವರು ಯಾವ ರೀತಿಯ ಟೀಕೆಗೂ ಒಳಗಾಗಲಿಲ್ಲ. ಕಳಂಕ ರಹಿತವಾದ ಆಡಳಿತ ಅವರದಾಗಿತ್ತು.

1949ರ ಪ್ರಾರಂಭದಲ್ಲಿ ಪೂರ್ವ - ಪಾಕಿಸ್ತಾನದಲ್ಲಿ ಒಂದು ಹತ್ಯಾಕಾಂಡ ಸಂಭವಿಸಿತು. ಲಕ್ಷಾಂತರ ಹಿಂದೂಗಳು ವಲಸೆ ಬಂದರು. ಸರ್ದಾರ್ ಪಟೇಲರು, ಆ ನಿರಾಶ್ರಿತರ

ಸಮಸ್ಯೆಗಳನ್ನು ಪರಿಹರಿಸಲು ಒಂದು ಪ್ರದೇಶ ಬೇಕೆಂದು ಕೇಳಿದರು, ನೆಹರೂರವರು "ಬೇರೆ ರೀತಿಯ ವಿಧಾನಗಳನ್ನು " ಪ್ರಸ್ತಾವಿಸಿದರು. ಆದರೆ, ಸರ್ಕಾರವು ನಿರ್ಜೀವ "ನೆಹರು - ಲಿಯಾಖಿತ ಒಪ್ಪಂದ"ಕ್ಕೆ ಸಹಿ ಹಾಕಿತು. ಪೂರ್ವ ಬಂಗಾಳದ ಹಿಂದೂಗಳನ್ನು ಕಡೆಗಣಿಸಲಾಯಿತು. ಶ್ಯಾಮ್ ಪ್ರಸಾದ್‌ರವರು ಇದನ್ನು ಪ್ರತಿಭಟಿಸಿ ರಾಜೀನಾಮೆ ಸಲ್ಲಿಸಿದರು. ನೆಹರುರವರು ಆಗ ಬಿಗಿಯಾಗಿದ್ದಿದ್ದರೆ ಬಾಂಗ್ಲಾದೇಶ 1951ರಲ್ಲೇ ಹುಟ್ಟಿಕೊಳ್ಳುತ್ತಿತ್ತೇ ಹೊರತು, ಇಪ್ಪತ್ತು ವರ್ಷಗಳ ನಂತರ 1971ರದಲ್ಲಲ್ಲ.

ಡಾ॥ ಮುಖರ್ಜಿಯವರು ಮಂತ್ರಿ ಪದವಿಯನ್ನು ತ್ಯಜಿಸಿ ಬಂದಮೇಲೆ ರಾಷ್ಟ್ರೀಯ ಸ್ವಯಂ ಸೇವಕ ಸಂಘ (ಆರ್ ಎಸ್ ಎಸ್)ದ ಶ್ರೀ ಗುರೂಜಿಯವರೊಡನೆ ಸಮಾಲೋಚಿಸಿ ಭಾರತೀಯ ಜನ ಸಂಘವನ್ನು ಸಂಘಟಿಸತೊಡಗಿದರು, (ಬಿಜೆ ಎಸ್) (ಈಗಿನ ಭಾರತೀಯ ಜನತಾ ಪಕ್ಷ). ಭಾರತೀಯ ಜನ ಸಂಘವನ್ನು "ಪುಡಿ ಪುಡಿ" ಮಾಡುವುದಾಗಿ ನೆಹರುರವರು ಹೆದರಿಸಿದರು. ಮುಖರ್ಜಿಯವರು ಉತ್ತರವಾಗಿ "ನಾವು ಈ ಮನೋಬಾವನೆಯನ್ನೇ ಪುಡಿ ಪುಡಿ ಮಾಡುತ್ತೇವೆ" ಎಂದರು. ಹೊಸ ಪಕ್ಷವು, ಹೆಚ್ಚಿನ ಸ್ಥಾನಗಳನ್ನು ಗಳಿಸದಿದ್ದರೂ ಸಹ 3% ಮತಗಳನ್ನು ಪಡೆಯಿತು. ರಾಷ್ಟ್ರೀಯ ಪಕ್ಷಗಳೆಂದು ಮಾನ್ಯತೆ ಗಳಿಸಿದ್ದ 5 ಪಕ್ಷಗಳಲ್ಲಿ ಈ ಪಕ್ಷವು ಒಂದಾಗಿತ್ತು. ಶ್ಯಾಮ್ ಪ್ರಸಾದ್‌ರವರು ತಡಮಾಡದೆ, "ಸಂಯುಕ್ತ ಪ್ರಜಾಪ್ರಭುತ್ವರಂಗ" ವನ್ನು ರೂಪಿಸಿದರು. ಈ ರಂಗದಲ್ಲಿ ಇತರ ಪಕ್ಷಗಳೇ ಅಲ್ಲದೆ, ಭಾರತೀಯ ಜನಸಂಘದ (ಬಿಜೆಎಸ್), ಸೋಷಿಯಲಿಸ್ಟ್ ಪಾರ್ಟಿ (ಎಸ್‌ಪಿ) ಮತ್ತು ಕಿಸಾನ್ ಮಜ್‌ದೂರ್ ಪ್ರಜಾಪಾರ್ಟಿ (ಕೆಎಂಪಿಪಿ) ಇದ್ದವು. ಸ್ವಲ್ಪ ದಿನಗಳಲ್ಲೇ ಅವರು ಪ್ರತಿ ಪಕ್ಷಗಳ ಅನಧಿಕೃತ ನಾಯಕರೆನಿಸಿಕೊಂಡರು. ಡಾ॥ ಮುಖರ್ಜಿಯವರ 'ಸಂಯುಕ್ತ ಪ್ರಜಾ ಪ್ರಭುತ್ವರಂಗ'ವು 1967ರಲ್ಲಿನ 'ಸಂಯುಕ್ತ ವಿಧಾಯಕ ದಳ' ಮತ್ತು 1977ರಲ್ಲಿನ ಜನತಾಪಕ್ಷದ ಮುನ್ಸೂಚಕವಾಯಿತು. ಅಲ್ಪಾವಧಿಯದ್ದಾದರೂ ಉಜ್ವಲವಾದ ಆ ಕಾಲವನ್ನು ನರೇಂದ್ರನಾಥ್‌ರವರು ಹೀಗೆ ಹೊಗಳಿದ್ದಾರೆ :

"ನಮಗವರು ಉಜ್ವಲ ವಿಚಾರ ಧಾರೆಗಳ ಸಂಗಮದ ಮಹಾ ಕಲ್ಪವೃಕ್ಷ..........

ಮಿತ್ರನೇ; ನೀನು ಮಾತನಾಡಲು ಎದ್ದ ಪ್ರತಿಕ್ಷಣವೂ ಸಿಡಿಲು ಗುಡಿಗಿನ ಘೋಷ, ನಿನ್ನ ಸಾನ್ನಿಧ್ಯ, ನಿನ್ನ ನುಡಿ ಮುತ್ತುಗಳಿಂದ ನಾವು ವಂಚಿತರು....................

ಅನೇಕರು ಅವರಲ್ಲಿ ಭಾರತದ ಭಾವೀ ಪ್ರಧಾನಿ ಮಂತ್ರಿಯನ್ನು ಕಂಡಿದ್ದರು. ಆದರೆ ಅದು ಸಿದ್ಧಿಸಲಿಲ್ಲ. ಆದರೆ, ಕಾಶ್ಮೀರ ಸಮಸ್ಯೆ ಮಾತ್ರ ಅಂದಿನಷ್ಟೇ ಇಂದಿಗೂ ಜೀವಂತವಾಗಿದೆ. ಭಾರತೀಯ ಜನಸಂಘವು ಕಾಶ್ಮೀರಕ್ಕೆ ಪ್ರತ್ಯೇಕ ವಿಶೇಷ ಸ್ಥಾನ ಕೊಟ್ಟಿರುವುದನ್ನು ಪ್ರತಿಭಟಿಸಿ,

"ಒಂದೇ ರಾಷ್ಟ್ರದಲ್ಲಿ ಎರಡು ರಾಜ್ಯಾಂಗಗಳು,

ಒಂದೇ ರಾಷ್ಟ್ರದಲ್ಲಿ ಇಬ್ಬರು ಪ್ರಧಾನಿಗಳು, ಒಂದೇ ರಾಷ್ಟ್ರದಲ್ಲಿ ಎರಡು ಧ್ವಜಗಳು

ನಾವು ಸಹಿಸೆವು, ನಾವು ಸಹಿಸೆವು

- ಎಂದು ಘೋಷಿಸಿತು.

ದೆಹಲಿ, ಜಮ್ಮು ಮತ್ತು ಕಾಶ್ಮೀರದಲ್ಲಿ ಭಾರೀ ಸತ್ಯಾಗ್ರಹ ಚಳುವಳಿ ಏರ್ಪಟ್ಟಿತು. ಡಾ|| ಮುಖರ್ಜಿಯವರು ಪರವಾನಗಿ ನಿಯಮವನ್ನು ಉಲ್ಲಂಘಿಸಿ ಆ ರಾಜ್ಯವನ್ನು 1953ರ ಮೇ 11 ರಂದು ಪ್ರವೇಶಿಸಿದರು. ಸಹಜವಾಗಿಯೇ ಅವರನ್ನು ಬಂಧಿಸಲಾಯಿತು. ಶ್ರೀನಗರಕ್ಕೆ ರಾತ್ರಿಯಿಡೀ ಪ್ರಯಾಣ ಮಾಡಿಸಿ ದೂರದಲ್ಲಿದ್ದ ಒಂದು ಸಣ್ಣ ಮನೆಯಲ್ಲಿ ಅವರನ್ನು ಇಡಲಾಗಿತ್ತು. ಜೂನ್ 23ರಂದು ಅವರು ಮರಣ ಹೊಂದಿದರೆಂದು ಘೋಷಿಸಲಾಯ್ತು. ಅವರನ್ನು ಬಂಧನದಲ್ಲಿಟ್ಟಿದ್ದಾಗ ಅವರು ಖಾಯಿಲೆ ಬಿದ್ದರೆಂದು ಯಾರಿಗೂ ಹೇಳಿರಲಿಲ್ಲ. ಈ ವಾರ್ತೆಯನ್ನು ಕೇಳಿ ದೇಶವೆಲ್ಲಾ ತಲ್ಲಣಗೊಂಡಿತು. ನಾನಾ ಊಹಾಪೋಹಗಳು ಹಬ್ಬತೊಡಗಿದವು. ಸಂತಾಪ ಸೂಚಕ ಸಂದೇಶಗಳು ಪ್ರವಾಹದಂತೆ ನಾಡಿನ ಎಲ್ಲ ಭಾಗಗಳಿಂದ ಹರಿದು ಬರತೊಡಗಿದವು. ಫಜಲುಲ್ ಹಕ್‌ರವರು ಅಳುತ್ತಾ ಢಾಕಾದಲ್ಲಿ ಈ ರೀತಿ ನುಡಿದರು :

"ಪ್ರಪಂಚದಲ್ಲಿದ್ದ ನನ್ನ ಒಬ್ಬನೇ ಸೋದರನನ್ನು ನಾನು ಕಳೆದುಕೊಂಡಿದ್ದೇನೆ, ದುಃಖತಪ್ತನಾಗಿ ಹುಚ್ಚನಂತಾಗಿದ್ದೇನೆ".

ಡಾ|| ಮುಖರ್ಜಿಯವರನ್ನು ಒಂದು ಖಾಸಗಿ "ನರ್ಸಿಂಗ್ ಹೋಂ"ಗೆ ಚಿಕಿತ್ಸೆಗೆ ಒಯ್ಯಲಾಗಿತ್ತು. ಅಲ್ಲಿ ಅವರಿಗೆ ಆಮ್ಲಜನಕವನ್ನಾದರೂ ಕೊಡಲಿಲ್ಲವೆಂಬುದು ಗೊತ್ತಾದಾಗ ಅನೇಕರು ಅದೊಂದು "ವೈದ್ಯಕೀಯ ಕೊಲೆ" ಎಂದು ಭಾವಿಸಿದರು.

ಪೋಲಿ ಪುಂಡರನ್ನೇ ಜೈಲಿನಲ್ಲಿಡದೆ ಅವರವರ ರಾಜ್ಯಗಳಿಗೆ ಗಡೀಪಾರು ಮಾಡುತ್ತಿರುವಾಗ, ಷೇಕ್ ಅಬ್ದುಲ್ಲಾರವರು ಡಾ|| ಮುಖರ್ಜಿಯವರನ್ನು ಬಂದೀಖಾನೆಯಲ್ಲಿ ಏಕೆ ಇಟ್ಟರು ? ಅವರನ್ನೇಕೆ ದೆಹಲಿಗಾಗಲೀ ಇಲ್ಲವೆ ಕಲ್ಕತ್ತಕ್ಕಾಗಲಿ ಕಳುಹಿಸಲಿಲ್ಲ ಎಂಬುದನ್ನು ತಿಳಿಸಬೇಕೆಂದು ಅಂಬೇಡ್ಕರ್‌ರವರು ಒತ್ತಾಯಿಸಿದರು. ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿಯವರ ತಾಯಿಯವರಾದ ಬೇಡಿ ಜೋಗ್ ಮಾಯಾ ದೇವಿಗೆ ನೆಹರೂರವರು ಸಂತಾಪ ಸೂಚನೆಯನ್ನು ಕಳುಹಿಸುತ್ತಾ "ನಾನೇನು ಮಾಡಬಹುದು" ಎಂದು ಪತ್ರ ಬರೆದಾಗ,

ಅದಕ್ಕೆ ಆ ತಾಯಿ ಉತ್ತರಿಸುತ್ತಾ "ಈ ಮರಣದ ಬಗ್ಗೆ ನ್ಯಾಯಾಂಗ ತನಿಖೆ ನಡೆಸಿ" ಎಂದು ಕೇಳಿದರು. ಆದರೆ, ನ್ಯಾಯಾಂಗ ತನಿಖೆ ನಡೆಯಲೇ ಇಲ್ಲ. ಸಂಶಯ ಹಾಗೂ ಗುಮಾನಿಯ ಕಾರ್ಮೋಡ ಉಳಿದು ಹೋಯಿತು. ನೆಹರುರವರು ಮಾಡಿದ್ದೇನೆಂದರೆ ಅಬ್ದುಲ್ಲಾರವರನ್ನು ತೆಗೆದದ್ದು ಮತ್ತು ಪರವಾನಗಿ ಪದ್ಧತಿಯನ್ನು ರದ್ದುಗೊಳಿಸಿದ್ದು. ಅನುಚ್ಛೇದ 370ನ್ನು ಆಗಲೇ ಬೇರುಸಹಿತ ಕಿತ್ತೊಗೆದಿದ್ದಿದ್ದರೆ ಇಂದು ಕಾಶ್ಮೀರದಲ್ಲಿ ಯಾವ ಸಮಸ್ಯೆಯೂ ಇರುತ್ತಿರಲಿಲ್ಲ. ಬದುಕಿದ್ದಾಗಲೂ, ಮರಣ ಕಾಲದಲ್ಲೂ ಡಾ॥ ಶ್ಯಾಮ್ ಪ್ರಸಾದ್ ಮುಖರ್ಜಿರವರು ಭಾರತದ ಏಕತೆಗೆ ಮತ್ತು ಸಮಗ್ರತೆಗೆ ಶ್ರಮಿಸಿದರು. ಇಂದು ಭಾರತೀಯ ಜನತಾಪಕ್ಷವು ಅವರ ಜೀವನ, ಕಾರ್ಯ ಮತ್ತು ಅವರ ಚಿಂತನೆಗಳ ಜೀವಂತ ಹಾಗೂ ಬೆಳೆಯುತ್ತಿರುವ ಸ್ಮಾರಕವಾಗಿದೆ.

# ಭಾಗ ಮೂರು

# ಅವರ ಚಿಂತನೆ

(ಡಾ|| ಮುಖರ್ಜಿಯವರ ಪ್ರಜಾ ಪ್ರತಿನಿಧಿ ಸಭೆ / ರಾಜ್ಯಾಂಗ ರಚನಾ ಸಭೆ / ಲೋಕಸಭೆಯಲ್ಲಿ ಮಾಡಿದ ಪ್ರಮುಖ ಭಾಷಣದ ಆಯ್ದ ಭಾಗಗಳು)

## ರಾಜ್ಯಾಂಗ ರಚನಾ ಸಭೆ: ರಚನೆ ಮತ್ತು ಸ್ವರೂಪ *

ಭಾರತದ ವೈವಿಧ್ಯಮಯವಾದ ಚರಿತ್ರೆಯಲ್ಲಿ ನಾನು ನಂಬಿಕೆ ಉಳ್ಳವನಾಗಿದ್ದೇನೆ. ಅನೇಕ ರಾಜಕೀಯ ಪಕ್ಷಗಳು ಹಾಗೂ ವೇದಿಕೆಗಳು ನಮ್ಮ ತಾಯ್ನಾಡನ್ನು ಸ್ವತಂತ್ರ ಸಾರ್ವಭೌಮ ರಾಷ್ಟ್ರವನ್ನಾಗಿ ಮಾಡಲು ನಿಲುವಳಿಗಳು ಹಾಗೂ ನಿರ್ಣಯಗಳನ್ನು ಅಂಗೀಕರಿಸಿವೆ. ಇಂದಿನ ನಿರ್ಣಯದ ಬಗೆಗೆ ಹೇಳುವುದಾದರೆ ಇದಕ್ಕೆ ತುಂಬಾ ವಿಶೇಷವಾದ ಪ್ರಾಮುಖ್ಯತೆ ಇದೆ. ಬ್ರಿಟಿಷರ ಆಳ್ವಿಕೆಯಲ್ಲಿದ್ದ ನಾವು ನಮ್ಮ ದೇಶದ ಚರಿತ್ರೆಯಲ್ಲಿ, ಮೊದಲ ಬಾರಿಗೆ ನಮ್ಮದೇ ರಾಜ್ಯಾಂಗ ರಚಿಸಿಕೊಳ್ಳಲು ನಾವಿಲ್ಲಿ ಸೇರಿದ್ದೇವೆ. ಇದೊಂದು ಬಹಳ ಜವಾಬ್ದಾರಿಯುತವಾದ ಕೆಲಸ. ಈ ನಿರ್ಣಯವನ್ನು ಮಂಡಿಸಿದ ಗೌರವಾನ್ವಿತರು, ಭಾರತೀಯರಾದ ನಾವು ಈ ಪವಿತ್ರವಾದ ಕಾರ್ಯವನ್ನು ಶ್ರದ್ಧಾಪೂರ್ವಕವಾಗಿ ಮಾಡಲು ಒಪ್ಪಿಕೊಂಡಿದ್ದೇವೆ, ನಮ್ಮ ಶಕ್ತಿ ಮೀರಿ ಕೆಲಸ ಮಾಡುತ್ತೇವೆ ಎಂಬುದನ್ನು ನೆನಪು ಮಾಡಿಕೊಟ್ಟಿದ್ದಾರೆ. ಸನ್ಮಾನ್ಯರೇ, ಡಾ|| ಜಯಕರ್‌ರವರು ಮಂಡಿಸಿದ ಈ ತಿದ್ದುಪಡಿಯಿಂದ ಹಲವು ಮೂಲಭೂತ ಪ್ರಶ್ನೆಗಳು ಉದ್ಭವಿಸಿವೆ. ಸನ್ಮಾನ್ಯರೇ ಕ್ಷಮಿಸಿ, ನಾನು ಈ ತಿದ್ದುಪಡಿಗೆ ಬೆಂಬಲ ಕೊಡಲಾರೆ. ಆ ವರ್ಗಗಳು ಸಭೆ ಸೇರಿ ಶಿಫಾರಸ್ಸು ಮಾಡುವ ತನಕ, ಈ ನಿರೂಪಣೆಯನ್ನುಳ್ಳ ಈ ನಿರ್ಣಯವನ್ನು ನಾವು ಅಂಗೀಕರಿಸುವಂತಿಲ್ಲವೆಂಬುದೇ ಈ ತಿದ್ದುಪಡಿಯ ಅಂತರ್ಯ, ಭಾರತದ ರಾಜ್ಯಗಳು ಮತ್ತು ಮುಸ್ಲಿಂ ಲೀಗ್ ಎರಡೂ ರಾಜ್ಯಾಂಗ ರಚನಾ ಸಭೆಯಲ್ಲಿ ಭಾಗವಹಿಸುವ ತನಕ ಈ ನಿರ್ಣಯವನ್ನು ನಾವು ಅಂಗೀಕರಿಸುವಂತಿಲ್ಲವೆಂದು ಈ ತಿದ್ದುಪಡಿಯನ್ನು ಮಂಡಿಸಿದವರು ಅಪೇಕ್ಷಿಸಿದ್ದಾರೆ: ಭಾರತದ ರಾಜ್ಯಗಳ ಬಗ್ಗೆ ಹೇಳುವುದಾರೆ, ಅವರು ಭಾಗವಹಿಸಲು ಬಯಸಿದರೂ ಆಯಾವರ್ಗಗಳು ಸಭೆ ಸೇರುವ ತನಕ ಮತ್ತು ಪ್ರಾಂತೀಯ ರಾಜ್ಯಗಳ ರಚನೆ ಇತ್ಯರ್ಥವಾಗುವ ತನಕ ಈ ತಿದ್ದುಪಡಿಯನ್ನು ಅಂಗೀಕರಿಸುವಂತಿಲ್ಲ. ಹಾಗಾಲು ಎಷ್ಟು ತಿಂಗಳುಗಳು ಬೇಕಾಗುತ್ತದೋ ಯಾರೂ ಹೇಳಲಾರರು. ಮುಸ್ಲಿಂಲೀಗ್ ಬಗ್ಗೆ ಹೇಳುವುದಾರರೆ, ರಾಜ್ಯಾಂಗ ರಚನಾ ಸಭೆಯ ಪೂರ್ವಭಾವಿ ಸಭೆಗೆ ಮುಸ್ಲಿಂ ಲೀಗ್ ಬರುವ ಸಾಧ್ಯತೆ ಇಲ್ಲ. ಈ ನಿರ್ಣಯವನ್ನು ಜನವರಿಗೆ 20ಕ್ಕೆ ಮುಂದೂಡಿದರೆ ನಂತರ ಮುಸ್ಲಿಂ ಲೀಗ್ ಈ ಸಭೆಯಲ್ಲಿ ಭಾಗವಹಿಸುತ್ತದೆ ಎನ್ನುವ ಖಾತ್ರಿ ಏನಾದರೂ ಇದೆಯೇ ?

ಈ ಪ್ರಶ್ನೆಯನ್ನು ನಿಜವಾಗಿಯೂ ಬೇರೆ ದೃಷ್ಟಿಕೋನದಿಂದ ನೋಡಬೇಕೆಂದು ನಾನು ಭಾವಿಸುತ್ತೇನೆ. ಈ ನಿರ್ಣಯವು, ಮೇ 16ರ ಕ್ಯಾಬಿನೆಟ್ ಮಿಷನ್ನಿನ ರೂಪು ರೇಷೆಗೆ ಅಸಂಗತವಾದ ವಿವಾದಗಳನ್ನು ಎತ್ತುತ್ತದೆಯೇ ? ಆ ರೂಪುರೇಷೆಗೆ ಅಸಂಗತವಾದ ವಿವಾದಗಳನ್ನು ಅದು ಎತ್ತುವುದಾದರೆ ನಾವು ವಿಷಯಗಳನ್ನು ಮೊದಲೇ ನಿರ್ಧಾರ

* ಪ್ರಜಾಪ್ರತಿನಿಧಿ ಸಭೆ ನಡವಳಿಕೆ: ದಿನಾಂಕ 17ನೇ ಡಿಸೆಂಬರ್ 1946

ಮಾಡಿದಂತಾಗುತ್ತದೆಯಾದ್ದರಿಂದ ಈ ಹಂತದಲ್ಲಿ ಹಾಗೆ ಮಾಡಲು ನಮಗೆ ಯಾವ ಹಕ್ಕೂ ಇಲ್ಲ. ಈ ದಾಖಲೆ ನನಗೆ ಒಂದು ರೀತಿಯ ಒಗಟಿನ ಚಿತ್ರದಂತೆ ಕಾಣುತ್ತಿದೆ. ಅನೇಕ ದೃಷ್ಟಿಕೋನದಿಂದ ನೋಡಿದಾಗ ನೀವು ಅದನ್ನು ಅನೇಕ ರೀತಿಯಲ್ಲಿ ವ್ಯಾಖ್ಯಾನ ಮಾಡಬಹುದು. ಆದರೆ, ಅದನ್ನು ಯಥಾ ರೀತಿಯಿಂದ ನೋಡಿದ್ದಾದರೆ, ಅದು ಏನು ಹೇಳ ಬಯಸಿದೆ? ರೂಪುರೇಷೆಯ ಚೌಕಟ್ಟಿನೊಳಗೇ ಕೆಲವೊಂದು ಮೂಲಭೂತ ವಿಷಯಗಳನ್ನು ಅದು ನಿರೂಪಿಸಿದೆ. ಆದರೂ, ನಾವು ಕೆಲವೊಂದು ವಿವರಗಳನ್ನು ನೋಡಿದಾಗ, ನಮ್ಮಲ್ಲೇ ಅನೇಕರು ಭಿನ್ನಾಭಿಪಾಯಗಳನ್ನು ವ್ಯಕ್ತಪಡಿಸುತ್ತಿರುವ ಒಂದು ವಿಷಯದ ಬಗ್ಗೆ ನಾನು ತಮಗೆ ತಿಳಿಸಬಯಸುತ್ತೇನೆ. ಅದು, ಉಳಿಕೆ ಅಧಿಕಾರಗಳಿಗೆ ಸಂಬಂಧಿಸಿದೆ. ಕ್ಯಾಬಿನೆಟ್ ಮಿಷನ್ನಿನ ರೂಪುರೇಷೆಯ ಅನ್ವಯ ಈ ವಿಷಯ ರಾಜ್ಯಂಗದಲ್ಲಿ ಸೇರಿದೆ. ಈ ವಿಷಯದ ಮೇಲೆ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ಸಹ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಮುಸ್ಲಿಂ ಲೀಗ್ ಕೂಡ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ನಮ್ಮಲ್ಲಿ ಹಲವರು ಈ ಅಭಿಪ್ರಾಯಗಳ ಬಗ್ಗೆ ಭಿನ್ನಾಭಿಪ್ರಾಯ ಉಳ್ಳವರಾಗಿದ್ದಾರೆ ಮತ್ತು ಭಾರತದ ಹಿತದೃಷ್ಟಿಯಿಂದ ಬಲಿಷ್ಠ ಕೇಂದ್ರ ಸರ್ಕಾರ ಇರಬೇಕೆಂದು ಒತ್ತಾಯಿಸುತ್ತಿದ್ದಾರೆ. ಈ ನಿರ್ಣಯವನ್ನು ಮಂಡಿಸಿದ ನೆಹರೂರವರು, ಭಾರತಕ್ಕೆ ನಾವು ಈಗ ರಾಜ್ಯಾಂಗವನ್ನು ರಚಿಸುತ್ತಿಲ್ಲ; ಈ ಹಂತದಲ್ಲಿ ಪೂರ್ವಭಾವಿಯಾಗಿ ಭಾರತದ ಭಾವೀ ರಾಜ್ಯಾಂಗವು ಹೇಗಿರಬೇಕೆಂಬುದನ್ನು ನಿರೂಪಿಸುವ ನಿರ್ಣಯವನ್ನು ಮಾತ್ರ ಅಂಗೀಕರಿಸುತ್ತಿದ್ದೇವೆ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ರಾಜ್ಯಾಂಗವನ್ನು ನಾವು ರಚಿಸುವ ಸಮಯ ಬಂದಾಗ ಯಾರಾದರೂ ತಿದ್ದುಪಡಿಯ ರೂಪದಲ್ಲಿ ಯಾವುದೇ ವಿಷಯವನ್ನು ಪ್ರಸ್ತಾಪಿಸಿದರೆ ಅದನ್ನು ಎಲ್ಲರ ಗಮನಕ್ಕೆ ತರಲಾಗುತ್ತದೆ. ಮತ್ತು ಸದನದ ಮುಂದೆ ಮಂಡಿಸಲಾಗುತ್ತದೆ. ಅದನ್ನು ಅದರ ಗುಣದೋಷಗಳ ಪ್ರಕಾರ ಪರಿಗಣಿಸಬೇಕಾಗುತ್ತದೆ ಎಂದು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಮುಂದೆ, ಈ ಸಭೆಯ ರಚಿಸುವ ಕರಡು ರಾಜ್ಯಾಂಗಕ್ಕೆ ಯಾರೇ ಸದಸ್ಯರು ಯಾವುದೇ ತಿದ್ದುಪಡಿ ಮಂಡಿಸುವುದಕ್ಕೆ ಕಾನೂನಿನ ಯಾವ ಅಡ್ಡಿಯೂ ಇಲ್ಲ ಎಂದೇ ನಾನು ಭಾವಿಸಿದ್ದೇನೆ. ಈ ಎರಡು ವಿಷಯಗಳ ಬಗ್ಗೆ ಎಂದರೆ, ಈ ಕರಡು ನಿರ್ಣಯವು ಕ್ಯಾಬಿನೆಟ್ ಮಿಷನ್ನಿನ ರೂಪುರೇಷೆಯ ಮುಖ್ಯ ಗುಣಲಕ್ಷಣಗಳಿಗೆ ಬಾಧಕವಾಗುವುದಿಲ್ಲ ಮತ್ತು ಭಾವೀರಾಜ್ಯಾಂಗ ಹೀಗೇ ಇರಬೇಕು ಎನ್ನುವ ಒಂದು ನಿರ್ದಿಷ್ಟ ಕಟ್ಟುಪಾಡಿಗೆ ಅದು ರಾಜ್ಯಾಂಗ ರಚನಾ ಸಭೆಯನ್ನು ಒಳಪಡಿಸುವುದಿಲ್ಲ ಎನ್ನುವ ಆಶ್ವಾನೆ ದೊರಕಿದ ಪಕ್ಷದಲ್ಲಿ, ಈ ಹಂತದಲ್ಲಿ ಈ ನಿರ್ಣಯ ಅಂಗೀಕಾರವಾಗುವುದನ್ನು ಏಕೆ ತಡೆಯಬೇಕೆಂಬುದಕ್ಕೆ ನನಗೆ ಯಾವ ಸಮರ್ಥನೆಯೂ ಕಾಣುತ್ತಿಲ್ಲ.

ಈ ನಿರ್ಣಯಕ್ಕೆ ತನ್ನದೇ ಆದ ಪ್ರಾಮುಖ್ಯತೆ ಉಂಟು, ನಾವು ಇಲ್ಲ ಆಸೀನರಾಗಿರುವುದು ಕೇವಲ ನಮ್ಮ ವೈಯಕ್ತಿಕ ಸ್ಥಾನಮಾನದಿಂದಲ್ಲ. ಈ ಮಹಾನ್ ದೇಶದ

ಪ್ರತಿನಿಧಿಗಳಾಗಿ ನಾವು ಇಲ್ಲಿ ಉಪಸ್ಥಿತರಿದ್ದೇವೆ. ನಾವಿಲ್ಲಿರುವದು ಬ್ರಿಟಿಷ್ ಪಾರ್ಲಿಮೆಂಟಿನ ಅಪ್ಪಣೆಯಿಂದಲ್ಲ ; ಬ್ರಿಟಿಷ್ ಸರ್ಕಾರದ ಅಪ್ಪಣೆಯಿಂದಲ್ಲ. ಭಾರತದ ಪ್ರಜೆಗಳೇ ನಮ್ಮ ಪ್ರಭುಗಳು. ಹೀಗಿರುವಾಗ, ನಾವು ಕೇವಲ ನಿಯಮ ನಿಬಂಧನೆ ರಚಿಸುವುದಕ್ಕಾಗಿ ಇಲ್ಲಿ ಸೇರಿಲ್ಲ. ಈ 1946ರ ಡಿಸೆಂಬರ್ 9 ರಂದು ನಾವು ಇಲ್ಲೇಕೆ ಸೇರಿದ್ದೇವೆ ಎಂಬುದನ್ನು ಭಾರತದ ಪ್ರಜೆಗಳಿಗೆ ತಿಳಿಸಬೇಕಾಗಿದೆ. ನಿರ್ಣಯವನ್ನು ಮಂಡಿಸಿದವರು ಏನು ಹೇಳಿದ್ದಾರೋ ಅದೇ ಸರಿಯಾದ ಪ್ರತಿಪಾದನೆಯಾಗಿದ್ದ ಪಕ್ಷದಲ್ಲಿ ಈ ರಾಜ್ಯಾಂಗ ಸಭೆಯನ್ನು ಕರೆಯಲೇಬಾರದಿತ್ತು ? ನಿಜ ಹೇಳಬೇಕೆಂದರೆ, ನಿರ್ಣಯವನ್ನು ಮಂಡಿಸಿದವರು ಈ ಸಭೆಗೆ ಹಾಜರಾಗಲೇ ಬಾರದಿತ್ತು. ಅವರು, ಗೌರ್‍ನರ್ ಜನರಲ್‌ರವರಿಗೆ "ನಾನು ನಿಮ್ಮ ಆಮಂತ್ರಣವನ್ನು ಒಪ್ಪಿಕೊಳ್ಳದಿರುವುದಕ್ಕೆ ವಿಷಾದಿಸುತ್ತೇನೆ. ಏಕೆಂದರೆ, ಮುಸ್ಲಿಂಲೀಗ್ ಮತ್ತು ಭಾರತದ ಸಂಸ್ಥಾನಗಳು ಈ ಸಭೆಯಲ್ಲಿ ಭಾಗವಹಿಸುತ್ತಿಲ್ಲವಾದ್ದರಿಂದ ರಾಜ್ಯಾಂಗ ರಚನಾ ಸಭೆಯನ್ನು ತಾವು ಕರೆದಿರುವುದು ತಪ್ಪು ಎಂದು ನನ್ನ ಭಾವನೆ" ಎಂದು ತಿಳಿಸಬೇಕಿತ್ತು. ಆದರೆ ನಾವು ಇಲ್ಲಿಗೆ ಬಂದಿರುವುದರಿಂದಾಗಿ ಮತ್ತು ನಾವೇ ಈ ವಿಷಯವನ್ನು ಎತ್ತಿರುವುದರಿಂದಾಗಿ ಏನಾಗುತ್ತದೆಂದರೆ ನಿಜವಾಗಿಯೂ ಮುಸ್ಲಿಂ ಲೀಗನ ಬಲೆಗೆ ಬಿದ್ದಂತಾಗುತ್ತದೆ ಮತ್ತು ಗ್ರೇಟ್ ಬ್ರಿಟನ್ನಿನಲ್ಲಿರುವ ಪ್ರತಿಗಾಮಿಗಳ ಬಲ ಹೆಚ್ಚಿಸಿದಂತಾಗುತ್ತದೆ. "ಸನ್ಮಾನ್ಯ ಸದಸ್ಯರು" ಅಂಥದ್ದಕ್ಕೆ ಆಸ್ಪದ ಕೊಡುವಂಥವರಲ್ಲ ಎಂಬುದು ನನಗೆ ಗೊತ್ತಿದೆ. ಸನ್ಮಾನ್ಯ ಸದಸ್ಯರ ಎದೆಗಾರಿಕೆಯನ್ನು ನಾನು ಮೆಚ್ಚುತ್ತೇನೆ, ಒಂದು ಕಾರ್ಯ ಆಗಬೇಕೆಂದು ಭಾವಿಸುವ ಯಾರೇ ವ್ಯಕ್ತಿ. ಧೈರ್ಯವಾಗಿ ಮುಂದೆ ಬಂದು, ತನ್ನ ದೃಷ್ಟಿಕೋನವನ್ನು ಮಂಡಿಸಬೇಕು, ಆದರೆ ಅವರು ಈ ಸಭೆಯ ಮುಂದೆ ಮಂಡಿಸಿರುವ ಈ ಸಾದಾ ರೀತಿಯ ತಿದ್ದುಪಡಿಯಲ್ಲಿ ಅಡಗಿರುವ ಭಯಂಕರ ಅಪಾಯವನ್ನು ನಾವು ಎತ್ತಿ ತೋರುವುದು ನಮ್ಮ ಕರ್ತವ್ಯ. ಸಮಯ ಬಂದಾಗ, ಮುಂದೆ, ಈ ತಿದ್ದುಪಡಿಯನ್ನು ಅವರು ಹಿಂತೆಗೆದುಕೊಳ್ಳುತ್ತಾರೆಂಬ ನಂಬಿಕೆ ನನಗಿದೆ.

ಈ ವಿಷಯದ ಮತ್ತೊಂದು ಅಂಶದ ಬಗ್ಗೆ ನಾನು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ನಿರ್ಣಯ ಮಂಡಿಸಲಾಗಿದೆ. ಆದರೆ, ಅದನ್ನು ನಾವು ಜಾರಿಗೊಳಿಸುವುದು ಹೇಗೆ ? ಈ ನಿರ್ಣಯವನ್ನು ನಾವು ಜಾರಿಗೆ ತರದಂತೆ ಅಡ್ಡಿಪಡಿಸಬಹುದಾದ, ನಮ್ಮ ಮುಂದೆ ಈಗಾಗಲೇ ಇರುವ ನಿರ್ಬಂಧಗಳು ಯಾವುವು ? ಮುಸ್ಲಿಂಲೀಗ್ ಪಾಲ್ಗೊಂಡಿಲ್ಲ, ಅಂದ ಮೇಲೆ ಈ ರಾಜ್ಯಾಂಗ ರಚನಾ ಸಭೆಯ ಸ್ಥಾನಮಾನಗಳೇನು ? ಈ ತಿದ್ದುಪಡಿಯನ್ನು ಮಂಡಿಸಿದವರು, ಒಂದು ಔತಣ ಕೂಟದ ದೃಷ್ಟಾಂತವನ್ನು ಹೇಳಿದ್ದಾರೆ. "ಔತಣ ಕೂಟಕ್ಕೆ ಆತಿಥಿಗಳನ್ನು ಕರೆದಾಗ ಕೆಲವರು ಬರದಿದ್ದರೆ, ಆ ಔತಣ ಕೂಟವನ್ನು ಇಟ್ಟುಕೊಳ್ಳಬಹುದೇ" ಎಂದಿದ್ದಾರೆ. ಆದರೆ, ಆದಾಗಲೇ ಬಂದಿರುವ ಅತಿಥಿಗಳ ಪಾಡೇನು ? ನೀವೇ ಅತಿಥೇಯರೆಂದುಕೊಳ್ಳಿ. ಆರು ಜನರನ್ನು ಕರೆದಿದ್ದಾಗ, ಐವರು ಬಂದಿದ್ದು, ಒಬ್ಬರು ಬರದಿದ್ದರೆ, ಆ ಐದು ಜನರನ್ನು ಸುಮ್ಮನೆ ಕೂರಿಸಿ "ಆರನೆಯವರು ಬಂದಿಲ್ಲ, ಆದ್ದರಿಂದ

ನಿಮಗೇನೂ ಸಿಗುವುದಿಲ್ಲ ಎಂದು ಹೇಳುವಿರಾ ?" ಸಾಧ್ಯವೇ ಇಲ್ಲ, ಆದ್ದರಿಂದ ಸ್ವಾತಂತ್ರ್ಯದ ಹಸಿವಿನಿಂದ ಇಲ್ಲಿಗೆ ಬಂದಿರುವವರ ಹಸಿವು ಇಂಗಿಸಬೇಕಾಗುತ್ತದೆ. ರಾಜ್ಯಾಂಗ ಸಭೆಯಲ್ಲಿ ಮುಸ್ಲಿಂಲೀಗ್‌ನ ಅನುಪಸ್ಥಿತಿ ಹೇಗಾಗಿದೆ ಎಂದರೆ ಚರ್ಚಿನಲ್ಲಿ ಮದುವೆಗೆ ಎಲ್ಲಾ ಏರ್ಪಾಟು ಆಗಿದೆ. ಆದರೆ, ಮದುವೆಹೆಣ್ಣೇ ಇಲ್ಲದಂತಾಗಿದೆ ಎಂದು ಚರ್ಚಿಲ್ ಹೇಳಿದ್ದಾರೆ. ಭಾರತದ ಸಂಸ್ಥಾಗಳು ಬಂದಿವೆ, ಮುಸ್ಲಿಂಲೀಗ್ ಬರಬೇಕಿತ್ತು : ಬಂದಿಲ್ಲ, ಅಂದ ಮೇಲೆ ರಾಜ್ಯಾಂಗ ರಚನಾ ಸಭೆಯಲ್ಲಿ ಇನ್ನೆಷ್ಟು ಮದುವೆ ಹೆಣ್ಣುಗಳು ಇರಬೇಕೋ, ನನಗೆ ಅರ್ಥವಾಗುತ್ತಿಲ್ಲ, ಮಿ. ಚರ್ಚಿಲ್‌ರವರ ಧೋರಣೆ ಅದೇ ಆಗಿದ್ದ ಪಕ್ಷದಲ್ಲಿ, ಮದುವೆ ಆಗುವುದನ್ನೇ ಅವರು ನಿಲ್ಲಿಸಬಾರದು. "ಭಾರತಕ್ಕೆ ಹೋಗಿ, ರಾಜ್ಯಾಂಗ ರಚನಾ ಸಭೆಯಲ್ಲಿ ಪಾಲ್ಗೊಳ್ಳಿ, ಭಾರತದ ಜನತೆಯ ಮುಂದೆ ನಿಮ್ಮ ಅಭಿಪ್ರಾಯಗಳನ್ನು ಮಂಡಿಸಿರಿ" ಎಂದು ಅವರು ಮಿ. ಜಿನ್ನಾರವರಿಗೆ ಹೇಳಬೇಕಾಗಿತ್ತು. ಮುಸ್ಲಿಂಲೀಗ್ ಬರಬಾರದೆಂದು ಯಾರೂ ಹೇಳಿಲ್ಲ, ಮುಸ್ಲಿಂಲೀಗ್ ಇಲ್ಲಿಗೆ ಬರಬೇಕು, ನಾವು ಮುಖಾಮುಖಿಯಾಗಿ ಭೇಟಿ ಯಾಗಬೇಕು, ಅವನ್ನೆಲ್ಲಾ ಗಣನೆಗೆ ತೆಗೆದುಕೊಳ್ಳುವುದಿಲ್ಲವೇನೋ ಎಂದು ಮುಸ್ಲಿಂಲೀಗ್ ಭಾವಿಸಬಾರದು. ಬಹುಮತ ಕೊನೆಯ್ಯ ಅಸ್ತ್ರ, ಭಾವೀರಾಜ್ಯಾಂಗದ ಬಗ್ಗೆ ಒಂದು ಒಡಂಬಡಿಕೆಗೆ ಬರಲು ಎಲ್ಲ ಪ್ರಯತ್ನಮಾಡಬೇಕು. ಮಾಡಲಾಗುತ್ತದೆ ಎಂಬುದತೂ ಸ್ಪಷ್ಟ, ಮುಸ್ಲಿಂ ಲೀಗ್ ಇಲ್ಲಿಗೆ ಬರದಂತೆ ಏಕೆ ತಡೆಯಲಾಗುತ್ತದೆ ? ನನ್ನ ಆರೋಪ ಏನೆಂದರೆ ಬ್ರಿಟಿಷ್ ಕುಮ್ಮಕ್ಕಿನಿಂದ ಮುಸ್ಲಿಂಲೀಗ್ ಬರುತ್ತಿಲ್ಲ. ಮುಸ್ಲಿಂಲೀಗ್ ಬರದಿದ್ದರೆ, ರಾಜ್ಯಾಂಗ ರಚನೆ ಸಭೆಯ ಅಂತಿಮ ತೀರ್ಮಾನಕ್ಕೆ ಅದು ವಿಟೋ ಚಲಾಯಿಸುವುದಕ್ಕೆ ಸಾಧ್ಯವಾಗುತ್ತದೆ ಎಂದು ಅದಕ್ಕೆ ಪ್ರಚೋದಿಸಲಾಗುತ್ತಿದೆ. ಒಂದಲ್ಲ ಒಂದು ರೀತಿಯ ವಿಟೋ ಅಧಿಕಾರಿ ಮುಸ್ಲಿಂಲೀಗ್‌ನ ಕೈಗೆ ಮತ್ತೆ ಹೋಗುತ್ತದೆ. ಈ ಸಭೆಯ ಮುಂದಿನ ಚಟುವಟಿಕೆಗಳಿಗೆ ಅಪಾಯ ಇರುವುದು ಅಲ್ಲೇ. ನಾನು ವಿವರಗಳಿಗೆ ಹೋಗುವುದಿಲ್ಲ. ಅದಕ್ಕೆ ಇದು ಸಕಾಲವೂ ಅಲ್ಲ, ಇದು ಸಂದರ್ಭವೂ ಅಲ್ಲ, ಅನೇಕ ಬ್ರಿಟಿಷ್ ಹೇಳಿಕೆಗಳ ಬಗ್ಗೆ ನಾನು ಚರ್ಚಿಸುವಾಗ ಎಲ್ಲವನ್ನು ಹೇಳುತ್ತೇನೆ. ಈಗ ನಾನು ಇಷ್ಟು ಮಾತ್ರ ಹೇಳಬಲ್ಲೆ : ಈ ರಾಜ್ಯಾಂಗ ರಚನಾ ಸಭೆಯು, ತತ್ಕಾಲದಲ್ಲಿ, ಬ್ರಿಟಿಷರ ಕೂಸಾಗಿದ್ದರೂ, ಅದು ಒಮ್ಮೆ ಅಸ್ತಿತ್ವಕ್ಕೆ ಬಂದಾದ ಮೇಲೆ, ಅದು ತನ್ನ ಹಕ್ಕನ್ನು ಪ್ರತಿಪಾದಿಸುವ ದೃಢ ಸಂಕಲ್ಪ ಮಾಡಿದ್ದಾದರೆ, ಭಾರತವು ಸ್ವಾತಂತ್ರ್ಯಗಳಿಸುವುದಕ್ಕೆ ಮತ್ತು ಜಾತಿ, ಮತ್ತು ಪಂಗಡ ಭಾವನೆಗೆ ಆಸ್ಪದಕೊಡದೆ ಭಾರತದ ಜನತೆಗೆ ಯಾವುದು ಒಳ್ಳೆಯದೋ, ಯಾವುದು ಸೂಕ್ತವೋ ಅದನ್ನು ಮಾಡುವ ಅಧಿಕಾರ ಅದಕ್ಕಿರುತ್ತದೆ.

ಭಾರತದ ರಾಷ್ಟ್ರೀಯ ಕಾಂಗ್ರೆಸ್ ಮೇ, 16ರ ಕ್ಯಾಬಿನೆಟ್ ಮಿಷನ್ ಸಲಹೆಗಳನ್ನು ಸಮರ್ಥಿಸುತ್ತದೆಂದು ನಾವೀಗ ಹೇಳಿದ್ದೇವೆ. ಏಕೆಂದರೆ, ಸಂಧಾನಗಳಲ್ಲಿ ಪಾಲ್ಗೊಂಡಿದ್ದ ಪ್ರಮುಖ ಪಕ್ಷಗಳಲ್ಲಿ ಅದೂ ಒಂದು. ನಿನ್ನೆ, ಸನ್ಮಾನ್ಯ ಸರ್ದಾರ್ ವಲ್ಲಭಾಯ್ ಪಟೇಲರು ಎದ್ದು ನಿಂತು 1946ರ ಮೇ, 16ರ ಹೇಳಿಕೆಗೂ ಮೀರಿದಂತಹ ಯಾವುದನ್ನೂ ಕಾಂಗ್ರೆಸ್

ಒಪ್ಪಿಕೊಳ್ಳುವುದಿಲ್ಲವೆಂದು ಹೇಳಿದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಸನ್ಮಾನ್ಯ ಪಟೇಲರ ಆ ಮಾತು ಅತೀ ಮಹತ್ವದ್ದೆಂದು ನಾನು ಭಾವಿಸಿದ್ದೇನೆ. ನಮ್ಮ ನಿಲುವು ಈ ರೀತಿಯ ದಾಗಿರಬೇಕೆಂದು ನಾನು ಹೇಳುತ್ತೇನೆ. ಮೇ 16ರ ಕ್ಯಾಬಿನೆಟ್ ಮಿಷನ್ ಸಲಹೆಗಳಿಗೆ ಒಂದು ಅವಕಾಶ ಕೊಡೋಣ. 1946ರ ಮೇ, 16ರ ಸಲಹೆಗಳ ಆಧಾರದ ಮೇಲೆ ನಾವು ಇತರ ಪಕ್ಷಗಳೊಂದಿಗೆ ಮತ್ತು ಸಂಬಂಧಪಟ್ಟವರೊಂದಿಗೆ ನಿಜವಾದ, ಪ್ರಾಮಾಣಿಕವಾದ ಒಂದು ಒಪ್ಪಂದಕ್ಕೆ ಬರುವಂತೆ ಕಾರ್ಯಪ್ರವೃತ್ತರಾಗೋಣ. ಆದರೆ, ಇನ್ನೇನಾದರೂ ವ್ಯಾಖ್ಯಾನಗಳು ಬಂದ ಪಕ್ಷದಲ್ಲಿ ನಾವು ಒಪ್ಪಿಕೊಳ್ಳಬಾರದು ಇಲ್ಲವೇ ಯಾವುದಾದರೂ ಪಕ್ಷವು ಸಲಹೆಗಳಿಗೆ ಭಿನ್ನಮತ ವ್ಯಕ್ತಪಡಿಸಬಯಸಿದರೆ ಅಥವಾ ವಿಮುಖವಾದರೆ ನಾವು, ನಾವು ಬಯಸಿದ ರಾಜ್ಯಾಂಗವನ್ನು ರಚಿಸಲು ಮುಂದಾಗೋಣ.

1946ರ ಮೇ, 16ರ ಹೇಳಿಕೆಯ ಒಂದು ಅಶದ ಬಗ್ಗೆ ಬಹಳಷ್ಟು ಭಿನ್ನಾಭಿಪ್ರಾಯ ಇದೆ. ಅದು, ಗ್ರೂಪಿಂಗ್‌ಗೆ ಸಂಬಂಧಿಸಿದ್ದು. ಸಂಧಾನದಲ್ಲಿ ಪಾಲ್ಗೊಂಡಿರುವ ಪ್ರಮುಖ ಪಕ್ಷಗಳಲ್ಲಿ ಒಂದಾದ ಕಾಂಗ್ರೆಸ್ ಪಕ್ಷವು ತಾನು ಯಾವ ವ್ಯಾಖ್ಯಾನವನ್ನು ಅಂತಿಮವಾಗಿ ಒಪ್ಪಿಕೊಳ್ಳುತ್ತದೋ ಅದನ್ನು ನಿರ್ಧರಿಸುವುದು ಅದಕ್ಕೇ ಸೇರಿದ್ದು. ಬ್ರಿಟಿಷ್ ಸರ್ಕಾರವು ಕೊಟ್ಟಿರುವಂತಹ ವ್ಯಾಖ್ಯಾನವನ್ನು ಒಪ್ಪಿಕೊಳ್ಳದಿದ್ದರೆ ಮತ್ತು ಆ ಹೇಳಿಕೆಯ ಆ ಭಾಗದ ಮೇಲೆ ಅದು (ಕಾಂಗ್ರೆಸ್) ಕೊಟ್ಟಿರುವ ವ್ಯಾಖ್ಯಾನವು ಸರಿಯಾದುದಾದರೆ ಆಗ ಬಿಕ್ಕಟ್ಟು ಉದ್ಭವಿಸಬಹುದು. ಈ ನಿರ್ಣಯದ ಮೇಲಿನ ಚರ್ಚೆಗಿಂತಲೂ ಬೇರೆಯದೇ ಆದ ರೀತಿಯಲ್ಲಿ ಆ ವಿಚಾರವನ್ನು ತೀರ್ಮಾನಿಸಬೇಕಾಗುತ್ತದೆ. ಈ ಸಭೆಯ ನಡೆವಳಿಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ವಾಸ್ತವವಾಗಿ, ಆ ವಿಚಾರದ ಮೇಲೆ ತೀರ್ಮಾನ ತೆಗೆದುಕೊಳ್ಳುವಲ್ಲಿ ವಿಳಂಬ ಆದಷ್ಟೂ ಅನಿಶ್ಚಿತತೆಯ ವಾತಾವರಣ ಹೆಚ್ಚುತ್ತಾ ಹೋಗುತ್ತದೆ. ಆದರೆ, ಒಂದು ವೇಳೆ ಆ ವಿಚಾರ ತೀರ್ಮಾನವಾದ ಮೇಲೆ, ಬ್ರಿಟಿಷ್ ಸರ್ಕಾರವು ಮುಂದಿಟ್ಟಿರುವಂತಹ ವ್ಯಾಖ್ಯಾನವನ್ನು, ಸಂಯುಕ್ತ ನ್ಯಾಯಾಲಯಕ್ಕೆ ಉಲ್ಲೇಖ ಮಾಡುವ ಮೂಲಕವಾಗಲಿ ಅಥವಾ ಬೇರೆ ರೀತಿಯಲ್ಲಾಗಲಿ, ಆ ಬಗ್ಗೆ ನಾನು ಹೆಚ್ಚು ಹೇಳಬೇಕಾಗಿಲ್ಲ. ಒಪ್ಪಿಕೊಂಡ ಪಕ್ಷದಲ್ಲಿ, ಆಗ ನಾವು ಕಾರ್ಯಪ್ರವೃತ್ತರಾಗ ಬೇಕಾಗುತ್ತದೆ. ಮುಸ್ಲಿಂಲೀಗ್ ಬರಬಹುದು ಅಥವಾ ಬರದಿರಬಹುದು. ಅದು ಬಂದರೆ ತುಂಬಾ ಒಳ್ಳೆಯದು. ಒಂದು ವೇಳೆ ಅದು ಬರದೇ ಹೋದರೂ ಅದರಿಂದ ಭಾರತದ ಸ್ವಾತಂತ್ರ್ಯಕ್ಕೆ ಧಕ್ಕೆ ಉಂಟಾಗುವುದಿಲ್ಲ. ರಾಜ್ಯಾಂಗ ರಚನಾ ಸಭೆಯಲ್ಲಿ ನಮ್ಮ ಕಾರ್ಯಕಲಾಪಗಳನ್ನು ಮುಂದುವರಿಸಿದ್ದೇವೆಂದು ನಾವು ಧೈರ್ಯದಿಂದ ಹೇಳಬಹುದು. ಬಿಕ್ಕಟ್ಟು ಉದ್ಭವವಾದ ಪಕ್ಷದಲ್ಲಿ ಉದ್ಭವಿಸುವ ಸಾಧ್ಯತೆಗೆ ಇದೆ ಎಂದು ನನಗನ್ನಿಸುತ್ತಿದೆ, ನಮ್ಮ ದೇಶ ಸ್ವತಂತ್ರವಾಗಬೇಕಾದರೆ ಅದು ರಾಜ್ಯಾಂಗ ವಿಧಿವಿಧಾನಗಳಿಗನುಸಾರವಾಗಿ ಆಗುವುದಿಲ್ಲ ಎಂದು ನಾನು ಭಾವಿಸಿದ್ದೇನೆ. ಕಳೆದ, ಕೆಲವು ದಿನಗಳಲ್ಲಿ ಆಗಿರುವ ಬೆಳವಣಿಗೆಗಳ ದೃಷ್ಟಿಯಿಂದ ಹೇಳುವುದಾರರೆ, ನಮ್ಮ

ಜವಾಬ್ದಾರಿ ಸುಲಭವಾದುದೇನಲ್ಲ. ಏನೇ ಮಾಡುವುದಾದರೂ ಅದನ್ನು ರಾಜ್ಯಾಂಗ ಸಭೆಯ ಮಾಧ್ಯಮದ ಮೂಲಕವೇ ಮಾಡಬೇಕೇ ಹೊರತು ಬೇರೆ ರೀತಿಯಿಂದಲ್ಲ. ನಾವು ಕಾರ್ಯ ನಿರ್ವಹಿಸಬೇಕಾದರೆ, ನಮ್ಮದೇ ಆದ ಜವಾಬ್ದಾರಿಯಿಂದ ನಿರ್ವಹಿಸಬೇಕಾಗುತ್ತದೆ ಮತ್ತು ರಾಜ್ಯಾಂಗವನ್ನು ಸಿದ್ಧಪಡಿಸಬೇಕಾಗುತ್ತದೆ. ಅದನ್ನು ವಿಶ್ವದ ಅಭಿಪ್ರಾಯಕ್ಕಾಗಿ ಮಂಡಿಸಬೇಕಾಗುತ್ತದೆ ಹಾಗೂ ಭಾರತೀಯರನ್ನು ಅಲ್ಪಸಂಖ್ಯಾತರನ್ನು ಮತ್ತು ಎಲ್ಲರನ್ನು ನ್ಯಾಯೋಚಿತವಾಗಿ ಸಮಾನವಾಗಿ ಕಂಡಿದ್ದೇವೆಂದು ಪ್ರತಿಯೊಬ್ಬರಿಗೂ ಮನವರಿಕೆ ಮಾಡಿಕೊಡಬೇಕಾಗುತ್ತದೆ.

ಕೊನೆಗೂ ದಕ್ಷಿಣ ಆಫ್ರಿಕಾದ ವಿಷಯ ಏನಾಯಿತು ? ನಮ್ಮ ನಡುವೆ ಸನ್ಮಾನ್ಯ ವಿಜಯಲಕ್ಷ್ಮಿ ಪಂಡಿತ್ ಇದ್ದರೆ. ಭಾರೀ ವಿಜಯದ ನಂತರ ಅವರು ತಾಯ್ನಾಡಿಗೆ ಮರಳಿದ್ದಾರೆ. ಅಲ್ಲೂಸಹ ಅವರಿಗೆ ನಾವು ನಂಬಿಕೊಂಡಿದ್ದ, ಗ್ರೇಟ್ ಬ್ರಿಟನ್ನಿನ, ಸರ್ಕಾರ ಬೆಂಬಲ ನೀಡಲಿಲ್ಲ. ಗ್ರೇಟ್ ಬ್ರಿಟನ್ನಿನ ಮತ ಭಾರತದ ವಿರುದ್ಧ ಬಿತ್ತು. ಅದರೂ, ಅವರು ವಿಜಯಿಗಳಾದರು, ಭಾರತೀಯ ನಿಯೋಗ ವಿಶ್ವದ ಮನ್ನಣೆಯನ್ನು ಗಳಿಸಿತು. ರಾಜ್ಯಾಂಗ ಸಭೆಯ ವಿಷಯವೂ ಅದೇ ಬಗೆಯದು. ನಾವು ಎಲ್ಲಾ ರೀತಿಯ ಧೈರ್ಯ ತಾಳಿದರೆ ಮತ್ತು ನ್ಯಾಯೋಚಿತ ಹಾಗೂ ಧರ್ಮಸಮ್ಮತವಾದ ರಾಜ್ಯಾಂಗವನ್ನು ರಚಿಸಿದರೆ, ಅಗತ್ಯಬಿದ್ದ ಪಕ್ಷದಲ್ಲಿ, ನಾವು ಈ ರಾಜ್ಯಂಗ ಸಭೆಯನ್ನು ಸ್ವತಂತ್ರ ಹಾಗೂ ಸಾರ್ವಭೌಮ ಭಾರತ ಗಣರಾಜ್ಯದ ಮೊದಲ ಸಂಸತ್ತೆಂದು ಘೋಷಿಸಲು ನಮಗೆ ಸಾಧ್ಯವಾಗುತ್ತದೆ. (ಜೋರು ಚಪ್ಪಾಳೆ) ಆಗ, ನಮ್ಮದೇ ಆದ ರಾಷ್ಟ್ರೀಯ ಸರ್ಕಾರವನ್ನು ರಚಿಸಲು ಮತ್ತು ಈ ನಾಡಿನ ಜನರಿಗೆ ನಮ್ಮ ತೀರ್ಮಾನವನ್ನು ತಿಳಿಸಲು ಸಾಧ್ಯವಾಗುತ್ತದೆ. ಕೆಲವು ನಿಮಿಷಗಳ ಹಿಂದೆ ನಾನು ಹೇಳಿದಂತೆ, ನಮಗೆ ಬ್ರಿಟಿಷ್ ಜನರ ಅಥವಾ ಬ್ರಿಟಿಷ್ ಸರ್ಕಾರದ ಅನುಮತಿ ಬೇಕಾಗಿಲ್ಲ. ಅನುಮತಿ ಕೊಡಬೇಕಾದವರು ಯಾರೆಂದರೆ ಭಾರತದ ಜನತೆ. ಆದ್ದರಿಂದ, ನಮ್ಮ ರಾಷ್ಟ್ರದ ಜನತೆಗೆ ಆ ಬಗ್ಗೆ ನಾವು ಮನವಿ ಮಾಡಿಕೊಳ್ಳೋಣ.

ಸನ್ಮಾನ್ಯರೆ, ನಾವು ಅಲ್ಪ ಸಂಖ್ಯಾತರ ಬಗ್ಗೆ ಮಾತನಾಡುವಾಗ ಭಾರತದಲ್ಲಿ ಮುಸ್ಲಿಂಲೀಗ್ ಮಾತ್ರವೇ ಅಲ್ಪ ಸಂಖ್ಯಾತರನ್ನು ಪ್ರತಿನಿಧಿಸುತ್ತದೆ ಎಂಬ ಅಭಿಪ್ರಾಯ ವ್ಯಕ್ತವಾಗುತ್ತಿರುತ್ತದೆ. ಆದರೆ, ಅದು ಹಾಗಲ್ಲ, ಇತರ ಅಲ್ಪಸಂಖ್ಯಾತರೂ ಇದ್ದಾರೆ. ನಾನು ಬಂಗಾಳದಿಂದ ಬಂದವನು, ಬಂಗಾಳದ ಸಂಕಷ್ಟಗಳನ್ನು ಕಣ್ಣಾರೆ ಕಂಡವನು. ಭಾರತದಲ್ಲಿ ಕೊನೇ ಪಕ್ಷ ನಾಲ್ಕು ಸಂಸ್ಥಾನಗಳಲ್ಲಿ ಹಿಂದೂಗಳೂ ಸಹ ಅಲ್ಪ ಸಂಖ್ಯಾತರೆಂಬುದನ್ನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಅಲ್ಪ ಸಂಖ್ಯಾತರ ಹಕ್ಕುಗಳನ್ನು ಸಂರಕ್ಷಿಸುವುದಾದರೆ ಒಂದು ಸಂಸ್ಥಾನದಲ್ಲಿ ಅಥವಾ ಇನ್ನೊಂದು ಸಂಸ್ಥಾನದಲ್ಲಿ ಇರುವ ಪ್ರತಿಯೊಂದು ಅಲ್ಪ ಸಂಖ್ಯಾತರ ಹಕ್ಕುಗಳನ್ನು ಸಂರಕ್ಷಿಸಲೇಬೇಕಾಗುತ್ತದೆ.

ಕಳೆದ ರಾತ್ರಿಯಷ್ಟೇ ಲಾರ್ಡ್ ಸಿಮನ್‌ರವರು, ದೆಹಲಿಯಲ್ಲಿ ನಡೆಯುತ್ತಿರುವ ರಾಜ್ಯಾಂಗ ಸಭೆಯಲ್ಲಿ ಬರೀ ಸವರ್ಣೀಯ ಹಿಂದೂಗಳೇ ಇದ್ದಾರೆಂದು ವಟವಟಗುಟ್ಟಿದ್ದಾರೆ. ಕಳೆದ ಕೆಲವು ದಿನಗಳಲ್ಲಿ ಇಂಗ್ಲೆಂಡಿನಲ್ಲಿ ಬೇಕಾದಷ್ಟು ಸುಳ್ಳು ಹೇಳಿಕೆಗಳನ್ನು ನೀಡಲಾಗಿದೆ. ಅವುಗಳ ಲೆಕ್ಕ ಇಡುವುದು ಕಷ್ಟವಾಗಿದೆ. ಈ ದಿನ ಯಾರು ಈ ಸಭೆಯಲ್ಲಿ ಪ್ರತಿನಿಧಿಗಳಾಗಿ ಬಂದಿದ್ದಾರೆ ? ಇಲ್ಲಿ ಹಿಂದೂಗಳು ಇದ್ದಾರೆ. ಕೆಲವರು ಮುಸ್ಲೀಮರು ಸಹ ಇದ್ದರೆ. ಮುಸ್ಲಿಂ ಸಂಸ್ಥಾನವೊಂದರಲ್ಲಿ ಮುಸ್ಲಿಂಲೀಗೇ ಅಧಿಕಾರದಲ್ಲಿದ್ದರೂ ಕೊನೇ ಪಕ್ಷ ಮೂವರು ಮುಸ್ಲಿಮರು ಆ ಸರ್ಕಾರದ ಪ್ರತಿನಿಧಿಗಳಾಗಿ ಇದ್ದಾರೆ. ಶ್ರೀಯುತ ಜಿನ್ನಾರವರ ಭಾವೀ ಪಾಕಿಸ್ತಾನದ ಅಂಗ ಭಾಗವಾಗುತ್ತದೆಂದುಕೊಂಡಿರುವ ಅಸ್ಸಾಂ ಸಂಸ್ಥಾನದ ಪ್ರತಿನಿಧಿಗಳು ಇಲ್ಲಿ ಇದ್ದಾರೆ. ಆ ಸಂಸ್ಥಾನದ ಬಹುಸಂಖ್ಯಾತ ಜನರು ಅಧಿಕೃತವಾಗಿ ಆ ಸಂಸ್ಥಾನವನ್ನು ಪ್ರತಿನಿಧಿಸಿದ್ದಾರೆ. ಇನ್ನು ಪರಿಶಿಷ್ಟ ಜಾತಿಗಳು - ರಾಜ್ಯಾಂಗ ಸಭೆಗೆ ಆಯ್ಕೆಯಾದ ಎಲ್ಲಾ ಪರಿಶಿಷ್ಟ ಜಾತಿಯ ಸದಸ್ಯರು ಇಲ್ಲಿದ್ದಾರೆ. ಎಲ್ಲಾ ವಿಷಯಗಳಲ್ಲಿ ನಮ್ಮೊಂದಿಗೆ ಒಮ್ಮತಕ್ಕೆ ಬರದಿರಬಹುದಾದ ಡಾ|| ಅಂಬೇಡ್ಕರ್ ಅವರು ಇಲ್ಲಿದ್ದಾರೆ (ಚಪ್ಪಾಳೆ). ಅವರ ಮನವೊಲಿಸಲು ಅಥವಾ ಪುನಃ ಮನವೊಲಿಸಲು ಮತ್ತು ನಮ್ಮ ಕಡೆ ಅವರು ಬರುವಂತೆ ಮಾಡಲು ನಮಗೆ ಸಾಧ್ಯವಾಗಬಹುದು. (ಜೋರು ಚಪ್ಪಾಳೆ). ಅವರು ಯಾರ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಿದ್ದಾರೆಂಬುದನ್ನು ನಂತರ ಚರ್ಚೆ ಮಾಡೋಣ. ಅವರಲ್ಲದೆ, ಇತರೆ ಪರಿಶಿಷ್ಟ ಜಾತಿಯ ಸದಸ್ಯರೂ ಸಹ ಇಲ್ಲಿದ್ದಾರೆ. ಸಿಖ್ಖರೂ ಇಲ್ಲಿದ್ದಾರೆ. ಆಂಗ್ಲೋ-ಇಂಡಿಯನ್ನರಿದ್ದಾರೆ. ಕೊನೆಯದಾಗಿ, ಪಾರ್ಸಿಗಳೂ ಇಲ್ಲಿದ್ದಾರೆ. ಹೀಗಿರುವಾಗ, ಲಾರ್ಡ್ ಸಿಮನ್ ಬಾಯಲ್ಲಿ ಅಥವಾ ಇನ್ನಾರದೋ ಬಾಯಲ್ಲಿ ಸುಳ್ಳು ಹೇಗೆ ಬಂತು ? ಗುಡ್ಡಗಾಡು ಪ್ರದೇಶದ ಪ್ರತಿನಿಧಿಗಳೂ, ಆದಿವಾಸಿಗಳೂ ಸಹ ಇಲ್ಲಿದ್ದಾರೆ. ವಾಸ್ತವಾಗಿ, ಮುಸ್ಲಿಂಲೀಗ್ ಒಂದನ್ನು ಬಿಟ್ಟರೆ, ಭಾರತ ರಾಜ್ಯಾಂಗ ಸಭೆಗೆ ಪ್ರತಿಯೊಂದು ವರ್ಗದ ಜನರು ಆಯ್ಕೆಯಾಗಿದ್ದಾರೆ. ಮುಸ್ಲಿಂಲೀಗ್ ಒಂದು ಭಾಗವನ್ನು ಪ್ರತಿನಿಧಿಸುತ್ತಿದೆ. ಅದು ದೊಡ್ಡ ಭಾಗವೆಂದು ನಾನು ಭಾವಿಸಿದ್ದೇನೆ. ಎಂದರೆ, ಮುಸ್ಲಿಂ ಸಮುದಾಯದ ತುಂಬಾ ದೊಡ್ಡ ಭಾಗ ಅದು. ಆದ್ದರಿಂದ, ಈ ರಾಜ್ಯಾಂಗ ಸಭೆಯಲ್ಲಿ ಜನತೆಯ ಒಂದು ಭಾಗ ಎಂದರೆ, ಸವರ್ಣೀಯ ಹಿಂದೂಗಳು ಮಾತ್ರವೇ ಇದ್ದಾರೆಂದು ಹೇಲುವುದು ಅಪ್ಪಟಸುಳ್ಳು. ಸವರ್ಣೀಯ ಹಿಂದೂಗಳು ಇತರರನ್ನು ದಮನ ಮಾಡಲೆಂದೇ ಹುಟ್ಟಿದ್ದಾರೆಂದು ಹೇಳಿಹೊರಟಂತಿದೆ. ಈ ರೀತಿ ಬಣ್ಣಕಟ್ಟಿ ಹೇಳಿದರೆ ಭಾರತದ ಹಿತಾಸಕ್ತಿಗೆ ಅದರಿಂದಾಗುವ ದುರಂತ ಅಷ್ಟಿಷ್ಟಲ್ಲ. ಭಾರತದ ಜನತೆಯ ಒಂದು ಭಾಗ ರಾಜ್ಯಾಂಗ ಸಭೆಗೆ ಬರದೇ ಹೋದರೆ ಇಂಡಿಯಾ ಗುಲಾಮ ದೇಶವಾಗಿಯೇ ಉಳಿಯುತ್ತದೆಂದು ಹೇಳಲಾಗುತ್ತಿದೆ. ("ಇಲ್ಲ, ಇಲ್ಲ" ಎಂದು ಒಂದು ಧ್ವನಿ). ಯಾರು ಬಂದಿಲ್ಲ, ಯಾರು ಕುಮ್ಮಕ್ಕು ಕೊಡುತ್ತಿದ್ದಾರೆಂಬುದನ್ನು ಈ ನಾಡಿನ ಜನತೆಗೆ ನಾವು ತಿಳಿಸಬೇಕಾಗಿದೆ. ಸನ್ಮಾನ್ಯರೆ, ಬ್ರಿಟಿಷ್ ಜನರಿಗೆ ಕೊನೇ ಬಾರಿ ನಾನು ಹೇಳುತ್ತಿದ್ದೇನೆ

"ನಾವು ನಿಮ್ಮೊಂದಿಗೆ ಸ್ನೇಹದಿಂದಿರಲು ಬಯಸಿದ್ದೇವೆ. ನೀವು ಈ ನಾಡಿಗೆ ವ್ಯಾಪಾರಕ್ಕಾಗಿ ಬಂದಿರಿ, ಮೊಘಲರಿಗೂ ಮುಂಚೆ ನೀವು ಯಾಚಕರಾಗಿ ಬಂದಿರಿ. ಈ ನಾಡಿನ ಸಂಪತ್ತನ್ನು ಕೊಳ್ಳೆ ಹೊಡೆಯಲು ಬಂದಿರಿ. ಅದೃಷ್ಟ ನಿಮ್ಮ ಕಡೆಗಿತ್ತು. ಮೋಸ, ದಗಾ, ವಂಚನೆ ಎಲ್ಲಾ ಮಾಡಿ, ಬಂದೂಕು ತೋರಿಸಿ ಇಲ್ಲಿ ನೆಲೆಯೂರಲು ಯಶಸ್ವಿಯಾದಿರಿ. ಇವೆಲ್ಲಾ ವಿಷಯಗಳು ಇತಿಹಾಸದ ಪುಟಗಳಲ್ಲಿ ಸೇರಿಹೋಗಿವೆ. ನಿಮ್ಮ ಸರ್ಕಾರ ಇಲ್ಲಿ ನೆಲೆಯೂರಿತು. ಆದರೆ, ಆ ನಾಡಿನ ಜನರ ಸಹಕಾರದಿಂದಲ್ಲ. ನೀವು ಪ್ರತ್ಯೇಕ ಎಲೆಕ್ಟೋರೇಟ್ ಜಾರಿಗೆ ತಂದಿರಿ. ಭಾರತದ ರಾಜಕಾರಣದಲ್ಲಿ ಧರ್ಮವನ್ನು ಬೆರೆಸಿದಿರಿ. ನಾವು ಹಾಗೇನೂ ಮಾಡಲಿಲ್ಲ. ಮಾಡಿದ್ದು ನೀವೇ ಏಕೆಂದರೆ ಈ ನಾಡಿನಲ್ಲಿ ನಿಮ್ಮ ಆಡಳಿತ ಬೇರೂರಬೇಕಿತ್ತು. ಪಟ್ಟಭದ್ರ ಹಿತಾಸಕ್ತಿಗಳನ್ನು ಸೃಷ್ಟಿಸಿದಿರಿ. ಈಗಲೂ ಅವು ತಾಂಡವವಾಡುತ್ತಿದೆ. ಅವುಗಳನ್ನು ಹತ್ತಿಕ್ಕಲು ಈಗಲೂ ಸಾಧ್ಯವಾಗುತ್ತಿಲ್ಲ. ಇಷ್ಟೆಲ್ಲಾ ಮಾಡಿದ ನೀವು, ಇನ್ನು ಮುಂದೆಯೂ ಇಂಗ್ಲೆಂಡ್ ಮತ್ತು ಭಾರತ ಮಿತ್ರ ರಾಷ್ಟ್ರಗಳಾಗಿಯೇ ಇರಬೇಕೆಂದು ಬಯಸುವುದಾರೆ ನಿಮ್ಮ ಸಹಕಾರ ಹಸ್ತವನ್ನು ಒಪ್ಪಿಕೊಳ್ಳಲು ನಾವು ಸಿದ್ಧರಿದ್ದೇವೆ. ಆದರೆ, ಭಾರತದ ಅಂತರಿಕ ಸಮಸ್ಯೆ ಬ್ರಿಟಿಷ್ ಸರ್ಕಾರದ ಕೆಲಸ ಅಲ್ಲ. ಪ್ರತಿಯೊಂದು ದೇಶಕ್ಕೂ ಅದರದೇ ಆದ ಆಂತರಿಕ ಸಮಸ್ಯೆಗಳಿರುತ್ತದೆ. ಭಾರತದಲ್ಲೂ ತನ್ನದೇ ಆದ ಆಂತರಿಕ ಸಮಸ್ಯೆಗಳಿವೆ ನಮ್ಮ ಆಂತರಿಕ ಸಮಸ್ಯೆಗಳನ್ನು ನಮ್ಮ ಜನರೇ ಬಗೆಹರಿಸಕೊಳ್ಳ ಬೇಕಲ್ಲವೇ". ಸನ್ಮಾನ್ಯರೆ, ನಾವು ಈಗ ರಾಜ್ಯಾಂಗವನ್ನು ರಚಿಸುತ್ತಿಲ್ಲ. ನಾವು ಮುಂದೇನು ಮಾಡಬೇಕೆಂಬುದರ ಬಗ್ಗೆ ಸಾಮಾನ್ಯ ರೂಪುರೇಷೆಗಳನ್ನು ರೂಪಿಸುತ್ತಿದ್ದೇವೆ. ಈ ಸಭೆಯು ಚಿಕ್ಕಪುಟ್ಟ ತಾಂತ್ರಿಕ ಲೋಪದೋಷಗಳಿಗೆ ಗಮನ ಕೊಡುವುದಿಲ್ಲ. ಏನೇ ಕಷ್ಟಗಳು ಬಂದರೂ, ಅಡ್ಡಿ ಅಡಚಣೆಗಳು ಉಂಟಾದರೂ ನಾವು ನಮ್ಮ ಕೆಲಸವನ್ನು ಮುಂದುವರೆಸುತ್ತೇವೆ. ಈ ತಾಯ್ನಾಡು ಈ ವರ್ಗ ಆ ವರ್ಗದವರದ್ದಲ್ಲ. ಈ ನಾಡಿನಲ್ಲಿ ಜಾತಿ, ಮತ, ಧರ್ಮ, ಸಮುದಾಯ ಏನೇ ಇರಬಹುದು. ಆದರೆ, ಇಲ್ಲಿ ವಾಸಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿ, ಪುರುಷ, ಮಹಿಳೆ ಹಾಗೂ ಮಗುವಿಗೂ ಈ ಮಹಾನ್ ರಾಷ್ಟ್ರಸೇರಿದ್ದು, ಇಲ್ಲಿ ಎಲ್ಲರಿಗೂ ಸಮಾನಾವಕಾಶಗಳಿರುತ್ತವೆ. ಸಾಮಾನ ಸ್ವಾತಂತ್ರ್ಯಗಳಿರುತ್ತವೆ. ಸಮಾನ ಸ್ಥಾನಮಾನ ಇರುತ್ತವೆ. ಇಲ್ಲಿ ಎಲ್ಲರೂ ತಮ್ಮ ಪ್ರತಿಭೆ ಕೌಶಲ್ಯವನ್ನು ಬೆಳೆಸಿಕೊಂಡು ನಮ್ಮ ತಾಯ್ನಾಡಿಗೆ ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ, ನಿರ್ಭಯದಿಂದ ಸೇವೆ ಸಲ್ಲಿಸುವ ಎಲ್ಲ ಅವಕಾಶಗಳಿರುತ್ತವೆ.

## ರಾಷ್ಟ್ರಭಾಷೆಯಾಗಿ ಹಿಂದಿ *

ಭಾರತದಲ್ಲಿರುವ ಒಂದು ಅಥವಾ ಇನ್ನೊಂದು ಸಂಸ್ಥಾನದ ಜನರಿಗಷ್ಟೇ ಅಲ್ಲ ಭಾರತದ ಕೋಟಿ ಕೋಟಿ ಜನರಿಗೆ ಸಂಬಂಧಿಸಿದ ಅತಿ ಪ್ರಮುಖವಾದ ವಿಚಾರವೊಂದನ್ನು ನಾವಿಲ್ಲಿ ಪರಿಶೀಲಿಸುತ್ತಿದ್ದೇವೆ. ಸನ್ಮಾನ್ಯರೇ, ಈ ವಿಚಾರದಲ್ಲಿ ತತ್ಕಾಲದಲ್ಲಿ ಇರಬಹುದಾದ ಭಿನ್ನಾಭಿಪ್ರಾಯಗಳನ್ನು ನಾವು ಕಡೆಗಣಿಸಿದರೂ, ಅವು ಕೆಲವರಿಗೆ ಮಹತ್ತ್ವದ್ದೆಂದು ತೋರಬಹುದು. ಕಳೆದ ಸಾವಿರಾರು ವರ್ಷಗಳಿಂದ ಭಾರತದ ಇತಿಹಾಸದಲ್ಲಿ ಪ್ರಯತ್ನವೇ ಆಗಿರದಂತಹ ಒಂದು ವಿಚಾರದ ಬಗ್ಗೆ ನಾವಿಲ್ಲಿ ತೀರ್ಮಾನ ಕೈಗೊಳ್ಳಲಿದ್ದೇವೆ. ನಮ್ಮ ಪೂರ್ವಜರು ಯಾವುದನ್ನು ಸಾಧಿಸಲಿಲ್ಲವೋ ಅದನ್ನು ಸಾಧಿಸ ಹೊರಟ್ಟಿದ್ದೇವೆಂಬುದನ್ನು ನಾವು ಪ್ರಾರಂಭದಲ್ಲೇ ತಿಳಿದುಕೊಳ್ಳಬೇಕು.

ಮಾತನಾಡಿದ ಕೆಲವು ಸದಸ್ಯರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿ, ಭಿನ್ನಾಭಿಪ್ರಾಯದ ಅಂಶಗಳಿಗೆ ಒತ್ತು ನೀಡಲು ಪ್ರಯತ್ನಿಸಿದ್ದಾರೆ. ಭಿನ್ನಾಭಿಪ್ರಾಯದ ಅಂಶಗಳ ಮೇಲೆ ನಾನು ಮುಂದೆ ಕೆಲವು ಮಾತುಗಳನ್ನಾಡುತ್ತೇನೆ. ಆದರೂ, ಈಗ ಈ ಸಭೆಯು ಸಂದರ್ಭ ಸನ್ನಿವೇಶಗಳನ್ನು ಮನಗಂಡು ಕಾರ್ಯಪ್ರವೃತ್ತರಾಗಬೇಕೆಂದು ಮತ್ತು ನಮ್ಮ ಈ ತಾಯ್ನಾಡಿನ ನಾವು ಹಾಗೂ ನಮ್ಮ ಮುಂದಿನ ಪೀಳಿಗೆಯು ಹೆಮ್ಮೆಪಡಬಹುದಾದಂಥ ಮಹತ್ವದ ಕೊಡುಗೆಯನ್ನು ನಾವು ನೀಡಬೇಕೆಂದು ನಾನು ಹೇಳಬಯಸುತ್ತೇನೆ.

ಭಾರತವು ಬಹು ಭಾಷೆಗಳ ದೇಶ. ಗತಕಾಲದ ಆಳಕ್ಕೆ ನಾವು ಇಳಿದರೆ, ಈ ನಾಡಿನ ಎಲ್ಲ ಜನರೂ ಒಂದೇ ಭಾಷೆಯನ್ನು ಒಪ್ಪಿಕೊಳ್ಳಬೇಕೆಂದು ಯಾರನ್ನೂ ಬಲವಂತ ಪಡಿಸುವುದಕ್ಕೆ ಆಗುವುದಿಲ್ಲವೆಂಬುದು ನಮಗೆ ಗೊತ್ತಿದೆ. ಭಾರತದಲ್ಲಿ ಒಂದೇ ಒಂದು ಭಾಷೆ ಇರುವಂತಹ ದಿನ ಬರುತ್ತದೆಂದು ನನ್ನ ಕೆಲವು ಸ್ನೇಹಿತರು ಮಾತನಾಡಿದ್ದಾರೆ. ನಿಜ ಹೇಳಬೇಕೆಂದರೆ, ನಾನು ಆ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಹೀಗೆನ್ನುವಾಗ, ನಾನು, ನಮ್ಮ ಮುಂದಿನ ಪುನರುಜ್ಜೀವನಕ್ಕೆ ಆಧಾರಸ್ಥಂಭವಾಗಬೇಕಾದ ಭಾರತದ ರಾಷ್ಟ್ರೀಯ ಏಕತೆಯನ್ನು ನೆಲೆಗೊಳಿಸುವ ಅಗತ್ಯವನ್ನು ಕಡೆಗಣಿಸುತ್ತಿಲ್ಲ. ಘನತೆಯಿಂದ, ಸೌಹಾರ್ದದಿಂದ ಮತ್ತು ಸ್ವಾಭೀಮಾನದಿಂದ ಕೆಲಸ ಮಾಡಬೇಕಾದರೆ, ಪ್ರಸ್ತುತ ಅತಿ ಮುಖ್ಯವಾದ, ನಮ್ಮ ದೇಶದ ರಾಷ್ಟ್ರೀಯ ಜೀವನದಲ್ಲಿ ಸಮ್ಮಿಳಿತಗೊಂಡಿರುವ ಆ ಅಂಶಗಳನ್ನು ಗಣನೆಗೆ ತೆಗೆದುಕೊಂಡೇ ಆ ಐಕ್ಯತೆಯನ್ನು ಸಾಧಿಸಬೇಕಾಗುತ್ತದೆ. ಉತ್ತರದಿಂದ ದಕ್ಷಿಣದವರೆಗೆ, ಪೂರ್ವದಿಂದ ಪಶ್ಚಿಮದವರೆಗೆ ಭಾರತದಲ್ಲಿ ನಾನಾ ಭಾಷೆಗಳಿರುವುದೂ ಕೂಡ ಆಯಾ ಜನರು ಹೆಮ್ಮೆಪಡುವ ಸಂಗತಿ. ಪ್ರತಿಯೊಂದು ಭಾಷೆಯೂ ತನ್ನದೇ ಆದ ಕೊಡುಗೆ ಇತ್ತಿದೆ. ಅವೆಲ್ಲವೂ, ಭಾರತೀಯ ಜೀವನವನ್ನು, ನಾಗರೀಕತೆಯನ್ನು ರೂಪಿಸಿದೆ.

* ರಾಜ್ಯಾಂಗ ಸಭೆ ಚರ್ಚೆಗಳು. 13ನೇ ಡಿಸೆಂಬರ್ 1949

ಭಾರತದ ರಾಜ್ಯಾಂಗದಲ್ಲಿ ಒಂದು ವಿಧಿಯನ್ನು ಅಳವಡಿಸಿ, ಒತ್ತಡ ತಂದರೆ ಒಂದು ಭಾಷೆಯನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆಂದು ಯಾರಾದರೂ ಭಾವಿಸಿದರೆ ಅದರಿಂದ ಏನೇನೂ ಆಗುವುದಿಲ್ಲವೆಂದು ನಾನು ಹೇಳುತ್ತೇನೆ. ವಿವಿಧತೆಯಲ್ಲಿ ಏಕತೆಯೇ ಭಾರತದ ಜೀವಾಳ. ಈ ಬಗೆಯ ಏಕತೆಯನ್ನು ಪರಸ್ಪರ ತಿಳಿವಳಿಕೆ, ನಂಬಿಕೆ ಹಾಗೂ ಪರಸ್ಪರ ಸಹಮತದ ವಿಧಾನದಿಂದ ಸಾಧಿಸಬೇಕಾಗುತ್ತದೆ. ಅದಕ್ಕಾಗಿ, ಸೂಕ್ತ ಪರಿಸರವನ್ನು ಕಲ್ಪಿಸಬೇಕಾಗುತ್ತದೆ. ದೇವನಾಗರಿ ಲಿಪಿಯ ಹಿಂದಿಯನ್ನು ಸ್ವತಂತ್ರ ಭಾರತದ ಅಧಿಕೃತ ಭಾಷೆಯೆಂದು ತಾವೇ ತಾವಾಗಿ ಈ ಸಭೆಯ ಎಲ್ಲಾ ಸದಸ್ಯರೂ ಒಪ್ಪಿಕೊಂಡಿರುವುದಕ್ಕೆ, ನಾನೇನಾದರೂ ಹಿಂದಿ ಭಾಷಿಕ ಸಂಸ್ಥಾನದಿಂದ ಬಂದವನಾಗಿದ್ದರೆ ಹೆಮ್ಮೆಪಡುತ್ತಿದ್ದೆ.

ಬೇರೆ ಭಾಷೆಗಳ ಸ್ಥಾನಮಾನದ ಬಗ್ಗೆ ನಾನು ಮಾತನಾಡುತ್ತಿಲ್ಲ. ನನ್ನ ತೀರ್ಮಾನಕ್ಕೇ ಬಿಟ್ಟಿದ್ದರೆ, ನಾನು ಖಂಡಿತವಾಗಿ ಸಂಸ್ಕೃತಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದೆ. ಈ ದಿನಗಳಲ್ಲಿ ಸಂಸ್ಕೃತವೆಂದರೆ, ಜನರು ನಗುತ್ತಾರೆ. ಏಕೆಂದರೆ, ಒಂದು ಆಧುನಿಕ ರಾಜ್ಯದ ಹಲವಾರು ಉದ್ದೇಶಗಳ ಈಡೇರಿಕೆಗೆ ಸಂಸ್ಕೃತದ ಬಳಕೆ ಅಸಾಧ್ಯವೆಂದು ಭಾವಿಸಿದ್ದಾರೆ. ಸಂಸ್ಕೃತದ ಸ್ಥಾನಮಾನದ ಬಗ್ಗೆ ನಾನು ಹೆಚ್ಚು ಹೇಳಲಾರೆ. ಹೆಚ್ಚು ಹೇಳಲು ನಾನು ಶಕ್ತನಲ್ಲ. ಆದರೆ, ಸಂಸಕೃತವು ಖಂಡಿತರಾಗಿ ಈಗಲೂ ಸಂಪದ್ಭರಿತ ಭಾಷೆ. ಅದೊಂದು ಅಕ್ಷಯ ಪಾತ್ರೆ ಎಂದು ನಾನು ಹೇಳಲೇಬೇಕಾಗಿದೆ. ಅದರಿಂದ ಎಲ್ಲಾ ಜ್ಞಾನ ಬಂದಿದೆ. ಆದರೆ, ಈ ಸಂಗತಿ ಭಾರತದ ಈಗಿನ ಪೀಳಿಗೆಯ ಎಷ್ಟೋ ಜನರಿಗೆ ಗೊತ್ತಿಲ್ಲ. ನಮ್ಮ ಹಿಂದಿನ ಪೀಳಿಗೆಯವರಿಗೆ, ಆ ಭಾಷೆಯ ನಿಜವಾದ ಅಭಿಮಾನಿಗಳಿಗೆ ನಾಗರೀಕ ಪ್ರಪಂಚದ ಎಲ್ಲರಿಗೂ ಸಂಸ್ಕೃತದ ಮಹತ್ವಗೊತ್ತುಂಟು. ಅದೇ ನಮ್ಮ ಭಾಷೆ, ಬಾರತದ ತಾಯ್ನುಡಿ. ನಾವು ಸಂಸ್ಕೃತ ಭಾಷೆಗೆ ಬಾಯಿಮಾತಿನ ಅನುಕಂಪ ತೋರಬೇಕಾಗಿಲ್ಲ. ನಮ್ಮ ರಾಷ್ಟ್ರೀಯ ಹಿತದೃಷ್ಟಿಯಿಂದ ನಾವು ಆತ್ಮಾವಲೋಕನ ಮಾಡಿಕೊಂಡು ಗತಕಾಲದಲ್ಲಿ ಅದರಿಂದ ನಮಗೆ ದೊರೆತ ಜ್ಞಾನ ಸಂಪತ್ತನ್ನು ಅರಿತುಕೊಂಡು ಅದರಿಂದ ನಾವು ಭವಿಷ್ಯದಲ್ಲಿ ಏನೇನು ಪಡೆಯಬೇಕೆಂಬುದನ್ನು ತಿಳಿದುಕೊಂಡು ಅದಕ್ಕೆ ಭಾರತದ ರಾಷ್ಟ್ರೀಯ ಶಿಕ್ಷಣ ಪದ್ಧತಿಯಲ್ಲಿ ಗೌರವಯುತವಾದ ಒಂದು ಸ್ಥಾನವನ್ನು ಕೊಡಬೇಕೆಂದು ನಾವು ಹೇಳೋಣ.

ಹಾಗೆಯೇ ನಾನು ಬೇರೆ ಭಾಷೆಗಳ ಸ್ಥಾನಮಾನಗಳಬಗ್ಗೆ ಹೇಳುತ್ತಿಲ್ಲ. ನನ್ನನ್ನು ನೀವು ಪ್ರಾಂತೀಯವಾದಿಯೆಂದು ಕರೆದರೂ ಪರವಾಗಿಲ್ಲ. ನನ್ನ ಭಾಷೆ ಬಗ್ಗೆ ನನಗೆ ಹೆಮ್ಮೆ ಇದೆ. ಬಂಗಾಳಿ ಭಾಷೆಯು ಬಂಗಾಳದ ಜನರ ಭಾಷೆಯಾಗಷ್ಟೇ ಉಳಿದಿಲ್ಲ. ಕಳೆದ ಕೆಲ ಶತಮಾನಗಳಿಂದಲೂ ಹಲವಾರು ಪ್ರಸಿದ್ಧ ಲೇಖಕರು ಆ ಭಾಷೆಯನ್ನು ಸಂಪದ್ಭರಿತ ಗೊಳಿಸಿದ್ದಾರೆ. ಆದು, "ವಂದೇ ಮಾತರಂ" ಭಾಷೆ. ನಮ್ಮ ರಾಷ್ಟ್ರಕವಿ ರವೀಂದ್ರನಾಥ ಟಾಗೂರರು ತಮ್ಮ ಮಹಾನ್ ಚಿಂತನೆಗಳನ್ನು ಮತ್ತು ಲೇಖನಗಳನ್ನು ಬಂಗಾಳೀ ಭಾಷೆಯಲ್ಲೇ

ವ್ಯಕ್ತಪಡಿಸಿ, ಬರೆದು ಭಾರತದ ಸ್ಥಾನಮಾನವನ್ನು, ಘನತೆ ಗೌರವವನ್ನು ವಿಶ್ವವೇ ಪ್ರಶಂಸಿಸುವಂತೆ ಮಾಡಿದ್ದಾರೆ. ಅದೂ ಕೂಡ ನಿಮ್ಮ ಭಾಷೆ. ಅದು ಭಾರತದ ಭಾಷೆ. ದಕ್ಷಿಣದ ಹಾಗೂ ಪಶ್ಚಿಮದ ನನ್ನ ಸ್ನೇಹಿತರು ತಮ್ಮದೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಅವರವರ ಭಾಷೆಗಳೂ ಕೂಡ ಸಂಪದ್ಭರಿತ ಭಾಷೆಗಳು. ಅವಕ್ಕೂ ಭವ್ಯ ಇತಿಹಾಸವಿದೆ. ಅವುಗಳನ್ನು ನಾವು ಪೋಷಿಸಬೇಕು ಮತ್ತು ಸಂರಕ್ಷಿಸಬೇಕು. ಈ ಎಲ್ಲಾ ಭಾಷೆಗಳಲ್ಲಿನ ಯಾವುದನ್ನಾದರೂ ಹಾಳು ಮಾಡುವಂಥ, ನಿರ್ನಾಮ ಮಾಡುವಂಥ ಅಥವಾ ದುರ್ಬಲಗೊಳಿಸುವಂತಹ ಯಾವುದೂ ರಾಜ್ಯಾಂಗದಲ್ಲಿಲ್ಲ ಎನ್ನುವ ಭಾವನೆ ಎಲ್ಲರಲ್ಲೂ ಬರಬೇಕು.

ನಾವು ಹಿಂದಿಯನ್ನೇ ಏಕೆ ಒಪ್ಪಿಕೊಳ್ಳಬೇಕು ? ಅದು ಭಾರತೀಯ ಭಾಷೆಗಳಲ್ಲೇ ಉತ್ತಮವಾದುದು ಅಂತ ಅಲ್ಲ. ಈಗ ಅದು ಈ ದೇಶದಲ್ಲಿನ ಬಹುಸಂಖ್ಯಾತ ಜನರ ಭಾಷೆಯಾಗಿರುವುದೇ ಮುಖ್ಯ ಕಾರಣ. 32 ಕೋಟಿ ಜನರ ಪೈಕಿ ಅದು 14 ಕೋಟಿ ಜನರ ಭಾಷೆಯಾಗಿರುವಾಗ ಮತ್ತು ಅದು ಇನ್ನು ಮುಂದೆಯೂ ಪ್ರಗತಿಪರ ಬೆಳವಣಿಗೆ ಹೊಂದಲು ಅವಕಾಶಗಳಿರುವಾಗ ಅದನ್ನು ಇಡೀ ಭಾಷೆಯಾಗಿ ಒಪ್ಪಿಕೊಳ್ಳುತ್ತೇವೆಂದು ಹೇಳೋಣ. ಆದರೆ, ಈ ಸ್ಥಿತ್ಯಂತರದ ಕಾಲದಲ್ಲಿ ಅದು ನಮ್ಮ ಅಧಿಕೃತ ಕಾರ್ಯ ಕಲಾಪುಗಳನ್ನು ಅಥವಾ ಆಡಳಿತವನ್ನು ಹದಗೆಡಿಸಬಾರದು ಮತ್ತು ಯಾವ ಕಾಲಕ್ಕೂ ಭಾರತದ ಮುನ್ನಡೆಗೆ ಹಾಗೂ ಇತರ ಭಾರತೀಯ ಶ್ರೀಮಂತ ಭಾಷೆಗಳಿಗೆ ಅಡ್ಡಗಾಲು ಹಾಕಬಾರದು. ಈ ನಿಲುವನ್ನು ಸಮರ್ಥಿಸುವ, ದಕ್ಷಿಣ ಭಾರತದ ಜನರ ಹಿತದೃಷ್ಟಿಗನುಗುಣವಾಗಿರದೇ ಇರಬಹುದಾದ, ಆದರೆ, ಇಡಿ ಭಾರತದ ಜನರ ಹಿತದೃಷ್ಟಿಗನುಗುಣವಾಗಿರುವಂಥ ಕೆಲವೊಂದು ತತ್ತ್ವಗಳನ್ನೊಳಗೊಂಡಿರುವ, ಶ್ರೀ ಗೋಪಾಲ ಅಯ್ಯಂಗಾರರು ಮಂಡಿಸಿರುವ ಸೂತ್ರವನ್ನು ನಾವು ಒಪ್ಪಿಕೊಳ್ಳೋಣ.

ನಿಮಗೆ ಇನ್ನು ಹದಿನೈದು ವರ್ಷಗಳ ಸಮಯ ಇದೆ. ಅಷ್ಟರೊಳಗೆ ಇಂಗ್ಲೀಷನ್ನು ತೆಗೆದುಹಾಕಬೇಕಾಗಿದೆ. ಹೇಗೆ ತೆಗೆಯಬೇಕು ? ಹಂತಹಂತವಾಗಿ ತೆಗೆಯಬೇಕಾಗಿದೆ. ಬಾರತದಲ್ಲಿ ಕೆಲವೊಂದು ವಿಶೇಷ ಉದ್ದೇಶಗಳಿಗಾಗಿ ಇಂಗ್ಲೀಷ್ ಬಳಸುವುದನ್ನು ಇನ್ನು ಮುಂದುವರೆಸಬೇಕು ಎಂದು ಬಗ್ಗೆ ನಾವು ವಾಸ್ತವಿಕ ನಿರ್ಧಾರ ತೆಗೆದುಕೊಳ್ಳಬೇಕಾಗಿದೆ. ಬ್ರಿಟಿಷ್ ಆಳ್ವಿಕೆಯ ಇಂಡಿಯಾ ಎನ್ನುವ ದಾಸ್ಯ ಸಂಕೇತವನ್ನು ತೊಡೆದು ಹಾಕಲಿದ್ದೀರಿ - ಹಾಗೆ ಮಾಡಲು ನಮಗೆ ಆಧಾರಗಳೂ ಇವೆ - ಆದರೆ, ಇಂಗ್ಲೀಷನ್ನು ತೊಡೆದುಹಾಕಲು ಅದೊಂದೇ ನಮಗೆ ಆಧಾರವಾಗಕೂಡದು ಇಂಗ್ಲೀಷ್ ಶಿಕ್ಷಣ ನಮಗೆ ಏನೇನು ಒಳ್ಳೆಯದನ್ನು ಮಾಡಿದೆ, ಏನೇನು ಕೆಟ್ಟದ್ದನ್ನು ಮಾಡಿದೆ ಎನ್ನುವುದು ನಮಗೆಲ್ಲಾ ಚೆನ್ನಾಗಿಯೇ ಗೊತ್ತಿದೆ. ಆದರೂ, ಪೂರ್ವಗ್ರಹ ಪೀಡಿತರಾಗದೆ ನಮ್ಮ ರಾಷ್ಟ್ರದ ಅಗತ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇನ್ನು ಮುಂದೆಯೂ ಇಂಗ್ಲೀಷ್ ಬಳಕೆ ಬಗ್ಗೆ ನಾವು ನಿರ್ಧಾರ ತೆಗೆದುಕೊಳ್ಳೋಣ. ಆ

ಭಾಷೆಯಿಂದಾಗಿಯೇ ನಾವು ಹಲವಾರು ಸಾಧನೆ ಮಾಡಲು ಶಕ್ತರಾಗಿದ್ದೇವೆ. ಭಾರತವನ್ನು ರಾಜಕೀಯವಾಗಿ ಒಂದುಗೂಡಿಸುವಲ್ಲಿ ಇಂಗ್ಲೀಷ್ ತನ್ನದೇ ಆದ ಪಾತ್ರವಹಿಸಿದೆ. ರಾಜಕೀಯ ಸ್ವಾತಂತ್ರ್ಯವನ್ನು ತಂದುಕೊಡುವಲ್ಲಿ ನಮ್ಮ ನೆರವಿಗೆ ಬಂದಿದೆ. ಪ್ರಪಂಚದ ದೊಡ್ಡ ಭಾಗಗಳ ನಾಗರೀಕತೆಯನ್ನು ನಮಗೆ ಪರಿಚಯಿಸಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ನಮಗೆ ಅಪಾರ ಜ್ಞಾನವನ್ನು ತೆರೆದಿಟ್ಟಿದೆ. ಇಂಗ್ಲೀಷ್ ಇಲ್ಲದಿದ್ದರೆ ಇದೆಲ್ಲಾ ಸಾಧ್ಯವಾಗುತ್ತಿರಲಿಲ್ಲ. ನಮ್ಮ ವಿಜ್ಞಾನಿಗಳು ತಾಂತ್ರಿಕ ತಜ್ಞರು ಏನೆಲ್ಲಾ ಸಾದಿಸಿದ್ದಾರೋ ಅದಕ್ಕಾಗಿ ನಾವಿಂದು ಹೆಮ್ಮೆಪಡಬೇಕಾಗಿದೆ.

ಈ ರಾಷ್ಟ್ರದಲ್ಲಿ ಇಂಗ್ಲೀಷ್ ಭಾಷೆಯು ಯಾವ ಪಾತ್ರ ವಹಿಸಬೇಕೆಂಬುದನ್ನು ನಾವು ಯಾವುದೇ ಸಂಕುಚಿತ ಭಾವನೆಯಿಂದ ನೋಡ ಹೊರಟರೆ, ನಾವು ಕೀಳರಿಮೆಗೆ ತುತ್ತಾಗಿದ್ದೇವೇನೋ ಎಂದೆನಿಸುತ್ತದೆ. ರಾಜಕೀಯ ಉದ್ದೇಶಗಳಿಗೆ ಅಥವಾ ರಾಷ್ಟ್ರೀಯ ಶಿಕ್ಷಣದ ಯಾವುದೇ ಪದ್ಧತಿಯಲ್ಲಿ ಈಗ ಇಂಗ್ಲೀಷನ್ನು ಬಳಸಲಾಗುತ್ತಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಸ್ವತಂತ್ರ ಭಾರತದ ಜನರ ಪ್ರತಿನಿಧಿಗಳಾಗಿ ನಾವು ಹಿಂದಿಯನ್ನಾಗಲೀ ಮತ್ತು ಇತರ ಭಾರತೀಯ ಭಾಷೆಗಳನ್ನಾಗಲಿ ಹೇಗೆ ಬಳಸುತ್ತೇವೆಂಬುದನ್ನು ಮತ್ತು ಇಂಗ್ಲೀಷನ್ನು ಹಂತ ಹಂತವಾಗಿ ಹೇಗೆ ತೊಲಗಿಸುತ್ತೇವೆಂಬುದನ್ನು ನಿರ್ಧರಿಸುವದು ನಮಗೇ ಸೇರಿದ್ದು. ಕೆಲವೊಂದು ಉದ್ದೇಶಗಳಿಗೆ ಇಂಗ್ಲೀಷನ್ನು ಬಳಸಲೇಬೇಕಾಗುತ್ತದೆ ಎಂದು ನಮಗನ್ನಿಸಿದರೆ, ಇಂಗ್ಲೀಷನ್ನು ಬಳಸಲು ಮತ್ತು ಬೋಧಿಸಲು ನಾವು ನಾಚಿಕೆಪಡಬೇಕಾಗೇನಿಲ್ಲ. ವೈಯಕ್ತಿಕವಾಗೇ ಆಗಲಿ ಅಥವಾ ವರ್ಗಗಳ ಹಿತದೃಷ್ಟಿಯಿಂದಾಗಲಿ, ನಾವು ಧೈರ್ಯದಿಂದ ಧ್ವನಿ ಎತ್ತಬೇಕಾದ ಕೆಲವು ವಿಷಯಗಳು ಇದ್ದೇ ಇರುತ್ತವೆ. ಆದರೆ, ಅಂಥದೊಂದು ದಿಟ್ಟ ಹೆಜ್ಜೆ ಇಡುವಾಗ ಇಡೀ ರಾಷ್ಟ್ರದ ಹಿತದೃಷ್ಟಿಯನ್ನು ನಾವು ಗಮನಿಸಬೇಕಲ್ಲವೆ.

ಸನ್ಮಾನ್ಯರೇ, ಇನ್ನು ಪ್ರಾಂತೀಯ ಭಾಷೆಗಳು, ತರಬೇಕೆಂದಿರುವ ತಿದ್ದುಪಡಿಯಲ್ಲಿ ಭಾರತದ ಪ್ರಮುಖ ಪ್ರಾಂತೀಯ ಭಾಷೆಗಳ ಒಂದು ಪಟ್ಟಿಯನ್ನು ರಾಜ್ಯಾಂಗದಲ್ಲಿ ಸೇರಿಸಲು ಪ್ರಸ್ತಾಪಿಸಿರುವುದು ನನಗೆ ಸಂತೋಷ ತಂದಿದೆ. ನಾವು ಸಂಸ್ಕೃತವನ್ನು ಸಹ ಸೇರಿಸೋಣ. ಈ ವಿಷಯದಲ್ಲಿ ನಾನು ಮನನಿಚ್ಚಿ ಮಾತನಾಡುತ್ತೇನೆ. ಹಿಂದಿ ಮಾತನಾಡುವ ಸಂಸ್ಥಾನಗಳ ಬಹುತೇಕ ಜನರು ಹಿಂದಿ ಬಗ್ಗೆ ಏಕೆ ಕೆರಳುತ್ತಾರೋ ? ಹಿಂದಿ ಬಗ್ಗೆ ತಮ್ಮ ಬೇಡಿಕೆಯನ್ನು ಅಷ್ಟೊಂದು ಆಗ್ರಹ ಪೂರ್ವಕವಾಗಿ ಒತ್ತಾಯಿಸಿದೇ ಇದ್ದಿದ್ದರೆ, ಆ ಜನರು ಏನೆಲ್ಲ ಬಯಸಿದ್ದರೋ ಅದೆಲ್ಲವೂ ಭಾರತೀಯ ಜನರ ಅಪೂರ್ವ ಸಹಕಾರದಿಂದ ನಿರೀಕ್ಷೆಗೂ ಮೀರಿಸಿಗುತ್ತಿತ್ತು ಎಂದು ಹೇಳಿದರೆ ಹಿಂದಿ ಅಭಿಮಾನಿಗಳು ಸಿಟ್ಟಾಗಬಾರದೆಂದು ಕೇಳಿಕೊಳ್ಳುತ್ತೇನೆ. ಆದರೆ, ದುರದೃಷ್ಟವಶಾತ್ ಕೆಲವೊಂದು ಪ್ರದೇಶಗಳಲ್ಲಿ ಯಾವುದೇ ರೀತಿಯಲ್ಲೂ ಹಿಂದಿಗಿಂತ ಕಡಿಮೆ ಅಲ್ಲದ ಇತರ ಭಾಷೆಗಳನ್ನಾಡುವ ಜನರಿಗೆ ಅದೇ

ಸೌಲಭ್ಯವನ್ನು ಕೊಟ್ಟಿಲ್ಲವೆಂಬ ಭಯ ವ್ಯಕ್ತವಾಗಿದೆ. ಕೆಲವು ಕಡೆ ಆ ಭಯ ಬಹಿರಂಗವಾಗಿಯೇ ವ್ಯಕ್ತವಾಯಿತು. ವಿದೇಶಿ ಆಳ್ವಿಕೆ ಸಹ ಅವರನ್ನು ಅದರಿಂದ ವಂಚಿತರನ್ನಾಗಿ ಮಾಡುವ ಎದೆಗಾರಿಕೆ ತೋರಿರಲಿಲ್ಲ.

ನಾವು ಹಿಂದಿಯನ್ನು ಒಪ್ಪಿಕೊಂಡರೆ ಹಿಂದಿ ಮಾತನಾಡುವ ಜನರ ಮೇಲೆ ಅಪಾರ ಹೊಣೆಗಾರಿಕೆ ಇರುತ್ತದೆ ಎಂಬುದನ್ನು ಈ ರಾಜ್ಯಾಂಗ ಸಭೆಯಲ್ಲಿ ಹಿಂದಿ ಭಾಷಿಕ ಸಂಸ್ಥಾನಗಳನ್ನು ಪ್ರತಿನಿಧಿಸುತ್ತಿರುವವರು ತಿಳಿದುಕೊಳ್ಳಬೇಕೆಂದು ನಾನು ಹೇಳುತ್ತೇನೆ. ಈ ಹಿಂದಿ ಭಾಷಿಕ ಸಂಸ್ಥಾನಗಳಲ್ಲಿ ಒಂದು ಅಥವಾ ಹೆಚ್ಚಿನ ಇತರ ಭಾರತೀಯ ಭಾಷೆಗಳನ್ನು ಅಧ್ಯಯನ ಮಾಡುವುದಕ್ಕೆ ಕಡ್ಡಾಯ ವ್ಯವಸ್ಥೆ ಇರುತ್ತದೆಂಬ ಒಂದು ನಿರ್ಣಯವನ್ನು ಕೆಲವು ವಾರಗಳ ಹಿಂದೆ ನಡೆದ ಒಂದು ಹಿಂದಿ ಸಾಹಿತ್ಯ ಸಮ್ಮೇಳನದಲ್ಲಿ ಅಂಗೀಕರಿಸಿರುವ ವಿಷಯ ತಿಳಿದು ನನಗೆ ಸಂತೋಷವಾಯಿತು. ಅದು, ಆದರ್ಶಪ್ರಾಯ ನಿರ್ಣಯವಾಗೇ ಉಳಿಯಬಾರದು ಅದು ಪಂಡಿತ ಗೋವಿಂದ ವಲ್ಲಭ ಪಂಥ್, ಬಾಬು ಪುರುಷೋತ್ತಮದಾಸ್ ತಂಡನ್, ಬಾಬು ಶ್ರೀ ಕೃಷ್ಣ ಸಿನ್ಹ ಹಾಗೂ ಪಂಡಿತ ರವಿಶಂಕರ್ ಶುಕ್ಲಾ ಅವರ ಮೇಲೆ ಅವಲಂಬಿಸಿದೆ. ಈ ಮಹನೀಯರುಗಳು ಮುಂದಿನ ಕೆಲವು ತಿಂಗಳಲ್ಲಿ ಆ ಪ್ರದೇಶಗಳಲ್ಲಿ ಆ ಭಾಷೆಣಗಳನ್ನಾಡುವ ಜನರು ಎಲ್ಲೆಲ್ಲಿ ವಾಸವಾಗಿದ್ದಾರೋ, ಆ ಇತರ ಎಲ್ಲಾ ಪ್ರಮುಖ ಪ್ರಾಂತೀಯ ಭಾಷೆಗಳಿಗೆ ಆ ಪ್ರದೇಶದಲ್ಲಿ ಸೂಕ್ತ ಮನ್ನಣೆ ನೀಡುವಂಥ ಒಂದು ಶಾಸನವನ್ನು ತರಲು ಪ್ರಯತ್ನಪಡಬೇಕು.

ಹಿಂದಿ ಅಂದರೆ ಏನು ಎನ್ನುವ ಬಗ್ಗೆ ತುಂಬಾ ಚರ್ಚೆ ಆಗುತ್ತಿದೆ. ಒಂದು ಭಾಷೆಯನ್ನು ಹೇಗೆ ರೂಪಿಸಬೇಕು ಎಂಬುದನ್ನು ಯಾವುದೇ ರಾಜಕೀಯ ಬಲ ಅಥವಾ ಬಲಗಳನ್ನು ಬಳಸಿ ಶಾಸನದ ಮೂಲಕ ಹೇಳಲಾಗುವುದಿಲ್ಲ. ಒಂದು ಭಾಷೆಯು ಸಹಜ ಸಂದರ್ಭ ಮತ್ತು ಸನ್ನಿವೇಶಗಳಿಗೂ ಅನುಗುಣವಾಗಿ ರೂಪಿತವಾಗುತ್ತದೆ. ಪ್ರಸ್ತುತ ಸಮಸ್ಯೆಗಳು ತತ್ಕಾಲದಲ್ಲಿ ಎಷ್ಟೇ ದೊಡ್ಡದಿರಲಿ ಅಥವಾ ಎಷ್ಟೇ ಸಣ್ಣದಿರಲಿ, ಯಾವುದೇ ಸ್ವರೂಪದ ಭಾಷೆ ಮಾತನಾಡುವವರಿರಲಿ ಭಾಷೆಯಲ್ಲಿ ಬದಲಾವಣೆ ತರುವವರು ಯಾರೆಂದರೆ ಜನಗಳೇ. ಭಾಷೆಗೆ ಹುಟ್ಟುಂಟು, ಸಾವುಂಟು, ರಾಜ್ಯಾಂಗ ಸಭೆಯ ನಿರ್ಣಯವು ಭಾಷೆಯ ಅಧಿಪತ್ಯವನ್ನು ನಿರ್ಧರಿಸುವುದಿಲ್ಲ. ಅಖಿಲ ಭಾರತ ಸ್ಥಾನಮಾನಕ್ಕೆ ಹಿಂದಿ ಭಾಷೆಯ ಏರಬೇಕಾದರೆ ಮತ್ತು ಕೆಲವೊಂದು ಅಧಿಕೃತ ಉದ್ದೇಶಗಳಿಗಾಗಿ ಇಂಗ್ಲೀಷನ್ನು ಬಳಸುವುದು ಬೇಕಿಲ್ಲವಾದರೆ ಹಿಂದೀ ಭಾಷೆಯು ಆ ಮಟ್ಟಕ್ಕೆ ಬರುವಂತೆ ನಾವು ಮಾಡಬೇಕಾಗುತ್ತದೆ. ಅಷ್ಟೇ ಅಲ್ಲ ಸಂಸ್ಕೃತ ಭಾಷೆಯಿಂದ ಮತ್ತು ಭಾರತದ ಇತರ ಭಾಷೆಗಳಿಂದ ಪದಗಳನ್ನು ಮತ್ತು ನುಡಿಗಟ್ಟುಗಳನ್ನು ಸಹಜ ಪ್ರಕ್ರಿಯೆಯಲ್ಲಿ ಸ್ವೀಕರಿಸುವುದಕ್ಕೆ ಹಿಂದಿಗೆ ಅವಕಾಶ ಕೊಡಬೇಕಾಗುತ್ತದೆ. ಹಿಂದಿಯ ಬೆಳವಣಿಗೆಗೆ ಅಡ್ಡಿ ಮಾಡಬೇಡಿ. ನಾನು ನನ್ನದೇ ಆದ ಬಂಗಾಳಿ ಶೈಲಿಯಲ್ಲಿ ಹಿಂದಿ

ಮಾತನಾಡಬಲ್ಲೆ. ಮಹಾತ್ಮಾ ಗಾಂಧಿಯವರು ಅವರದೇ ಆದ ಶೈಲಿಯಲ್ಲಿ ಹಿಂದಿ ಮಾತನಾಡುತ್ತಾರೆ. ಸರ್ದಾರ್ ಪಟೇಲರು ಅವರದೇ ಆದ ಗುಜರಾತಿ ಶೈಲಿಯಲ್ಲಿ ಹಿಂದಿ ಮಾತನಾಡುತ್ತಾರೆ. ಉತ್ತರ ಪ್ರದೇಶ ಅಥವಾ ಬಿಹಾರದ ನಮ್ಮ ಸ್ನೇಹಿತರು, ಅತ್ಯುತ್ತಮ ಗುಣಮಟ್ಟದ ಹಿಂದಿಯನ್ನು ನಾವು ರೂಪಿಸಿದ್ದೇವೆ, ಅದನ್ನು ಮಾತನಾಡಲು ಬರದವರು ಅರ್ಧಂಬರ್ಧ ಜ್ಞಾನದವರು ಎಂದು ಹೇಳಿಬಿಟ್ಟರೆ ಅದು ಹಿಂದಿಗೆ ಮಾರಕವಷ್ಟೇ ಅಲ್ಲ ರಾಷ್ಟ್ರದ ಹಿತಕ್ಕೂ ಧಕ್ಕೆ ತರುವಂತಹದ್ದಾಗುತ್ತದೆ. ಆದ್ದರಿಂದ, ಈ ರಾಷ್ಟ್ರದಲ್ಲಿ ಈ ಭಾಷೆಯನ್ನು ಹೇಗೆ ಬೆಳೆಸಬೇಕೆಂಬ ಬಗ್ಗೆ ಕರಡು ವಿಧಿಯನ್ನು ಸೇರಿಸಿರುವುದಕ್ಕೆ ನನಗೆ ತುಂಬಾ ಸಂತೋಷವಾಗುತ್ತಿದೆ.

ಭಾರತ ಸರ್ಕಾರವು ಭಾಷೆಗಳ ಅಕಾಡೆಮಿಯನ್ನು ಸ್ಥಾಪಿಸುತ್ತದೆಂಬ ನಂಬಿಕೆ ನನಗಿದೆ. ಹಾಗೆಯೇ ಭಾರತದ ಇತರ ಪ್ರಾದೇಶಿಕ ಪ್ರದೇಶಗಳಲ್ಲೂ ಅಂಥವೇ ಅಕಾಡೆಮಿಗಳನ್ನು ಸ್ಥಾಪಿಸಲಿದೆ. ಅಂತಹ ಅಕಾಡೆಮಿಗಳಲ್ಲಿ ಹಿಂದಿ ಮತ್ತು ಇತರ ಭಾರತೀಯ ಭಾಷೆಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಲಾಗುತ್ತದೆ. ಅಲ್ಲದೆ, ತೌಲನಿಕ ಸಾಹಿತ್ಯಗಳನ್ನು ಅಧ್ಯಯನ ಮಾಡಲಾಗುತ್ತದೆ ಹಾಗೂ ಎಲ್ಲ ಭಾರತೀಯ ಭಾಷೆಗಳ ಆಯ್ದ ಪುಸ್ತಕಗಳನ್ನು ದೇವನಾಗರಿ ಲಿಪಿಯಲ್ಲಿ ಪ್ರಕಟಿಸುವ ಕಾರ್ಯವನ್ನು ಕೈಕೊಳ್ಳಲಾಗುತ್ತದೆ. ಮುಖ್ಯವಾಗಿ ವಾಣಿಜ್ಯ, ಕೈಗಾರಿಕೆ, ವಿಜ್ಞಾನ ಮತ್ತು ತಂತ್ರಜ್ಞಾನದ ಉದ್ದೇಶಕ್ಕಾಗಿ ಸೂಕ್ತ ಪದಗಳನ್ನು ಮತ್ತು ಪದಾವಳಿಗಳನ್ನು ಗುರುತಿಸುವ ಬಹುಮುಖ್ಯ ಕೆಲಸವನ್ನು ಯಾವುದೇ ಭೇಧಭಾವಕ್ಕೆ ಎಡೆಗೊಡದೆ ಕೈಗೊಳ್ಳಲಾಗುತ್ತದೆ. ಈ ವಿಷಯದಲ್ಲಿ ಸಂಕುಚಿತ ಮನೋಭಾವನೆ ಬೇಕಾಗಿಲ್ಲ. ನನ್ನ ವಿಶ್ವವಿದ್ಯಾನಿಲಯದಲ್ಲಿ ನನ್ನ ಮಾತೃಭಾಷೆಗೆ ಸೂಕ್ತ ಸ್ಥಾನ ಸಿಗಲು ನಾನು ಪ್ರಯತ್ನಪಟ್ಟಿದ್ದೇನೆ. ನನ್ನ ಪೂಜ್ಯ ತಂದೆಯವರು 60 ವರ್ಷಗಳ ಹಿಂದೆ ಈ ಕಾರ್ಯ ಪ್ರಾರಂಭಿಸಿದ್ದರು. ಅದರ ಹೊಣೆ ಹದಿನೈದು ವರ್ಷಗಳ ಹಿಂದೆ ನನ್ನ ಹೆಗಲಿಗೆ ಬಿತ್ತು. ಕಲ್ಕತ್ತಾನಗರ ಭಾರತದ ಎಲ್ಲ ಭಾಷೆಗಳಿಗೂ ಮನ್ನಣೆ ಇತ್ತಿದೆ. ಮುಂದಿನ ಬೆಳವಣಿಗೆಯನ್ನು ದೃಷ್ಟಿಟಿಯಲ್ಲಿಟ್ಟುಕೊಂಡು ನಾವು ನಮ್ಮದೇ ಆದ ಬಂಗಾಳಿ ಭಾಷೆಯ ಪದಗಳನ್ನು ಮತ್ತು ನುಡಿಗಟ್ಟುಗಳನ್ನು ರೂಪಿಸಿ ಕೊಂಡಿದ್ದೇವೆ. ಯಾವುದೇ ಸಂಕುಚಿತ ದೃಷ್ಟಿ ನಮ್ಮಲ್ಲಿರಲಿಲ್ಲ. ಎಲ್ಲ ತಾಂತ್ರಿಕ ಪದಗಳನ್ನು ಮತ್ತು ಪದಾವಳಿಗಳನ್ನು ಹಿಂದಿಯಲ್ಲೇ ಬಳಸಬೇಕೆಂದು ನೀವು ಹೇಳುತ್ತೀರಿ. ಹಿಂದಿ ಮಾತನಾಡುವ ಜನರ ಸಂಸ್ಥಾನಗಳಲ್ಲಿ ನಾವು ಹಾಗೆ ಮಾಡುವುದೇನೋ ಸರಿ. ಆದರೆ, ಬಂಗಾಳ, ಗುಜರಾತ್, ಮಹಾರಾಷ್ಟ್ರ ಮತ್ತು ಮದ್ರಾಸ್ ಜನರ ಪಾಡೇನು ? ಅವರುಗಳು ಅವರ ರಾಜ್ಯಭಾಷೆಗಳಲ್ಲಿ ಅವರದೇ ಪದಗಳನ್ನು ಮತ್ತು ಪದಾವಳಿಗಳನ್ನು ಬಳಸಲಿಕ್ಕೆ ಆಗುತ್ತದೆಯೇ ? ಹಿಂದಿಯನ್ನೇ ಬಳಸಬೇಕೆಂದು ಒತ್ತಾಯಿಸಿದರೆ ಅಭಿಪ್ರಾಯ ವಿನಿಮಯ ಮತ್ತು ಒಂದು ರಾಜ್ಯದಿಂದ ಇನ್ನೊಂದು ರಾಜ್ಯದ ನಡುವೆ ಆಗಬೇಕಾದ ಶೈಕ್ಷಣಿಕ ಸೌಲಭ್ಯಗಳ ವಿನಿಮಯಕ್ಕೆ ಏನು ಗತಿ ಬರುತ್ತದೆ ಎಂಬುದು ನಿಮಗೆ ಗೊತ್ತಿದೆಯೇ ? ಉನ್ನತ ಶಿಕ್ಷಣಕ್ಕಾಗಿ

ಪರರಾಷ್ಟ್ರಗಳಿಗೆ ಹೋಗಬೇಕಾದ ವಿದ್ಯಾರ್ಥಿಗಳ ಪಾಡೇನು ? ನನ್ನ ಈ ಎಲ್ಲ ಪ್ರಶ್ನೆಗಳಿಗೆ ನಿಮ್ಮಲ್ಲಿ ಉತ್ತರ ಇದೆಯೇ ? ಆದ್ದರಿಂದ ನಾವು ಭಾವಾವೇಶಗಳಿಗೆ ಒಳಗಾಗಕೂಡದು. ನನ್ನಲ್ಲೂ ಕೆಲವೊಂದು ಭಾವನೆಗಳಿವೆ. ಭಾರತದ ಎಲ್ಲ ಜನರೂ ಮಾತನಾಡುವಂಥ ಮತ್ತು ಭಾರತ ಸರ್ಕಾರದ ಎಲ್ಲ ಅಧಿಕೃತ ಕಾರ್ಯ ಕಲಾಪಗಳಲ್ಲಿ ಬಳಕೆಯಾಗುವಂಥ ಒಂದೇ ಭಾಷೆಯನ್ನು ನಾವು ಕ್ರಮೇಣವಾಗಿ ಬೆಳಸಬೇಕೆನ್ನುವ ಅಭಿಲಾಷೆ ನನಗಿದೆ. ಅದು ಹಿಂದಿ ಆಗಿರಬೇಕೆಂದು ನಾವು ಒಪ್ಪಿಕೊಂಡಿದ್ದೇವೆ. ಆದರೆ ನಮ್ಮ ರಾಷ್ಟ್ರೀಯ ಹಿತದೃಷ್ಟಿಗೆ ಧಕ್ಕೆಯಾಗದ ಹಾಗೆ ಹಾಗೂ ರಾಜ್ಯಭಾಷೆಗಳು ಕುಂಠಿತವಾಗದ ಹಾಗೆ ಹಿಂದಿಯು ಪ್ರತಿಯೊಂದು ಹಂತದಲ್ಲೂ ಹೊಂದಾಣಿಕೆ ಮತ್ತು ಮರು ಹೊಂದಾಣಿಕೆ ಪ್ರಕ್ರಿಯೆಗೆ ಒಳಪಡಬೇಕು. ನಾವು ಆ ದೃಷ್ಟಿಯಿಂದ ಮುಂದು ವರೆದದ್ದಾದರೆ ನಾವು ಹದಿನೈದು ವರ್ಷಗಳ ಕಾಲ ಕಾಯಬೇಕಾಗಿಲ್ಲವೆಂಬುದರಲ್ಲಿ ನನಗೆ ಎಳ್ಳಷ್ಟು ಅನುಮಾನವಿಲ್ಲ. ಹಾಗಾದರೆ, ಎಲ್ಲ ಸಂಸ್ಥಾನಗಳ ಜನರೂ ಶೀಘ್ರವಾಗಿ ಒಪ್ಪಿಕೊಳ್ಳಲು ಸಾಧ್ಯವಾಗುತ್ತದೆ, ನಮಗೂ ನಮ್ಮ ತೀರ್ಮಾನವನ್ನು ಕಾರ್ಯಗತ ಗೊಳಿಸುವುದಕ್ಕೂ ಸಾಧ್ಯವಾಗುತ್ತದೆ.

ಕೊನೆಯದಾಗಿ ನಾನು ಅಂಕಿಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಅಂಕಿಗಳ ಬಗ್ಗೆ ಬಹಳಷ್ಟು ಚರ್ಚೆಯಾಗಿದೆ. ಆದರೆ ದಕ್ಷಿಣ ಭಾರತದ ಜನರ ಸಂಕುಚಿತ ಪ್ರಾದೇಶಿಕ ಹಿತದೃಷ್ಟಿಯಿಂದ ಈ ಸಲಹೆ ಮಾಡಿಲ್ಲ. ಈ ಅಂಶವನ್ನು ಈ ಸಭೆಯ ಎಲ್ಲರೂ ಅರ್ಥ ಮಾಡಿಕೊಳ್ಳಬೇಕು. ಅನ್ಯಥಾ ತೀರ್ಮಾನ ಆಗುವ ತನಕ ಅಂತರ ರಾಷ್ಟ್ರೀಯ ಅಂಕಿಗಳನ್ನು ನಾವು ಬಳಸುವುದನ್ನು ಮುಂದುವರಿಸಬೇಕು. ಅವು ನಮ್ಮಲ್ಲಿಗೆ ಮೊದಲಿನಿದಲೂ ಬಂದಿವೆ. ನಮ್ಮ ಉದ್ದೇಶ, ನಮ್ಮ ಹಿತಾಸಕ್ತಿ ಎಲ್ಲವನ್ನೂ ಕಾಪಾಡಿದೆ. ಕೊನೇ ಪಕ್ಷ, ಇನ್ನೂ ಹಲವಾರು ವರ್ಷಗಳ ಕಾಲ ನಾವು ಅವುಗಳನ್ನು ಕೈಬಿಡುವಂತಿಲ್ಲ. ಬದಲಾವಣೆ ತರಬೇಕೆಂದು ಅಧ್ಯಕ್ಷರಿಗೆ ಅನ್ನಿಸಿದರೆ, ಬದಲಾವಣೆ ತರಬಹುದು. ನಿಮ್ಮಲ್ಲಿ ಅಂಕಿಅಂಶಗಳಿವೆ. ನೀವು ಕೈಗೊಳ್ಳಬೇಕಾದ ವೈಜ್ಞಾನಿಕ ಕೆಲಸ ಕಾರ್ಯಗಳು ತುಂಬಾ ಇವೆ. ವಾಣಿಜ್ಯ ಸಂಸ್ಥೆಗಳಿವೆ. ಬ್ಯಾಂಕುಗಳಿವೆ. ಲೆಕ್ಕಪತ್ರಗಳ ನಿರ್ವಹಣೆ, ಲೆಕ್ಕ ಪರಿಶೋಧನಾ ಕಾರ್ಯಗಳಿವೆ. ಅಂತರ ರಾಷ್ಟ್ರೀಯ ಅಂಕಿಗಳನ್ನು ಬಳಸಲೇ ಬೇಕಾದ ಹಲವಾರು ವಿಷಯಗಳು ನಿಮ್ಮಲ್ಲಿವೆ.

ಹಿಂದಿ ಭಾಷೆಯಲ್ಲಿ ಕೆಲವೊಂದು ಅಂಕಿಗಳು ಹೆಚ್ಚು ಕಮ್ಮಿ ಅದೇ ರೀತಿ ಇರುವಾಗ ಇನ್ನು ಕೆಲವನ್ನು ಒಪ್ಪಿಕೊಳ್ಳಬಾರದೇಕೆ ಎಂದು ಕೆಲವರು ನನ್ನನ್ನು ಕೇಳಿದ್ದಾರೆ. ಹಿಂದಿ ಅಂಕಿಗಳು ಪ್ರತಿಯೊಬ್ಬರಿಗೂ ಗೊತ್ತಿದೆ ಎನ್ನುವುದನ್ನು ನಾನು ನಂಬುತ್ತೇನೆ. ಈಗಿನಿಂದ ಅವುಗಳನ್ನು ಬಳಸಲೂಬಹುದು. ಎಲ್ಲರೂ ಹಿಂದಿ ಅಂಕಿಗಳ ಬಳಕೆಯುನ್ನು ಕಲಿಯಲೂಬಹುದು. ಆದರೆ, ಅವುಗಳನ್ನು ಯಾವ ಉದ್ದೇಶಗಳಿಗೆ ಬಳಸಬೇಕೆಂದು ನೀವು

ಭಾವಿಸಿದ್ದೀರೋ ಆ ಉದ್ದೇಶಗಳಿಗೆ ಅವುಗಳನ್ನು ಬಳಸಲು ಸಾಧ್ಯವೇ ಎಂಬುದೇ ಈಗಿನ ಪ್ರಶ್ನೆ.

ಅಂತರ ರಾಷ್ಟ್ರೀಯ ಅಂಕಿಗಳನ್ನೇ ಬಳಸಬೇಕೆಂದು ನಮಗೆ ಏಕೆ ಒತ್ತಾಯ ಮಾಡುತ್ತೀರಿ ? ಎಂದು ಹಿಂದಿ ಮಾತನಾಡುವ ಕೆಲ ಸ್ನೇಹಿತರು ಕೇಳಿದ್ದಾರೆ. ಹಿಂದಿಯು ರಾಜ್ಯಭಾಷೆಯಾಗಿರುವ ಬಿಹಾರದಲ್ಲಿ, ಕೇಂದ್ರೀಯ ಸಂಸ್ಥಾನಗಳಲ್ಲಿ ಅಥವಾ ಉತ್ತರ ಪ್ರದೇಶದಲ್ಲಿ ಹಿಂದಿ ಅಂಕಿಗಳ ಬಳಕೆಯನ್ನು ನಾವು ನಿಷೇಧಿಸಿಲ್ಲ. ಹಿಂದಿ ಅಂಕಿಗಳ ಪಾತ್ರ ತುಂಬಾ ಇರುವುದೇನೋ ನಿಜ. ಆದರೆ, ಅಂತರ ರಾಷ್ಟ್ರೀಯ ಅಂಕಿಗಳನ್ನು ನಾವು ಕಲಿತರೆ ಮತ್ತು ಅವುಗಳನ್ನು ಅಖಿಲ ಭಾರತ ಅಧಿಕೃತ ಉದ್ದೇಶಗಳಿಗೆ ಬಳಸಿದರೆ ನಿಮಗೇನು ತೊಂದರೆಯಾಗುತ್ತದೆ ? ಒಂದು ರೀತಿಯಲ್ಲಿ ಅವುಗಳನ್ನು ಬಳಸಿದರೆ ನಿಮಗೆ ಒಳ್ಳೆಯದೇ ಆಗುತ್ತದೆ. ಅದರಲ್ಲೂ ಉನ್ನತ ಶಿಕ್ಷಣದ ಪಠ್ಯಕ್ರಮದಲ್ಲಿ ಅವುಗಳ ಬಳಕೆ ಅತ್ಯಂತ ಅವಶ್ಯಕ. ಇದು ಬಹುಮತದ ಮೂಲಕ ತೀರ್ಮಾನ ಕೈಗೊಳ್ಳಬೇಕಾದ ವಿಷಯವೇನಲ್ಲ. ಒಂದು ವೇಳೆ ಯಾರಾದರೂ ಅದರ ಅಖಿಲ ಭಾರತ ಬಳಕೆಯನ್ನು ಮತ್ತು ಹಿಂದಿ ಅಂಕಿಗಳ ಜೊತೆಯಲ್ಲಿ ಅಂತರ ರಾಷ್ಟ್ರೀಯ ಅಂಕಿಗಳಿಗೆ ಮನ್ನಣೆ ನೀಡುವುದಕ್ಕೆ ವಿರೋಧ ಭಾವನೆ ತಳೆದರೂ, ಹಾಗಾಗುವುದು ಸರ್ವ ಸಮ್ಮತವಲ್ಲ ಅಥವಾ ಹಾಗಾಗುವುದು ತನಗಿಷ್ಟವಿಲ್ಲ ಎಂದು ಭಾವಿಸಿದರೂ, ಆ ಸಂಸ್ಥಾನದ ಭಾಷೆಯಾದ ಹಿಂದಿಯನ್ನು ಭಾರತದ ಎಲ್ಲ ಜನರೂ ಒಪ್ಪಿಕೊಳ್ಳುತ್ತಿದ್ದಾರೆಂಬ ಸಂಗತಿಯನ್ನು ಮನನ ಮಾಡಿಕೊಂಡು ತನ್ನ ವೈಯಕ್ತಿಕ ಭಾವನೆಗಳೇನೇ ಇರಲಿ, ನಾನು ಹೊಂದಾಣಿಕೆ ಮಾಡಿಕೊಳ್ಳಲು ಸಿದ್ಧನಿದ್ದೇನೆ ಹಾಗೂ ಈ ನಿರ್ಣಯವನ್ನು ಅನುಮೋದಿಸುತ್ತೇನೆಂದು ಎದ್ದು ನಿಂತು ಹೇಳುವ ಹೃದಯ ವೈಶಾಲ್ಯತೆಯನ್ನು ತೋರಬೇಕು.

ಕಳೆದ ಕೆಲವು ವರ್ಷಗಳಲ್ಲಿ ಈ ಸಭೆಯಲ್ಲಿ ನಾವು ಹಲವಾರು ಪ್ರಮುಖ ನಿರ್ಣಯಗಳನ್ನು ಅಂಗೀಕರಿಸಿದ್ದೇನೆ. ಜೊತೆ ಜೊತೆಯಲ್ಲೇ ಹಲವಾರು ಬಿಕ್ಕಟ್ಟುಗಳನ್ನು ನಾವು ಎದುರಿಸಿದ್ದೇವೆ. ಅಂಕಿಗಳಿಗೆ ಸಂಬಂಧಿಸಿದ ಈ ವಿಷಯದಲ್ಲಿ ಸ್ವತಂತ್ರ ಭಾರತದ ರಾಜ್ಯಾಂಗ ಸಭೆಯು ಒಂದೇ ಒಂದು ರಾಜಕೀಯ ಪಕ್ಷದ ಒತ್ತಡಕ್ಕೆ ಒಳಗಾಗಿ ವಿಮುಖವಾದರೆ ಅದಕ್ಕಿಂತಲೂ ಬಾಲಿಶವಾದುದು ಮತ್ತೊಂದಿಲ್ಲ. ನಾವುಗಳೆಲ್ಲರೂ ಹಾಗೂ ನಮ್ಮ ಇಡೀ ದೇಶ ನಗೆಪಾಟಲಿಗೆ ತುತ್ತಾಗುತ್ತೇವೆ. ಅಷ್ಟೇ ಅಲ್ಲ, ನಮ್ಮ ಶತ್ರುಗಳ ಕೈಗಳನ್ನುನಾವು ಬಲಪಡಿಸಿದಂತಾಗುತ್ತದೆ. ನಾವು ಭಿನ್ನಾಭಿಪ್ರಾಯಗಳಿಗೆ ಮಹತ್ವ ಕೊಡಬಾರದು. ನಾವು ನಮ್ಮ ಏಕೋದ್ದೇಶಕ್ಕೆ ಮಹತ್ವ ಕೊಡಬೇಕು. ಯಾವುದೇ ಭಿನ್ನಮತ ಅಥವಾ ಗೋಜಿಲಿಗೆ ಅವಕಾಶ ಕೊಡದೆ ನಾವು ಈ ನಿರ್ಧಾರ ತೆಗೆದುಕೊಂಡಿದ್ದೇವೆಂದು ಇಡೀ ಪ್ರಪಂಚಕ್ಕೆ ತಿಳಿಸೋಣ. ಈ ವಿಷಯವನ್ನು ರಾಜಕೀಯ ದೃಷ್ಟಿಕೋನದಿಂದ ನೋಡದಿರೋಣ.

ಕೆಲವೊಂದು ಪ್ರದೇಶಗಳಲ್ಲಿ ಅಂತರ ರಾಷ್ಟ್ರೀಯ ಅಂಕಿಗಳ ಅಂಗೀಕಾರದ ವಿಷಯ ಮೊದಲ ಆದ್ಯತೆಯ ರಾಜಕೀಯ ವಿವಾದವಾಗಿರುವುದು ನೋವಿನ ಸಂಗತಿ, ಭಾರತದ ಒಳ್ಳೆಯದಕ್ಕಾಗಿಯೇ ಈ ನಿರ್ಧಾರವನ್ನು ನಾವು ತೆಗೆದುಕೊಂಡಿದ್ದೇವೆ ಹಾಗೂ ಈ ವಿಷಯದಲ್ಲಿ ನಮ್ಮಲ್ಲಿ ಒಗ್ಗಟ್ಟಿದೆ ಎಂದು ಇಲ್ಲಿ ಧೈರ್ಯದಿಂದ ಎದ್ದು ನಿಂತು ಹೇಳುವುದು ಆ ಸಂಸ್ಥಾನಗಳ ನಾಯಕರುಗಳನ್ನು ಅವಲಂಬಿಸಿದೆ. ಆ ನಾಯಕರುಗಳು ಹಾಗೆ ಹೇಳಿದ್ದಾದರೆ, ಜನರು ಅದನ್ನು ಒಪ್ಪಿಕೊಳ್ಳುತ್ತಾರೆಂಬುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಹಿಂದಿ ಅಥವಾ ದೇವನಾಗರಿ ಅಂಕಿಗಳನ್ನು ಬಳಸುವುದಕ್ಕೆ ಯಾವ ಯಾವ ರಾಜ್ಯ ವಿಧಾನ ಮಂಡಲಗಳು ತೀರ್ಮಾನಿಸಿದೆಯೋ ಅಲ್ಲೆಲ್ಲಾ ಅದರ ಬಳಕೆಯನ್ನು ನಾವು ನಿಷೇಧಿಸಿಲ್ಲ. ಎಲ್ಲರಿಗೂ ಸರ್ವ ಸಮ್ಮತವಾದುದೆಂದು ನಾವು ಭಾವಿಸಿರುವ ಸೂತ್ರವನ್ನು ಒಪ್ಪಿಕೊಳ್ಳಬೇಕೆಂದು ನಾವು ಶಿಫಾರಸ್ಸು ಮಾಡಿದ್ದೇವೆ ಅಷ್ಟೇ. ಚರ್ಚೆ ಮುಕ್ತಾಯವಾಗುವುದಕ್ಕೆ ಮುಂಚೆ, ಭಿನ್ನಮತೀಯ ಪ್ರತಿನಿಧಿಗಳು ಒಂದೆಡೆ ಸೇರಿ, ಚರ್ಚೆ ಮಾಡಿ ಶ್ರೀ ಎನ್. ಗೋಪಾಲ ಸ್ವಾಮಿ ಅಯ್ಯಂಗಾರರು ಮಂಡಿಸಿರುವ ಸೂಚನೆಯನ್ನು ಸರ್ವಾನುಮತದಿಂದ ಒಪ್ಪಿಕೊಳ್ಳಲಾಗುತ್ತದೆಂಬ ತೀರ್ಮಾನದೊಂದಿಗೆ ಈ ಸಭೆಗೆ ಬರುತ್ತಾರೆಂಬ ನಂಬಿಕೆ ನನಗಿದೆ.

## ಭಾರತ ಹಾಗೂ ಅಂತರಾಷ್ಟ್ರೀಯ ಪರಿಸ್ಥಿತಿ *

ಭಾರತ ಸರ್ಕಾರದ ವಿದೇಶಿ ನೀತಿಯ ಬಗ್ಗೆ ಮಾತನಾಡುವಾಗ ಇಡೀ ಪ್ರಪಂಚ ಇಂದು ಎದುರಿಸುತ್ತಿರುವ ಬಿಕ್ಕಟ್ಟಿನ ಸಮಸ್ಯೆಗಳ ಬಗ್ಗೆ ಯಾರಿಗಾದರೂ ಆತಂಕ ಉಂಟಾಗುವುದು ಸಹಜ. ವಿಶ್ವದ ಸಮಸ್ಯೆಗಳ ದೃಷ್ಟಿಯಿಂದಷ್ಟೇ ಅಲ್ಲ, ನಮ್ಮ ರಾಷ್ಟ್ರದ ಭದ್ರತೆ ಮತ್ತು ಸುರಕ್ಷತೆ ದೃಷ್ಟಿಯಿಂದಲೂ ನಾನು ಕೆಲವು ಮಾತುಗಳಾಡಬಯಸುತ್ತೇನೆ. ಏಕೆಂದರೆ, ವಿಶ್ವದ ಸಮಸ್ಯೆಗಳಿಗಿಂತಲೂ ನಮ್ಮ ದೇಶದ ಭದ್ರತೆ ಮತ್ತು ಸುರಕ್ಷತೆ ತುಂಬಾ ಮಹತ್ವದ್ದೆಂದು ನಾನು ಭಾವಿಸಿದ್ದೇನೆ.

ಯುದ್ಧ ಆಗದಂತೆ ತಡೆಯುವುದು ಒಳ್ಳೆಯದೆಂದು ಸನ್ಮಾನ್ಯ ಪ್ರಧಾನ ಮಂತ್ರಿಗಳು ಹೇಳಿರುವುದಕ್ಕೆ ಧ್ವನಿ ಕೊಡದಿರುವವರು ಈ ಸಭೆಯಲ್ಲಿ ಅಥವಾ ಈ ದೇಶದಲ್ಲಿ ಯಾರೂ ಇರಲಾರರು. ನಿಜ ಹೇಳಬೇಕೆಂದರೆ, ಆ ಮಾತನ್ನು ಹೇಳದಿರುವ ದೇಶ ಈ ವಿಶ್ವದಲ್ಲಿ ಯಾವುದೂ ಇರಲಾರದು ಅಥವಾ ಯಾವುದೇ ದೇಶದಲ್ಲಿ ವಾಸವಾಗಿರುವ ಜನರಲ್ಲಿ ಹಾಗೆ ಹೇಳದಿರುವವರು ಯಾರೂ ಇರಲಾರರು. ಆದರೂ ನಾವು ಯುದ್ಧದತ್ತವಾಲುತ್ತಿದ್ದೇವೆ. ಇತರ ದೇಶಗಳ ವ್ಯವಹಾರಗಳನ್ನು ಚರ್ಚಿಸುವಾಗ ನಮ್ಮ ಮಾತುಗಳು ತೂಕ ತಪ್ಪದಂತೆ ಮತ್ತು ಪ್ರಸ್ತುತ ಸನ್ನಿವೇಶಗಳು ಉಲ್ಬಣಗೊಳ್ಳುವುದಕ್ಕೆ ಪೂರಕವಾಗದಂತೆ ತುಂಬಾ ಎಚ್ಚರಿಕೆಯಿಂದಿರಬೇಕೆಂದು ಸನ್ಮಾನ್ಯ ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಆದರೆ, ಭಾರತ ಸರ್ಕಾರದ ವಿದೇಶಿ ನೀತಿಯಲ್ಲಿ ಬದಲಾವಣೆಯ ಆಗತ್ಯವಿದೆಯೆಂದು ನಮಗನ್ನಿಸುತ್ತಿರುವ ಕೆಲವು ವಿಷಯಗಳ ಬಗ್ಗೆ ನಾವು ಬಿಚ್ಚು ಮನಸ್ಸಿನಿಂದ ಮಾತನಾಡುವುದು ಆಗತ್ಯವೆಂದು ನಾನು ಭಾವಿಸಿದ್ದೇನೆ.

ನಮಗೆ ಶಾಂತಿ ಬೇಕು. ಯುದ್ಧ ಆಗುವುದನ್ನು ತಪ್ಪಿಸುವುದು ನಮ್ಮ ಬಯಕೆ. ಸಂಧಾನ ನೀತಿಯನ್ನು ಅನುಸರಿಸಲು ನಾವು ಬಯಸಿದ್ದೇವೆ. ನಾವು ತಾಳ್ಮೆಯಿಂದಿರಬಯಸಿದ್ದೇವೆ. ಆದರೆ, ಪ್ರಧಾನ ಮಂತ್ರಿಗಳು ಹೇಳಿರುವಂತೆ ಯಾವಾಗಲೂ ತಾಳ್ಮೆ ಅಲ್ಲ. ಅತ್ತಿತ್ತ ವಾಲುವ ನೀತಿಯನ್ನು ಅನುಸರಿಸುವುದಕ್ಕೆ ಆಸ್ಪದ ಕೊಡದೆ ನಮ್ಮನ್ನು ನಾವು ಸಂರಕ್ಷಿಸಿಕೊಳ್ಳಬೇಕಾಗಿದೆ. ಸರಿಯಾದ ಸಮಯದಲ್ಲಿ ತೀರ್ಮಾನ ತೆಗೆದುಕೊಳ್ಳುವುದಕ್ಕೆ - ಸರಿಯಾದ ತೀರ್ಮಾನ ತೆಗೆದುಕೊಳ್ಳುತ್ತಾರೆಂಬುದು ನಮ್ಮ ನಂಬಿಕೆ - ನಾವು ಸಮರ್ಥರಾಗಿರಬೇಕು. ಪ್ರತಿಯೊಬ್ಬರನ್ನೂ ಸಂತುಷ್ಟಪಡಿಸಲು ಪ್ರಯತ್ನ ಮಾಡುವ ಸಾಧ್ಯತೆಗೆ ಆಸ್ಪದ ಕೊಡದೆ ನಾವು ಎಚ್ಚರಿಕೆ ವಹಿಸಬೇಕು. ಅದೊಂದು ಅಪಾಯಕಾರಿ ಗತಕಾಲ, ಹಿಂದೆ ಒಬ್ಬ ಪ್ರಯಾಣಿಕನಿಗೆ ಒದಗಿದ ದುರ್ಗತಿ ನಮ್ಮ ನೆನಪಿಗೆ ಆಗಾಗ ಬರುತ್ತಿರುತ್ತದೆ.

---

* ಸಂಸದೀಯ ಚರ್ಚೆಗಳು 6ನೇ ಡಿಸೆಂಬರ್ 1950 ಕಾಲಂಗಳು 1279 - 1286

ಆ ಪ್ರಯಾಣಿಕ ನೈತಿಕ ನಿಯಮಗಳನ್ನು ಪಾಲಿಸುತ್ತಿದ್ದವನು. ಅವನು ಒಂದು ದಿನ, ತನ್ನ ಮಗ ಮತ್ತು ಕತ್ತೆ ಜತೆ ಇಕ್ಕಟ್ಟಾದ ಒಂದು ಸೇತುವೆಯನ್ನು ದಾಟಲು ಪ್ರಯತ್ನಿಸುತ್ತಿದ್ದ. ಒಮ್ಮೊಮ್ಮೆ ಕತ್ತೆ ಮೇಲೆ ಕುಳಿತಿರುತ್ತಿದ್ದ, ಒಮ್ಮೊಮ್ಮೆ ತನ್ನ ಮಗನನ್ನು ಕತ್ತೆ ಮೇಲೆ ಕೂರಿಸಲು ಇತರರಿಗೆ ಹೇಳುತ್ತಿದ್ದ. ನಂತರ ಅಪ್ಪ - ಮಗ ಇಬ್ಬರೂ ಕತ್ತೆ ಮೇಲೆ ಕುಳಿತರು ಕೊನೆ ಕೊನೆಯಲ್ಲಿ ಕತ್ತೆಯನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡ. ಈ ಜಂಜಾಟದಲ್ಲಿ ಕತ್ತೆ ಸತ್ತೇ ಹೋಯಿತು. ಈ ದೃಷ್ಟಾಂತದಂತೆ ನೀವೂ ನಡೆದುಕೊಂಡ ಪಕ್ಷದಲ್ಲಿ ನಾವು ಯಾವುದೇ ಕತ್ತೆಯನ್ನು ಕಳೆದುಕೊಳ್ಳಬಹುದು ಅಥವಾ ಕಳೆದುಕೊಳ್ಳದಿರಲೂಬಹುದು. ಆದರೆ, ನಮ್ಮ ದೇಶವನ್ನು ನಾವು ಕಳೆದುಕೊಳ್ಳಬಾರದು. ಏನೇ ಆಗಲಿ ಈ ಬಿಕ್ಕಟ್ಟಿನ ಕಾಲದಲ್ಲಿ, ಅಂತರ ರಾಷ್ಟ್ರೀಯ ವಿಷಯಗಳಲ್ಲಿ, ನಮ್ಮ ದೃಷ್ಟಿಕೋನ ಹಾಗೂ ನಮ್ಮ ನೀತಿ ಯಾವುದಿರಬೇಕೆಂಬ ಬಗ್ಗೆ ದೃಢ ನಿರ್ಧಾರ ತೆಗೆದುಕೊಳ್ಳಲು ನಾವು ಸಮರ್ಥರಿರಬೇಕು.

ನಾನು ಕೊರಿಯಾ ಬಗ್ಗೆ ಹೆಚ್ಚು ಹೇಳಹೋಗುವುದಿಲ್ಲ, ಕೊರಿಯಾ ಬಿಕ್ಕಟ್ಟಿನ ಬಗ್ಗೆ ನಮಗಿರುವ ಧೋರಣೆಯಲ್ಲಿ ಕೆಲವೊಂದು ಅಸಂಗತತೆಗಳಿರುವುದು ನಮಗೆ ಕಂಡುಬಂದಿದೆಯೆಂಬುದನ್ನು ನಾನು ಹೇಳಲೇಬೇಕಾಗಿದೆ. ಅದನ್ನು ವಿವರಿಸುವುದು ತುಂಬಾ ಕಷ್ಟ, ಚೀನಾವನ್ನು ಕಡೆಗಣಿಸಿ ಕೊರಿಯಾ ಬಗ್ಗೆ ಯಾವುದೇ ಇತ್ಯರ್ಥ ಸಾಧ್ಯವಾಗದೆಂದು ಈ ದಿನ ಪ್ರಧಾನ ಮಂತ್ರಿಗಳು ಒತ್ತಿ ಹೇಳಿದ್ದಾರೆ. ಅವರ ಹೇಳಿಕೆ ಖಂಡಿತವಾಗಿಯೂ ಗಂಭೀರ ಪರಿಗಣನೆಗೆ ಅರ್ಹವಾದುದು. ಉತ್ತರ ಕೊರಿಯಾ ದೇಶವೇ ದಾಳಿಕೋರ ದೇವವೆಂದು ಘೋಷಿಸುವ, ಭದ್ರತಾ ಸಮಿತಿಯ ಮುಂದಿರುವ ನಿರ್ಣಯವನ್ನು ಬೆಂಬಲಿಸಲು ಭಾರತವು ತೀರ್ಮಾನ ತೆಗೆದುಕೊಂಡಾಗ, ಉತ್ತರ ಕೊರಿಯಾದ ಹಿಂದೆ ಯಾರಿದ್ದಾರೆನ್ನುವುದು ಆಗ ಸ್ಪಷ್ಟವಾಗಿ ಗೊತ್ತಿತ್ತು. ಉತ್ತರ ಕೊರಿಯಾಕ್ಕೆ ತನ್ನದೇ ಆದ ಸ್ವತಂತ್ರ ಸ್ಥಾನಮಾನ ಇರಲಿಲ್ಲ. ಚೀನಾ, ಉತ್ತರ ಕೊರಿಯಾಕ್ಕೆ ಬೆಂಬಲ ನೀಡಿತ್ತು. ಬಹುಶಃ ಕೊನೆಯಲ್ಲಿ, ಸೋವಿಯತ್ ರಷ್ಯಾ ಬೆಂಬಲಿಸಿತ್ತೇನೋ. ಆದರೆ, ನಾವು ಉತ್ತರ ಕೊರಿಯಾ ಧಾಳಿಕೋರ ದೇಶವೆಂದು ಘೋಷಿಸಲು ಹಿಂಜರಿಯಲಿಲ್ಲ. ಯುದ್ಧದ ವಿಷಯದಲ್ಲಿ ತಲೆ ಹಾಕಿದೆವು. ಇಂದು, ಚೀನಾವನ್ನು ಉತ್ತರ ಕೊರಿಯಾ ವಿಷಯದಲ್ಲಿ ಬೀಗಿಕೊಳ್ಳಲು ಬಿಟ್ಟರೆ, ನಾಳೆ ಚೀನಾ ತನ್ನದೇ ಆದ ನಿಬಂಧನೆಗಳನ್ನು ಹೇರುತ್ತದೆ. ಕೆಲವು ತಿಂಗಳ ಹಿಂದೆ ಸಂಸತ್ತಿನಲ್ಲಿ ಕೊರಿಯಾ ಸಮಸ್ಯೆಯನ್ನು ನಾವು ಚರ್ಚಿಸುತ್ತಿದ್ದಾಗ, ನಾನು ಈ ಅಂಶವನ್ನು ಪ್ರಸ್ತಾಪಿಸಿದ್ದೆ. ಉತ್ತರ ಕೊರಿಯಾ ಮತ್ತು ದಕ್ಷಿಣ ಕೊರಿಯಾ ನಡುವೆ ನಡೆಯುತ್ತಿರುವ ಯುದ್ಧ ಕೇವಲ ದ್ವಿಪಕ್ಷೀಯ ವ್ಯವಹಾರವೇ ಅಥವಾ ಆದಕ್ಕಿಂತಲೂ ಬೇರೇನಾದರೂ ಇದೆಯೇ ? ಈ ವಿಷಯದಲ್ಲಿ ಅಮೇರಿಕಾದ ನಿಲುವನ್ನು ನಾನು ಮೆಚ್ಚುತ್ತೇನೆ. ಉತ್ತರ ಕೊರಿಯಾ ದೇಶವು ದಕ್ಷಿಣ ಕೊರಿಯಾದ ಮೇಲೆ ದಾಳಿ ಮಾಡಿದ್ದು ಯಃಕಶ್ಚಿತ್ ವಿಷಯವೇನಲ್ಲ. ಆದರೆ, ಆದಕ್ಕೆ ವಿಚಾರ ಸಂಘರ್ಷಗಳೂ ಸಹ ಕಾರಣ ಎಂದು ಅಮೆರಿಕಾ ಭಾವಿಸಿದೆ.

ಇಂದು ಸಹಜವಾಗಿಯೇ ಕೋರಿಯನ್ ಸಂಘರ್ಷವನ್ನು ಅದರ ಪರಿಮಿತವಲಯಕ್ಕೆ ಸೀಮಿತಗೊಳಿಸುವ ಪ್ರಯತ್ನಗಳಾಗುತ್ತಿವೆ. ನಾವೂ ಸಹ ಹಾಗೆಯೇ ಮಾಡುತ್ತಿದ್ದೇವೇನೋ ಎಂದೆನಿಸುತ್ತಿದೆ. ಆದರೆ ಯಾರಾದರೂ ಅಪಮಾನ ಸಹಿಸಿಕೊಳ್ಳಲೇಬೇಕಲ್ಲ. ಚೀನಾ, ಇಂದು, ತಾನು, ನಿರ್ಲಕ್ಷಿತ ಪೌರಾತ್ಯ ದೇಶಗಳನ್ನು ಪ್ರತಿನಿಧಿಸುತ್ತಿಲ್ಲವೆಂಬುದನ್ನು ತೋರಿಸಿದೆ. ಕಾರಣ ಏನೇ ಇರಬಹುದು ಅದು ಅಪಾರ ಶಕ್ತಿಯನ್ನು ಗಳಿಸಿಕೊಂಡಿದೆ. ಅಮೆರಿಕಾ ಮತ್ತು ಇತರ ಸಹಶಕ್ತ ರಾಷ್ಟ್ರಗಳು ಕಳುಹಿಸಬಹುದಾದಂತಹ ಅತ್ಯುತ್ತಮ ಸೇವೆಯನ್ನು ಸಮರಾಂಗಣಕ್ಕೆ ಕಳುಹಿಸುವ ಸಾಮರ್ಥ್ಯ ಅದಕ್ಕಿದೆ. ಇಲ್ಲಿ ಸಹಜವಾಗಿಯೇ ನಮ್ಮ ಅನುಕಂಪ ಅಮೇರಿಕಾದತ್ತ ಹೋಗುತ್ತದೆ. ಏಕೆಂದರೆ, ಇಂದು ಅದರ ಶಾಂತಿಪಾಲನಾ ಪಡೆಯ ಅರ್ಧದಷ್ಟು ಪಡೆ ಕೊರಿಯಾ ಸಮರಾಂಗಣದಲ್ಲಿ ಇದೆ. ಆದರೆ ಅಮೆರಿಕಾ ತಾನು ತನಗಾಗಿ ಯುದ್ಧದಲ್ಲಿ ತೊಡಗಿಲ್ಲ. ಪ್ರಜಾಪ್ರಭುತ್ವಕ್ಕಾಗಿ ಯುದ್ಧದಲ್ಲಿ ತೊಡಗಿದ್ದೇನೆಂದು ಹೇಳಿಕೊಳ್ಳುತ್ತಿದೆ. ಈ ವಿಷಯದಲ್ಲಿ ನಮ್ಮ ಸ್ಪಷ್ಟ ನಿಲುವು ಏನೇಂಬುದನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಪ್ರಧಾನ ಮಂತ್ರಿಗಳು ಚೀನಾವನ್ನು ಉಲ್ಲೇಖಿಸಿದ್ದಾರೆ. ತನ್ನ ಜನರ ಸ್ವಾತಂತ್ರ್ಯಕ್ಕೆ ಎಲ್ಲಿವರೆಗೆ ಚೀನಾ ಉತ್ಸುಕವಾಗಿರುತ್ತಾದೋ ಅವರೆಗೆ ಚೀನಾದ ಜೊತೆ ನಮಗೆ ಜಗಳವೇನಿಲ್ಲ, ಪ್ರತಿಯೊಬ್ಬರಿಗೂ ಚೀನಾದ ಜನರ ಬಗ್ಗೆ ಸಹಾನುಭೂತಿ ಇದೆ. ಚೀನಾದಿಂದ ನಮ್ಮ ಸ್ವಾತಂತ್ರ್ಯ ಆಗಬೇಕಾಗಿಲ್ಲವೆಂದು ಭವಿಸುವಂಥ ಜನಗಳಿಗೆ ಸ್ವಾತಂತ್ರ್ಯಗಳಿಸಿಕೊಡುವ ಹೊಣೆಯನ್ನು ಚೀನಾ ಹೊತ್ತುಕೊಂಡರೆ ಆಗ ಸಹಜವಾಗಿಯೇ ಬಿಕ್ಕಟ್ಟು ಉದ್ಭವಿಸುತ್ತದೆ. ಆದರಿಂದ ಚೀನಾಕ್ಕಷ್ಟೇ ಅಲ್ಲ ವಿಶ್ವದ ಇತರ ಭಾಗಗಳ ಮೇಲೆ ಅದರಲ್ಲೂ ಮುಖ್ಯವಾಗಿ ಏಷ್ಯಾದ ಮೇಲೆ ಪರಿಣಾಮವುಂಟಾಗುತ್ತದೆ. ಲಂಡನ್ನಿನಲ್ಲಿ ಹೌಸ್ ಆಫ್ ಕಾಮನ್ಸ್‌ನಲ್ಲಾದ ಕಾರ್ಯ ಕಲಾಪಗಳನ್ನು ಓದಬೇಕು. ಅಲ್ಲೂ ಸಹ, ಮಹಾನ್ ಹೋರಾಟಗಾರ ಹಾಗೂ ದೇಶಪ್ರೇಮಿ ಚರ್ಚಿಲ್ಲರು ಏಷ್ಯಾವನ್ನು ಉಳಿಸುವ ಬಗ್ಗೆಯಾಗಲೀ ಅಥವಾ ಕೊರಿಯಾವನ್ನು ಅಗ್ನಿಪರೀಕ್ಷೆಯ ಕಣವನ್ನಾಗಿ ಮಾಡಬೇಕೆಂದಾಗಲೀ ಚಿಂತಿಸದೆ, ಕೊರಿಯಾವನ್ನು ವಿಶ್ವ ಸಮರದ ರಂಗವನ್ನಾಗಿ ಬೆಳೆಯಬಿಟ್ಟರೆ ಅದರಿಂದ ಯೂರೋಪಿನ ಮೇಲೆ ಅದರಲ್ಲೂ ಇಂಗ್ಲೆಂಡಿನ ಮೇಲೆ ಆಗುವಂತಹ ಪರಿಣಾಮಗಳ ಬಗ್ಗೆ ಚಿಂತಿಸುತ್ತಿದ್ದಾರೆ. ಇದು ನಿಜವಾದ ದೃಷ್ಟಿಕೋನ. ಈ ಸಮಸ್ಯೆಗಳನ್ನು ವಿಶ್ವಶಾಂತಿಯ ದೃಷ್ಟಿಯಿಂದ ನೋಡುವುದಷ್ಟೇ ಅಲ್ಲ, ಬಹು ಮುಖ್ಯವಾಗಿ, ನಮ್ಮ ಪರಿಸ್ಥಿತಿ, ಸನ್ನಿವೇಶಗಳ ಮೇಲೆ ಅದು ಯಾವ ಪರಿಣಾಮವನ್ನುಂಟು ಮಾಡಬಹುದು ಎಂಬುದನ್ನೂ ನೋಡಬೇಕಾಗುತ್ತದೆ.

ಚೀನಾದ ವಿಷಯದ ಜತೆ ಜತೆಯಲ್ಲೇ ನಾವು ಟಿಬೆಟ್ ವಿಷಯವುನ್ನು ಕೈಗೆತ್ತಿಕೊಳ್ಳಬೇಕಾಗಿದೆ. ಏಕೆಂದರೆ, ಅವೆರೆಡಕ್ಕೂ ಒಂದಕ್ಕೊಂದು ಸಂಬಂಧ ಇದೆ. ಈಗ ಪ್ರಧಾನ ಮಂತ್ರಿಗಳು, ಈಗಿನ ಚೀನಾ ಸರ್ಕಾರದ ನ್ಯಾಯಸಮ್ಮತ ಹಕ್ಕುಗಳಿಗೆ ಮನ್ನಣೆ ನೀ[illegible] ವಿಷಯದಲ್ಲಿ ಭಾರತವು ನಿರ್ವಹಿಸಿದ ಪಾತ್ರವನ್ನು ಸಹಜವಾಗಿಯೇ ಜ್ಞಾಪಿಸಿದ್ದಾರೆ. [illegible],

ಚೀನಾ ಯಾವ ಪ್ರತಿಕ್ರಿಯೆ ವ್ಯಕ್ತಪಡಿಸಿದೆ : ಟಿಬೆಟ್ಟಿನ ಮೇಲೆ ಚೀನಾಕ್ಕೆ ಒಂದು ರೀತಿಯ ಸಡಿಲವಾದ ಪರಮಾಧಿಕಾರ ಇರಬಹುದು, ಇಲ್ಲದಿರಬಹುದು. ಆದರೆ, ಐತಿಹಾಸಿಕವಾಗಿ ಅದು ಅಷ್ಟೊಂದು ಸುಲಭದ ವಿಷಯ ಅಲ್ಲ. ಆದರೂ, ಟಿಬೆಟ್ಟಿನ ವಿಷಯದಲ್ಲಿ ಚೀನಾವು ಹಿಂಸಾಮಾರ್ಗ ಅನುಸರಿಸಬಾರದೆಂದು ಚೀನಾಕ್ಕೆ ಭಾರತ ತಿಳಿಸಿದಾಗ, ಚೀನಾ ಭಾರತಕ್ಕೆ ಯಾವ ಉತ್ತರ ಕೊಟ್ಟಿದೆ ? ಚೀನಾ ಕೊಟ್ಟ ಉತ್ತರ ಆಘಾತ ತಂದಿದೆ, ಆಶ್ಚರ್ಯ ಉಂಟು ಮಾಡಿದೆ. ಭಾರತ ಸರ್ಕಾರಕ್ಕೆ ವ್ಯಥೆಯನ್ನುಂಟು ಮಾಡಿದೆ. ಆ ಉತ್ತರದಿಂದ ಟಿಬೆಟ್ಟಿಗೆ ಸಂಬಂಧಿಸಿದಂತೆ ಚೀನಾ ತಾಳಿರುವ ನೀತಿಯಲ್ಲಿ ಯಾವುದೇ ಬದಲಾವಣೆ ಕಂಡುಬಂದಿದೆಯೇ ಎಂಬುದು ನನಗೆ ಗೊತ್ತಾಗುತ್ತಿಲ್ಲ. ಟಿಬೆಟ್‌ನ ವಿಷಯದಲ್ಲಿ ಭಾರತ ಸರ್ಕಾರದ ಸ್ಪಷ್ಟ ನೀತಿ ಏನು ? ಪ್ರಧಾನ ಮಂತ್ರಿಗಳು ಸ್ಪಷ್ಟವಾಗಿ ಏನನ್ನೂ ಹೇಳಿಲ್ಲ. ಶಾಂತಿಯಿಂದಿರಬೇಕೆಂದು ನಾವು ಅವರಿಗೆ ಇನ್ನೊಂದು ಕೋರಿಕೆ ಸಲ್ಲಿಸಿದ್ದೇವೆಂದು ಹೇಳಿದ್ದಾರೆ. ಆದರೆ, ಅದರಿಂದ ಏನಾದರೂ ಬದಲಾವಣೆ ಉಂಟಾಗಿದೆಯೇ ? ಕೋರಿಯಾದಂತೆಯೇ ಪ್ರತಿಯೊಂದು ದೇಶವೂ ಭೀಕರ ಪರಿಣಾಮಗಳಿಗೆ ತುತ್ತಾಗುತ್ತದೆ. ಇದು ಹೇಗಿದೆ ಎಂದರೆ, ಶಸ್ತ್ರಚಿಕಿತ್ಸೆಯೇನೋ ಯಶಸ್ವಿಯಾಯಿತು. ಆದರೆ, ರೋಗಿ ಸತ್ತ ಎಂದ ಹಾಗಾಯಿತು. ಉತ್ತರ ಕೊರಿಯಾ ರಾಜಧಾನಿಯನ್ನು ಬಿಟ್ಟ ಕೊನೆಯ ಬ್ರಿಟಿಷ್ ಪತ್ರಕರ್ತ ವಿವರ ಬರೆದಿರುವುದು ಈ ದಿನದ ಬೆಳಗಿನ ಪತ್ರಿಕೆಗಳಲ್ಲಿ ವರದಿಯಾಗಿದೆ. ಇಡೀ ಸ್ಥಳ ಹತ್ತಿ ಉರಿಯುತ್ತಿರುವುದನ್ನು ಅವನು ನೋಡಿದೆ. ಸರ್ ಗೈ ಫಾಕರ್ಸ್‌ನ ಕೆಲವು ಕೃತ್ಯಗಳು ಅವನಿಗೆ ಜ್ಞಾಪಕಕ್ಕೆ ಬಂದಿದೆ. ಆದ್ದರಿಂದ, ಟಿಬೆಟ್‌ನ ವಿಷಯದಲ್ಲಿ ಹಿಂಸಾಚಾರಕ್ಕಿಳಿಯದಂತೆ ನಾವು ಚೀನಕ್ಕೆ ಜೋರು ಮಾತಿನ ಮನವಿ ಕಳುಹಿಸಿದ್ದೇವೆ. ಆದರೆ, ಚೀನಾ ಕೇಳಿತೇ ? ಚೀನಾದ ಕ್ರಮದ ಹಿಂದಿರುವ ನೀತಿ ಯಾವುದು ? ವಿಷಯಗಳ ಬಗ್ಗೆ ತೇಲಿಸಿ ಮಾತನಾಡುವುದರಿಂದ ಏನೂ ಪ್ರಯೋಜನವಿಲ್ಲ. ಇವು ಟಿಬೆಟ್‌ನ ಜನರ ಮೇಲಷ್ಟೇ ಅಲ್ಲ. ಭಾರತದ ಭದ್ರತೆಯ ಮೇಲೂ ಪರಿಣಾಣವುಂಟು ಮಾಡುವ ವಿಷಯಗಳು. ಟಿಬೆಟ್ ಮತ್ತು ಭಾರತದ ನಡುವಣ ಗಡಿಯನ್ನು ನಿರ್ದಿಷ್ಟವಾಗಿ ಗುರುತಿಸಬೇಕೆನ್ನುವ ಸಂಗತಿ ನಿಜ. ಪ್ರಧಾನ ಮಂತ್ರಿಗಳು ಆ ದಿನ ಮೆಕ್ ಮೋಹನ್ ರೇಖೆಗೆ ನಾವು ಬದ್ಧರಾಗಿದ್ದೇವೆ ಎಂದೇನೋ ಹೇಳಿದರು. ಆದರೆ, ಭಾರತದ ಅಂಗಭಾಗಗಳಾಗಿರುವ ಆಸ್ಸಾಂ, ಲಢಾಖ್ ಹಾಗೂ ಲೇಹ್ ಮತ್ತಿತರ ಭಾಗಗಳು ಚೀನಾ ಪ್ರಕಟಿಸಿರುವ ಭೂಪಟದಲ್ಲಿ ಸೇರಿಹೋಗಿವೆ. ಟಿಬೆಟ್ ವಿಷಯದಲ್ಲಿ ಚೀನಾ ಭಾರತಕ್ಕೆ ಕಳುಹಿಸಿದ ಉತ್ತರದಲ್ಲಿ ತನ್ನ ಗಡಿ ಎಂದು ಅದು ಯಾವುದನ್ನೆಲ್ಲಾ ಹೇಳಿದೆಯೋ ಅದನ್ನೆಲ್ಲಾ ಉಳಿಸಿಕೊಳ್ಳುವ ಎಲ್ಲಾ ಪ್ರಯತ್ನ ಮಾಡುತ್ತದೆಂಬುದು ವ್ಯಕ್ತವಾಗುತ್ತದೆ. ಚೀನಾ ಗಡಿಗಳು ಎಂದು ಹೇಳಿವುದರಲ್ಲಿ ಟಿಬೆಟ್ಟು ಸೇರುತ್ತದೆ ಹಾಗೂ ಭಾರತದ ಗಡಿಗೆ ಹೊಂದಿಕೊಂಡಿರುವ ಟಿಬೆಟ್‌ನ ಇನ್ನೂ ಗುರುತಿಸಿರದ ಗಡಿಯೂ ಸೇರುತ್ತದೆ. ನೇಪಾಳದ ವಿಷಯವೂ ಹಾಗೆಯೇ.

ನೇಪಾಳದ ವಿಷಯ ಬಂದಾಗ ಪ್ರಧಾನ ಮಂತ್ರಿಗಳು ಕೆಲವು ಕಠಿಣ ಮಾತುಗಳನ್ನಾಡಿದರೂ ಮಾತನಾಡಿದ್ದಷ್ಟು ಸಮಯವೂ ಮೆದುವಾಗಿಯೇ ಮಾತನಾಡಿದರು. ಪಾಕಿಸ್ತಾನದ ಬಗ್ಗೆ ನಾವು ತಾಳ್ಮೆಯ ನೀತಿಯನ್ನು ಅನುಸರಿಸಬೇಕು ; ಚೀನಾದ ಬಗ್ಗೆ ಸ್ನೇಹ ನೀತಿಯನ್ನು ಅನುಸರಿಸಬೇಕು ; ಟಿಬೆಟ್ ವಿಷಯದಲ್ಲಿ ಅರ್ಪಣಾ ನೀತಿಯನ್ನು ಅನುಸರಿಸಬೇಕು; ಎಂದೆಲ್ಲಾ ಹೇಳಿದರು. ಆದರೆ, ನೇಪಾಳದ ವಿಷಯದಲ್ಲಿ ಮಾತ್ರ, ನೇಪಾಳಕ್ಕೆ ಹೋಗಲು ನಾವು ಯಾರಿಗೂ ಅನುಮತಿ ಕೊಡುವುದಿಲ್ಲ, ಅಷ್ಟೇ ಅಲ್ಲ ಹಿಮಾಲಯದ ಆ ಭಾಗದ ಮೇಲೆ ಹಾದು ಹೋಗಲು ಯಾರಿಗೂ ಆಸ್ಪದ ಕೊಡುವುದೇ ಇಲ್ಲ ಎಂದು ಆರ್ಭಟಿಸಿದರು. ಹಾಗೆ ಮಾಡಬೇಕು ನಿಜ, ನೇಪಾಳದಲ್ಲಿ ನಮಗೆ ಆಸಕ್ತಿ ಇದೆ. ನಮ್ಮ ಭದ್ರತೆಗೂ ನೇಪಾಳಕ್ಕೂ ತುಂಬಾ ಸಂಬಂಧವಿದೆ. ನೇಪಾಳದ ವಿಷಯದಲ್ಲಿ ಏನಾದರೊಂದು ಪರಿಹಾರ ಕಂಡುಕೊಳ್ಳಲೇ ಬೇಕು. ನೇಪಾಳದ ವಿಷಯದಲ್ಲೂ ಸಹ ನಾವು ಬಹಳ ಹಿಂದಿನಿಂದಲೂ ಯಾವ ನಿರ್ಧಾರವನ್ನೂ ತೆಗೆದುಕೊಂಡಿಲ್ಲ. ನಮಗೇನಾಗಬೇಕಾಗಿದೆಯೆಂಬುದು ನಮಗೇ ಗೊತ್ತಿಲ್ಲ. ನೇಪಾಳದಲ್ಲಿ ಬಲವಾದ ಸುಭದ್ರ ಹಾಗೂ ಜನರ ಬೆಂಬಲವಿರುವಂತಹ ಸರ್ಕಾರ ಇರಬೇಕು. ಆಕಸ್ಮಾತ್ತಾಗಿ ನೇಪಾಳದಲ್ಲಿ ನಾಗರೀಕ ಕದನ ಪ್ರಾರಂಭವಾದರೆ ಆದರಿಂದ ಭಾರತಕ್ಕೆ ಲಾಭವಾಗುವುದಿಲ್ಲ, ಬದಲಿಗೆ, ಟಿಬೆಟ್ ಮೂಲಕ ಚೀನಾ ಮಧ್ಯಪ್ರವೇಶಿಸಿ ಏಷ್ಯಾದ ಆ ಭಾಗದಲ್ಲಿ ಆರಾಜಕತೆಯನ್ನುಂಟು ಮಾಡುತ್ತದೆ.

ಪ್ರಮುಖ ವಿಷಯಗಳ ಮೇಲೆ ನಾವು ತೀರ್ಮಾನ ತೆಗೆದುಕೊಳ್ಳಬೇಕಾದ ಕಾಲ ಬಂದಿದೆ ಮತ್ತು ಕಾಲ ಮಿಂಚುವುದಕ್ಕೆ ಮುಂಚೆಯೇ ಕಾರ್ಯಪ್ರವೃತ್ತರಾಗಲು ಸನ್ನದ್ಧ ರಾಗಬೇಕಾಗಿದೆ ಎಂಬುದನ್ನು ಪ್ರಧಾನ ಮಂತ್ರಿಗಳು ಅರಿತುಕೊಳ್ಳಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಈ ಪ್ರಪಂಚ ನಮ್ಮೆಲ್ಲರನ್ನೂ ಸಾಕಿ ಸಲಹುವಷ್ಟು ಬಹು ದೊಡ್ಡದು ಎಂಬುದು ನನ್ನ ವೈಯಕ್ತಿಕ ಭಾವನೆ. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ವಿಚಾರಧಾರೆಗಳಿರುವ ಸಾಧ್ಯತೆ ಇದೆ ಎಂಬುದು ಸಹ ನನ್ನ ಭಾವನೆ. ಒಂದೇ ಒಂದು ವ್ಯವಸ್ಥೆಯ ಮೇಲೆ ಪ್ರಪಂಚವನ್ನು ಕಟ್ಟಬೇಕೆಂದು ಯಾರಾದರೂ ಭಾವಿಸಿದರೆ ಆದು ಹುಚ್ಚುತನವಾದೀತು. ಒಂದು ದೇಶದಲ್ಲಿ ವಾಸಿಸುತ್ತಿರುವ ಜನರು ಅಥವಾ ಆ ದೇಶವನ್ನು ಪ್ರತಿನಿಧಿಸುವ ಸರ್ಕಾರವು, ತಮ್ಮದೇ ಆದ ಚೌಕಟ್ಟಿನಲ್ಲೇ ತಮ್ಮ ತಮ್ಮ ಚಟುವಟಿಕೆಗಳನ್ನು ಕೈಗೊಳ್ಳಲು ಹಾಗೂ ತಮಗೆ ಅನುಕೂಲಕರವೆಂದು ತಾವು ಭಾವಿಸುವಂತಹ ಯಾವುದೇ ಸಿದ್ಧಾಂತಗಳನ್ನು ತಮ್ಮವರೇ ಆದ ಜನಗಳಿಗೆ ಅನ್ವಯಿಸಲು ನಿರ್ಧರಿಸಿದರೆ ಪ್ರಪಂಚದ ಮಿಕ್ಕ ಭಾಗಕ್ಕೆ ಅದರಿಂದ ಆತಂಕವೇನಿಲ್ಲ. ಆದರೆ, ವಿಚಾರಧಾರೆಗಳಾಗಲೀ ಅಥವಾ ತತ್ವಗಳಾಗಲೀ ಶಾಂತಿಯುತವಾಗಿಯೋ ಅಥವಾ ಹಿಂಸಾಪೂರ್ವಕವಾಗಿಯೋ ಇತರ ರಾಷ್ಟ್ರಗಳಿಗೆ ನುಸುಳಿದರೆ

ಮತ್ತು ಆ ದೇಶಗಳ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಿದರೆ ಹಾಗೂ ಪ್ರಪಂಚಕ್ಕೆ ಸವಾಲು ಒಡ್ಡಿದರೆ ಆಗ ತೊಂದರೆಗಳು ಕಾಣಿಸಿಕೊಳ್ಳುತ್ತವೆ.

ಇಂದು ಪ್ರಪಂಚದಲ್ಲಿ ಏನಾಗುತ್ತಿದೆ ? ಪ್ರಪಂಚವು ಅಧಿಕಾರ, ಆಕ್ರಮಣ ಮತ್ತು ಪ್ರತಿಷ್ಠೆಯ ದಾಹಕ್ಕೆ ಸಿಲುಕಿ ತತ್ತರಿಸುತ್ತಿದೆ. ಈ ಮೂರು ಪೀಡೆಗಳು ಪ್ರಪಂಚವನ್ನು ಆಳುತ್ತಿವೆ. ಆದ್ದರಿಂದ, ಸಹಜವಾಗಿಯೇ, ನಮಗೆ ಯಾವುದೇ ಪಕ್ಷದತ್ತ ಬಹಿರಂಗವಾಗಿ ಮತ್ತು ಯದ್ವಾತದ್ವ ವಾಲುವುದು ಬೇಕಾಗಿಲ್ಲ. ನಾವು ಇನ್ನೊಬ್ಬರ ದೀವಟಿಗೆಯವರೆಂದು ಕರೆಸಿಕೊಳ್ಳುವುದು ನಮಗೆ ಬೇಕಾಗಿಲ್ಲ. ಏಕೆಂದರೆ, ನಮಗೆ ನಮ್ಮದ್ದೇ ಆದ ತತ್ವಜ್ಞಾನ, ವಿಚಾರಧಾರೆ ಇದೆ. ನೀನೂ ಬದುಕು, ಬೇರೆಯವರನ್ನೂ ಬದುಕಲು ಬಿಡು ಎಂಬ ಆದರ್ಶಕ್ಕೆ ಭಾರತ ಹೆಸರುವಾಸಿಯಾಗಿದೆ. ಆದರೂ, ಅಪಾಯದ ಸೂಚನೆ ಬಂದಾಗ, ಅಥಿ ಘೋರ ಅಪಾಯದ ಸೂಚನೆ ಕಂಡುಬಂದಾಗ ಭಾರತ ಏನು ಮಾಡುತ್ತದೆ ? ಹಿಮಾಲಯ ಗಿರಿ ಶ್ರೇಣಿಗಳು ಅಭೇಧ್ಯ, 2000 ಮೈಲಿಗಳಷ್ಟು ಭಾರಿ ಉದ್ದದ ಗಡಿಗೆ ಯಾವುದೇ ಪ್ರತ್ಯೇಕ ಮುನ್ನೆಚ್ಚರಿಕೆ ಅಥವಾ ರಕ್ಷಣೆಯ ಅವಶ್ಯಕತೆ ಇಲ್ಲವೆಂದು ಹೇಳಲಾಗುತ್ತಿತ್ತು. ಆದರೆ, ಅದೇ ಗಡಿಗಳ ಮೂಲಕ ಭಾರತಕ್ಕೆ ಒಳ ನುಸುಳಲಾಗುತ್ತಿದೆ, ದಾಳಿ ಆಗುತ್ತಿದೆ. ಭಾರತ ತನ್ನನ್ನು ಹೇಗೆ ರಕ್ಷಿಸಿಕೊಳ್ಳುತ್ತದೆ ? ಈ ವಿಷಯಕ್ಕೂ ಭಾರತದಲ್ಲಿನ ಆಂತರಿಕ ಪರಿಸ್ಥಿತಿಗಳಿಗೂ ಪರಸ್ಪರ ಸಂಬಂಧ ಇದೆ. ನಮ್ಮ ಆರ್ಥಿಕ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿರುವುದು ನಮ್ಮ ಆಂತರಿಕ ಭದ್ರತೆಗೆ ಮತ್ತು ದಾಳಿಯನ್ನು ಅಥವಾ ಆಕ್ರಮಣವನ್ನು ತಡೆಯುವ ನಮ್ಮ ಸಾಮರ್ಥ್ಯಕ್ಕೆ ಧಕ್ಕೆ ತರುತ್ತಿದೆ. ಕಮ್ಯೂನಿಸ್ಟ್ ಸಿದ್ಧಾಂತದ ಬಗ್ಗೆ ನಾನೇನೂ ಹೇಳಹೋಗುವುದಿಲ್ಲ. ಭಾರತದ ಜನರಿಗೆ, ತಾವು ಇಷ್ಟಪಡುವ 'ಇಸಂ'ನ್ನು ಅಳವಡಿಸಿಕೊಳ್ಳುವ ಹಕ್ಕಿದೆ. ಆದರೆ, ನಾವು ಪ್ರಜಾಪ್ರಭುತ್ವದಲ್ಲಿ ನಂಬಿಕೆ ಉಳ್ಳವರಾಗಿದ್ದೇವೆ. ಯಾವುದೇ ವಿದೇಶಿ ಹಸ್ತಕ್ಷೇಪವನ್ನು ನಾವು ಸಹಿಸುವುದಿಲ್ಲ. ಇಂಗ್ಲೆಂಡಿನ ಅಥವಾ ಅಮೆರಿಕಾದ ವಿಚಾರಧಾರೆಗಳ ಬಗ್ಗೆಯಾಗಲೀ ಅಥವಾ ಅವುಗಳಲ್ಲಿರುವ ಲೋಪದೋಷಗಳ ಬಗ್ಗೆಯಾಗಲೀ ನಾನು ಹೇಳುತ್ತಿಲ್ಲ. ಆದರೆ, ಭಾರತದಲ್ಲಿ ಹಿಂದಿನಿಂದಲೂ ಅನೂಚಾನವಾಗಿ ಬೆಳೆದು ಬಂದಂತಹ, ಈಗಲೂ ಪ್ರಸ್ತುತವುಳ್ಳ ಕೆಲವೊಂದು ಮೂಲಭೂತ ಹಾಗೂ ಆದರ್ಶ ಪ್ರಾಯವಾದ ವಿಚಾರಧಾರೆಗಳಿವೆ. ಅಭಿವ್ಯಕ್ತಿ ಸ್ವಾತಂತ್ರ್ಯ, ಚಿಂತನೆ ಸ್ವಾಂತಂತ್ರ್ಯ ಸಂಘ, ಧಾರ್ಮಿಕ ಸ್ವಾತಂತ್ರ್ಯಕ್ಕೆ ನಾವು ಬದ್ಧರಾಗಿದ್ದೇವೆ ನಮ್ಮ ರಾಜ್ಯಾಂಗಕ್ಕೆ ಪ್ರಜಾಪ್ರಭುತ್ವದ ಗಟ್ಟಿತತ್ವಗಳೇ ಆದಾರ. ಆದ್ದರಿಂದ, ಸಂಪೂರ್ಣವಾದಕ್ಕೆ ಅಥವಾ ನಿರಂಕುಶ ಪ್ರಭುತ್ವಕ್ಕೆ ಅಂಟಿಕೊಂಡಿರುವ ಯಾವುವೇ ತತ್ವಗಳನ್ನು ಭಾರತ ಒಪ್ಪುವುದಿಲ್ಲ. ಒಪ್ಪಿಕೊಳ್ಳುವಂತಿಲ್ಲ. ಈ ಎರಡು ಸಿದ್ಧಾಂತಗಳ ನಡುವೆ ಸಂಘರ್ಷ ತಲೆದೋರಿದರೆ, ನಾವು ಸುಮ್ಮನೆ ಕುಳಿತು ಕೊಳ್ಳುವಂತಿಲ್ಲ. ಎಲ್ಲ ರೀತಿಯಿಂದಲೂ ಸಂಧಾನಕ್ಕೆ ಪ್ರಯತ್ನಿಸೋಣ, ಒಂದು ವೇಳೆ ಸಂಘರ್ಷ ಉಂಟಾಯಿತೆನ್ನಿ, ಆಗ ಭಾರತ ಏನು ಮಾಡುತ್ತದೆ ? ಭಾರತಕ್ಕೆ ಅಪಾಯ ಉಂಟಾಗುವ ಸಾಧ್ಯತೆ ಕಂಡುಬಂದರೆ, ಆಗ, ಭಾರತ ಏಕಾಂಗಿಯಾಗಿ ತನ್ನನ್ನು,

ತನ್ನ ಭೂಭಾಗಗಳನ್ನು ಭಾರಿ ಆಕ್ರಮಣದಿಂದ ರಕ್ಷಿಸಿಕೊಳ್ಳಬಲ್ಲದೇ ? ಇವೇ ಈಗಿನ ಗುರುತರ ಪ್ರಶ್ನೆಗಳು. ಈ ವಿಷಯಗಳ ಆಳಕ್ಕಿಳಿಯುವುದು ನನ್ನ ಉದ್ದೇಶ ಅಲ್ಲ. ನಮಗೆ ಶಾಂತಿ ಬೇಕು ನಿಜ. ಆದರೆ, ನಮ್ಮ ವಿದೇಶ ನೀತಿಯಲ್ಲಿರುವ ಅಸಂಗತತೆಗಳು ಹಾಗೂ ಅನಿಶ್ಚಿತತೆಗಳು ಭಾರತಕ್ಕೆ, ನಾವು ಭಾವಿಸಿದ್ದಕ್ಕಿಂತಲೂ ಶೀಘ್ರವಾಗಿ ದುರಂತವನ್ನು ತಂದೊಡ್ಡುವ ಏನೋ ಒಂದರತ್ತ ನಮ್ಮನ್ನು ನಿಧಾನವಾಗಿ ಒಯ್ಯುತ್ತಿವೆ. ಭಾರತದ ವಿದೇಶ ನೀತಿಯ ಬಗ್ಗೆ ವಾಸ್ತವಿಕ ದೃಷ್ಟಿಕೋನ ಇರಬೇಕೆಂದು ಭಾರತದ ಜನ ಬಯಸುತ್ತಿದ್ದಾರೆಂದು ನಾನು ಪ್ರಧಾನ ಮಂತ್ರಿಗಳಿಗೆ ಹೇಳಬಯಸುತ್ತೇನೆ.

ಕೊನೆಯದಾಗಿ, ನಾನು ಪಾಕಿಸ್ತಾನದ ಬಗ್ಗೆ ಕೆಲವು ಮಾತುಗಳನ್ನಾಡುತ್ತೇನೆ. ಪ್ರಧಾನ ಮಂತ್ರಿಗಳು ಪಾಕಿಸ್ತಾನದ ಬಗ್ಗೆ ಏನೂ ಹೇಳಿಲ್ಲ. ಒಂದೇ ವಾಕ್ಯ ಹೇಳಿ ಮುಗಿಸಿದ್ದಾರೆ.

ಪಾಕಿಸ್ತಾನದ ಬಗ್ಗೆ ನಮ್ಮ ಸ್ಪಷ್ಟ ನೀತಿ ಏನು ? ನಾನು ಪದೇ ಪದೇ ಹೇಳುತ್ತಲೇ ಬಂದಿದ್ದೇನೆ, ಭಾರತ - ಪಾಕಿಸ್ತಾನದ ನಡುವೆ ಸಮಗ್ರ ನೀತಿಯೊಂದಿರಬೇಕು. ಕಾಶ್ಮೀರದ ವಿಷಯದಲ್ಲಿ ಭಾರತ - ಪಾಕಿಸ್ತಾನದ ನಡುವೆ ಯುದ್ಧದ ಕಾರ್ಮೋಡ ಕವಿದಿದೆ. ಪಾಕಿಸ್ತಾನ ದಾಳಿ ಮಾಡಿದೆ. ಕೊರಿಯಾದ ವಸ್ತು ಸ್ಥಿತಿ ಬೇರೆ, ಕಾಶ್ಮೀರದ ವಸ್ತು ಸ್ಥಿತಿ ಬೇರೆ. ಇತರೆಲ್ಲ ವಿಷಯಗಳಲ್ಲಿ ನಾವು, ಪಾಕಿಸ್ತಾನದೊಂದಿಗೆ ರಾಜೀ ನೀತಿಗೆ ಪ್ರಯತ್ನಿಸುತ್ತಿದ್ದೇವೆ. ನಮ್ಮ ನೀತಿ, ಪರಸ್ಪರ ಕೊಟ್ಟು ತೆಗೆದುಕೊಳ್ಳುವ - ಪರಿಪೂರ್ಣ ನೀತಿಯ ಮೇಲೆ ಆಧಾರವಾಗಿರಲೇಬೇಕಾಗುತ್ತದೆ. ಪಾಕಿಸ್ತಾನ ನಮಗೆ ಗೌರವಾದರ ತೋರಿಸಿದರೆ, ನಾವೂ ಪಾಕಿಸ್ತಾನಕ್ಕೆ ಗೌರವಾದರ ತೋರಿಸೋಣ. ನಾವು ಅವರೊಂದಿಗೆ ಸಂಧಾನ ನೀತಿಯನ್ನು ಅನುಸರಿಸುತ್ತೇವೆಂದು ಕೇವಲ ಹೇಳುತ್ತಲೆ ಬಂದರೆ, ಅದರಿಂದ ಏನೂ ಪ್ರಯೋಜನವಿಲ್ಲ. ಕೊನೆಯಲ್ಲಿ ನಾವು ದುರ್ಬಲರಾಗುತ್ತೇವೆ. ನಮ್ಮ ಆತ್ಮ ಗೌರವಕ್ಕೆ ಕುಂದುಂಟಾಗುತ್ತದೆ. ಪೂರ್ವ ಪಾಕಿಸ್ತಾನದ ಬಗ್ಗೆ ನಾನು ವಿವರವಾಗಿ ಹೇಳಹೋಗುವುದಿಲ್ಲ. ಪ್ರತಿ ದಿನವೂ ಸುಮಾರು 2000 ಕ್ಕಿಂತ ಹೆಚ್ಚಿಗೆ ಜನರು ಪೂರ್ವ ಪಾಕಿಸ್ತಾನಕ್ಕೆ ವಾಪಸು ಹೋಗುತ್ತಿದ್ದಾರೆಂಬ ಒಂದೇ ಕಾರಣಕ್ಕೆ ಪ್ರಧಾನ ಮಂತ್ರಿಗಳು ಅಂಟಿಕೊಂಡಿದ್ದಾರೆ, ಆದರೆ, ಅವರು ಅಲ್ಲಿಗೇಕೆ ಹೋಗುತ್ತಿದ್ದಾರೆ ? ಅಲ್ಲಿ ಹೇಗೆ ಬದುಕುತ್ತಿದ್ದಾರೆ ? ಅಲ್ಲಿ ಅವರು ಯಾವ ಯಾವ ಅಪಮಾನಗಳ ಪರಿಸ್ಥಿತಿಗಳಿಗೆ ತುತ್ತಾಗುತ್ತಿದ್ದಾರೆ ? ಈ ಪ್ರಶ್ನೆಗಳಿಗೆ ಪ್ರಧಾನ ಮಂತ್ರಿಗಳು ಉತ್ತರ ಕೊಡುವುದಕ್ಕೆ ಸಾಧ್ಯವಾಗಿಲ್ಲ. ಪಶ್ಚಿಮ ಬಂಗಾಳದಲ್ಲಿರುವ ಈ ಲಕ್ಷಾಂತರ ಹಿಂದೂಗಳು ಅಲ್ಲಿ ಯಾವ ರೀತಿಯ ಸಂಕಟದಿಂದ, ನಾಚಿಕೆಯಿಂದ, ಅವಮಾನದಿಂದ ಬದುಕುತ್ತಿದ್ದಾರೆಂಬುದು ನನಗಿಂತಲೂ ಚೆನ್ನಾಗಿ ಪ್ರಧಾನ ಮಂತ್ರಿಗಳಿಗೇ ಗೊತ್ತಿದೆ. ಅವರು ಭಾಷಣ ಮಾಡುವಾಗ, ದಕ್ಷಿಣಾ ಆಫ್ರಿಕಾವನ್ನು ಉಲ್ಲೇಖಿಸುತ್ತ ಏನೇ ಆಗಲಿ, ಜಾತಿ ಅಥವಾ ಮತದ ಆಧಾರದ ಯಾವುದೇ ತಾರತಮ್ಯವನ್ನು ಭಾರತ ಎಂದಿಗೂ ಒಪ್ಪುವುದಿಲ್ಲವೆಂದು

ಹೇಳಿದ್ದಾರೆ. ಅಖಂಡ ಭಾರತಕ್ಕೆ ನಿಷ್ಠೆಯಿಂದಿದ್ದ, ಭಾರತಕ್ಕೆ ಸ್ವಾತಂತ್ರ್ಯ ಬರಲು ಹೋರಾಡಿದ ಆ ಜನರು ಅಲ್ಲಿ ಅಭದ್ರತೆಯ, ಸಂಕಷ್ಟದ ಮತ್ತು ಅವಮಾನದ ಪರಿಸರದಲ್ಲಿ ಬದುಕುತ್ತಿದ್ದಾರಲ್ಲ. ತುರ್ತಾಗಿ ರಕ್ಷಣೆಗೆ, ನೆರವಿಗೆ ಸಹಜವಾಗಿಯೇ ಭಾರತದತ್ತ ನೋಡುತ್ತಿದ್ದಾರಲ್ಲ, ಅವರ ಬಗ್ಗೆ ಭಾರತದ ನೀತಿ ಏನು ? ಭಾರತದ ಜನರಿಗೆ, ಸರ್ಕಾರದಿಂದ ಸೂಕ್ತ ಮಾರ್ಗದರ್ಶನ ಇಂದಿನ ಅಗತ್ಯ. ಇಲ್ಲದಿದ್ದರೆ, ಪರಿಸ್ಥಿತಿ, ಮತ್ತಷ್ಟು ಬಿಗಡಾಯಿಸುತ್ತದೆ. ದೇವರೇ, ಹಾಗಾಗದಿರಲಿ, ಭಾರತವು, ಜನರ ಅಖಂಡ ನೈತಿಕ ಬಲವನ್ನು ಅವಲಂಬಿಸಿರುವಂತೆಯೇ ಶಸ್ತ್ರಾಸ್ತ್ರಗಳು, ಆಯುಧಗಳು ಅಥವಾ ಮಿಲಿಟರಿ ಬಲವನ್ನು ಅವಲಂಬಿಸಲೇಬೇಕಾಗುತ್ತದೆ. ಬೇರೊಂದು ದಿನ, ಮಾನ್ಯ ಸದಸ್ಯರೊಬ್ಬರು ಕೇಳಿದ ಪ್ರಶ್ನೆಗೆ ಆವೇಶದಿಂದ ಉತ್ತರಿಸುತ್ತ ಪ್ರಧಾನ ಮಂತ್ರಿಗಳು, ರಕ್ಷಣಾ ವೆಚ್ಚವನ್ನು ತಗ್ಗಿಸುತ್ತಿರುವುದಾಗಿ ಹೇಳಿದಾಗ ನಾನು ಗಲಿಬಿಲಿಗೊಂಡೆ. ಆ ವಿಷಯದ ಬಗ್ಗೆ ವಿವರವಾದ ಚರ್ಚೆ ಆಗಿಲ್ಲ. ರಕ್ಷಣಾ ವೆಚ್ಚದಲ್ಲಿ ಖೋತ ಮಾಡುವುದೆಂದರೆ ಭಾರತದ ಮಿಲಿಟರಿ ಶಕ್ತಿಯನ್ನು ದುರ್ಬಲಗೊಳಿಸಿದಂತೆಯೇ, ಹಾಗೆ ಮಾಡಿದ್ದೇ ಆದರೆ, ಭಾರತದ ಮಿಲಿಟರಿ ಶಕ್ತಿಯನ್ನು ದುರ್ಬಲಗೊಳಿಸಿದಂತೆಯೇ, ಹಾಗೆ ಮಾಡಿದ್ದೇ ಆದರೆ, ಭಾರತ ಸರ್ಕಾರವು ಭಾರತಕ್ಕೆ ತುಂಬಾ ಅಪಕಾರ ಮಾಡಿದಂತಾಗುತ್ತದೆಂದು ನಾನು ಹೇಳುತ್ತೇನೆ. ಇಂದು, ಆಗಲೇಬೇಕಾದ ಎರಡು ಕಾರ್ಯಗಳಿವೆ. ನಾವು ನಮ್ಮ ಮಿಲಿಟರಿ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಒಂಟಿಯಾಗಿ ಸಾಧ್ಯವಾಗದಿದ್ದರೆ, ರಕ್ಷಣೆ ವಿಷಯದಲ್ಲಿ ಸಮಾನ ಅಭಿಪ್ರಾಯ ಹೊಂದಿರುವ ಒಂದು ಸಮಾನವೇದಿಕೆಯನ್ನುಳ್ಳ ಇತರರ ಸಹ - ಭಾಗಿತ್ವದೊಂದಿಗೆ ನಾವು ನಮ್ಮ ಮಿಲಿಟರಿ ಶಕ್ತಿಯನ್ನು ಸಮರ್ಥವಾಗಿ ಬೆಳೆಸಬೇಕಾಗಿದೆ. ನಂತರ ನಾವು ನಮ್ಮ ಅಂತರಿಕ ಶಕ್ತಿಯನ್ನು, ಶಾಂತಿಯನ್ನು ಬಲಪಡಿಸಕೊಳ್ಳಬೇಕಾಗಿದೆ. ಆರ್ಥಿಕ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕಾಗಿದೆ. ಈ ಎಲ್ಲವನ್ನೂ ನಾವು ನಮ್ಮ ಸ್ವಂತ ಪ್ರಯತ್ನದಿಂದ, ಇತರರ ಸಹಾಯದಿಂದ ಸಾಧಿಸಬೇಕಾಗಿದೆ. ಹಾಗೆ ಮಾಡಿದ್ದಾದರೆ, ರಾಷ್ಟ್ರೀಯವಾಗಿ ಹಾಗೂ ಅಂತರ ರಾಷ್ಟ್ರೀಯ ದೃಷ್ಟಿಯಲ್ಲಿ ಆ ಒಗ್ಗಟ್ಟನ್ನು ಹಾಗೂ ಸ್ಥಿರತೆಯನ್ನು ನಾವು ಸಾಧಿಸಿದಂತಾಗುತ್ತದೆ.

## ಪ್ರತಿಬಂಧಕ ಸ್ಥಾನಬದ್ಧತೆ *

ಕಳೆದ ವರ್ಷ, (ಪ್ರತಿಬಂಧಕ ಸ್ಥಾನ ಬದ್ಧತೆ) ಮೂಲ ವಿಧೇಯಕವನ್ನು ಕಾನೂನಾಗಿ ಅಂಗೀಕರಿಸಿದಾಗ ನಾನು ಸರ್ಕಾರದಲ್ಲಿ ಮಂತ್ರಿ ಮಂಡಲದಲ್ಲಿದೆ. ಅಂಥದೊಂದು ಉಗ್ರ ವಿಧೇಯಕವನ್ನು ಈ ಸದನದ ಮುಂದೆ ತರಲು ಸರ್ಕಾರಕ್ಕೆ ಅನುವು ಮಾಡಿಕೊಟ್ಟಿದ್ದ ಎಲ್ಲ ಸನ್ನಿವೇಶಗಳು ನನಗೆ ಚನ್ನಾಗಿ ಗೊತ್ತಿವೆ. ಅದರಲ್ಲೂ ಈ ಕಾಯ್ದೆಯು, ನನ್ನ ಪ್ರಾಂತ್ಯದಲ್ಲಷ್ಟೇ ಅಲ್ಲ, ಇಡೀ ಭಾರತದಲ್ಲಿ ಹೇಗೆ ಅನುಷ್ಠಾನಗೊಳ್ಳುತ್ತಿದೆ ಎಂಬ ಬಗ್ಗೆ ಹಲವಾರು ವಿದ್ಯಮಾನಗಳು ಸಹ ಕಳೆದು ಹತ್ತು ತಿಂಗಳಲ್ಲಿ ನನ್ನ ಗಮನಕ್ಕೆ ಬಂದಿವೆ. ಈ ಎಲ್ಲವನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಈ ಸಮಸ್ಯೆ ಬಗ್ಗೆ ಮಾತನಾಡ ಬಯಸುತ್ತೇನೆ.

ಈ ವಿಷಯವನ್ನು ನಾವು ಹಗುರವಾಗಿ ತೆಗೆದುಕೊಳ್ಳುವಂತಿಲ್ಲ. ಈ ನಿಲುವಳಿಯನ್ನು ದುಃಖತಪ್ತನಾಗಿ ಮಂಡಿಸಿದ್ದೇನೆಂದು ಗೃಹಮಂತ್ರಿಯವರೇ ಸ್ವತಃ ತಮ್ಮ ಭಾಷಣದ ಪ್ರಾರಂಭದಲ್ಲೇ ಹೇಳಿದ್ದಾರೆ. ವಿಚಾರಣೆ ಮಾಡದಯೇ ನಾಗರೀಕರನ್ನು ಸ್ಥಾನಬದ್ಧತೆಯಲ್ಲಿಡುವ ಯಾವುದೇ ವಿಧಿಯನ್ನು ಯಾರೂ ಒಪ್ಪುವುದಿಲ್ಲ. ಅದರಲ್ಲೂ ಮುಖ್ಯವಾಗಿ ಶಕ್ತಿಯ ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ, ವಿಚಾರಣೆ ಆಗದೆಯೇ ಸ್ಥಾನಬದ್ಧತೆಗೆ ಒಳಗಾಗಿದ್ದ ಈ ಸದನದ ಅನೇಕ ಸನ್ಮಾನ್ಯ ಸದಸ್ಯರುಗಳೂ ಒಪ್ಪುವುದಿಲ್ಲ. ಹಿಂದಿನ ಪ್ರಭುತ್ವವಿದ್ದ ಕಾಲದಲ್ಲಿ ಹೊರಗಿನ ಅನೇಕರೂ ಈ ರೀತಿಯಲ್ಲಿ ಸ್ಥಾನಬದ್ಧತೆಗೆ ಒಳಗಾಗಿದ್ದಾರೆಂಬುದು ನನಗೆ ಗೊತ್ತಿದೆ. ಹಿಂದಿನ ಪ್ರಭುತ್ವದಿಂದ, ವಿಚಾರಣೆಗೆ ಒಳಪಡಿಸದೆಯೇ ಸ್ಥಾನಬದ್ಧತೆಯಲ್ಲಿದ್ದಂಥ ಜನರೇ ಮತ್ತು ಅಂಥ ಕ್ರಮಗಳನ್ನು ಉಗ್ರವಾಗಿ ಹಾಗೂ ನಿಷ್ಠುರವಾಗಿ ವಿರೋಧಿಸಿದಂಥ ಜನರೇ ಇಂದು ಈ ಬಗೆಯ ಕ್ರಮವನ್ನು ಕಾನೂನಾಗಿ ತರುವುದು ಅಗತ್ಯವೆಂದು ಭಾವಿಸಿರುವ ಸಂಗತಿ, ಹೊರಗಿನ ಜನರಿಗೆ - ಕೇಡುಂಟು ಮಾಡಬಯಸುವ ಜನರಲ್ಲ - ಸರ್ಕಾರವು ಬಲವಾದೊಂದು ನೀತಿಯನ್ನು ತರಬೇಕೆಂದು ಬೆಂಬಲಿಸುತ್ತಿರುವ ಹೊರಗಿನ ಅನೇಕ ಜನರಿಗೆ ತಬ್ಬಿಬ್ಬು ಉಂಟು ಮಾಡಿದೆ. ರೌಲಟ್ ವಿಧೇಯಕ ಬಂದಾಗಿ ಎದ್ದಿದ್ದ ಚಳುವಳಿ ನಮ್ಮ ಈ ವಿಶಾಲ ದೇಶದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ವ್ಯಾಪಿಸಿ ಜಾಗೃತಿ ಮೂಡಿಸಿದ್ದನ್ನು ಯಾವ ಭಾರತೀಯ ಮರೆಯುತ್ತಾನೆ? ವಿಚಾರಣೆ ಮಾಡದೆಯೇ ಸ್ಥಾನಬದ್ಧತೆಯಲ್ಲಿಡುವ ನೀತಿಯ ವಿರುದ್ಧ ಗಾಂಧೀಜಿಯವರ ಕರೆಗೆ ಓಗೊಟ್ಟು ನಡೆದ ರಾಷ್ಟ್ರ ವ್ಯಾಪ್ತಿ ಪ್ರತಿಭಟನೆಯ ಪರಿಣಾಮಗಳಲ್ಲಿ ಜಲಿಯನ್ ವಾಲಾಭಾಗ್ ಹತ್ಯಾಕಾಂಡವೂ ಒಂದು ಎಂಬುದನ್ನು ಯಾರು ಮರೆಯುತ್ತಾರೆ ?

---

* ಸಂಸಧೀಯ ಚರ್ಚೆಗಳು. 13ನೇ ಫೆಬ್ರವರಿ 1951 ಕಾಲಂಗಳು. 2782-2805

ಜನರು ಅದರಲ್ಲೂ ಇಡೀ ದೇಶದ ಪ್ರಮುಖ ಹಿತದೃಷ್ಟಿಗೆ ವಿರುದ್ಧವಾದ ರೀತಿಯಲ್ಲಿ ವರ್ತಿಸುವ ಜನರು ಇಂದು ಈ ದೇಶದಲ್ಲಿ ಇದ್ದಾರೆಂದು ನಮಗೆ ಕಂಡುಬಂದರೆ ಅಂಥವರಿಗೆ ಬುದ್ಧಿ ಕಲಿಸುವ ಉದ್ದೇಶಕ್ಕಾಗಿ ನಾವು ಯಾವ ನಿರ್ಬಂಧ ಕ್ರಮಗಳನ್ನು ಅಳವಡಿಸಿಕೊಳ್ಳ ಬೇಕೆಂಬುದನ್ನು ನಾವು ಪರಿಶೀಲಿಸಬೇಕಾಗುತ್ತದೆ. ಸರ್ದಾರ್ ಪಟೇಲರು, ವಿಧೇಯಕವನ್ನು ಮಂಡಿಸಿದಾಗ, ಅದರ ಬಗ್ಗೆ ಅವರಿಗೇ ಸಮಾಧನ ಇರಲಿಲ್ಲ ಎಂದು ತಿಳಿದು ಬಂದಿದೆ. ತನಗೇ ಒಪ್ಪಿಗೆಯಾಗದ, ಆದರೆ ಗೃಹ ಮಂತ್ರಿಯಾಗಿ, ಅನುಮೋದನೆಗೆ ಸಂಸತ್ತಿನ ಮುಂದೆ ಅಂಥದೊಂದು ಉಗ್ರನಿಯಮವನ್ನು ಮಂಡಿಸಬೇಕಾದ ತನ್ನ ಸ್ಥಿತಿಯನ್ನು ನೆನೆದು ತನಗೆ ಎಷ್ಟೋ ದಿನಗಳು ರಾತ್ರಿ ನಿದ್ರೆಯೇ ಬರಲಿಲ್ಲ ಎಂಬುದನ್ನು ಅವರೇ ವ್ಯಥೆಯಿಂದ ಹೇಳಿಕೊಂಡಿದ್ದೂ ನನಗೆ ನೆನಪಿದೆ. ಆಗ ಸಂಸತ್ತಿನ ಮುಂದೆ ತರಾತುರಿಯಿಂದ ಏಕೆ ಅದನ್ನು ಮಂಡಿಸಲಾಗಿತ್ತು ಎಂಬುದಕ್ಕೆ ಕಾರಣಗಳಿದ್ದರೂ - ಕಾರಣಗಳನ್ನು ಪುನಃ ಹೇಳಿರುವುದರಿಂದ ನಾನು ಅವುಗಳನ್ನೇ ಪುನಃ ಹೇಳಬಯಸುವುದಿಲ್ಲ - ಸಾಧ್ಯವಾದಷ್ಟು ಬೇಗನೆ ಎಲ್ಲ ರೀತಿಯಿಂದಲೂ ಸರಿಯಾಗಿರುವ ಒಂದು ಒಳ್ಳೆಯ ವಿಧೇಯಕವನ್ನು ಸಂಸತ್ತಿನ ಮುಂದೆ ತರುವುದಾಗಿ ಅವರು ಆಶ್ವಾಸನೆ ಕೊಟ್ಟಿದ್ದರು. ಸರ್ಕಾರವನ್ನು ನಾವೆಷ್ಟೇ ಟೀಕಿಸಿದರೂ ತಿದ್ದುಪಡಿ ವಿಧೇಯಕವು ಬಹಳ ಪ್ರಮುಖ ಬದಲಾವಣೆಗಳನ್ನು ತರುತ್ತದೆಂದು - ಒಳ್ಳೆಯ ಸುಧಾರಣೆಯತ್ತು ಬೆಳವಣಿಗೆಗಳು - ನಾವು ಒಪ್ಪಿಕೊಳ್ಳೋಣ. ಸಲಹಾ ಮಂಡಳಿಯು ಎಲ್ಲ ಪ್ರಕರಣಗಳನ್ನು ನಿಭಾಯಿಸಲು ಈಗ ಸಮರ್ಥವಾಗಿದೆ. ಮೂರು ತಿಂಗಳಿಗೂ ಕಡಿಮೆ ಅವಧಿಗೆ ಸ್ಥಾನಬದ್ಧತೆಯಲ್ಲಿರುವ ವ್ಯಕ್ತಿಗಳ ಪ್ರಕರಣಗಳಿಗೆ ಈ ವಿಧಿ ಅನ್ವಯವಾಗುತ್ತದೆಯೇ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತಿಲ್ಲ.

ಮೂರು ತಿಂಗಳಿಗೂ ಕಡಿಮೆ ಅವಧಿಗೆ ಸ್ಥಾನಬದ್ಧತೆಯಲ್ಲಿರುವ ವ್ಯಕ್ತಿಗಳ ಎಲ್ಲ ಪ್ರಕರಣಗಳೂ ಸಲಹಾ ಮಂಡಳಿಯ ವ್ಯಾಪ್ತಿಗೆ ಬರುತ್ತವೆ, ತುಂಬಾ ಸಂತೋಷ. ಈ ವಿಧಿಯ ಮಹತ್ವವನ್ನು ನಾವು ಕಡೆಗಣಿಸಬಾರದು, ಸಂವಿಧಾನದ ಪ್ರಕಾರ, ಮೂರು ತಿಂಗಳಿಗೂ ಕಡಿಮೆ ಅವಧಿಗೆ ಸ್ಥಾನಬದ್ಧತೆಯಲ್ಲಿರುವ ವ್ಯಕ್ತಿಗಳ ಪ್ರಕರಣವನ್ನು ಸಲಹಾ ಮಂಡಲಿಯ ಮುಂದೆ ಸರ್ಕಾರ ಇಡುವುದು ಅವಶ್ಯಕವೇನಲ್ಲ. ಆದ್ದರಿಂದ ಇದು ನಿಸ್ಸಂದೇಹವಾಗಿಯೂ ಆರೋಗ್ಯಕರ ಬದಲಾವಣೆ.

ಪೆರೋಲ್ ಮೇಲೆ ಬಿಡುಗಡೆಗೆ ತಂದಿರುವ ವಿಧಿಯನ್ನು ನಾವು ಗಮನಿಸಿದ್ದೇವೆ. ಏಕೆಂದರೆ, ಹಿಂದೆ ಅಂಥದೊಂದು ವಿಧಿ ಇಲ್ಲದ್ದರಿಂದ, ನೋವು ಅನುಭವಿಸಿದಂತಹ ಹಲವಾರು ಪ್ರಕರಣಗಳು ನಮಗೆ ಗೊತ್ತಿದೆ. ಸರ್ಕಾರವು ಮಾಡಿರುವ ಬದಲಾವಣೆಗಳಿಗಾಗಿ ಸರ್ಕಾರವನ್ನು ನಾನು ಅಭಿನಂದಿಸುತ್ತೇನೆ.

ಬ್ರಿಟಿಷ್ ಆಳ್ವಿಕೆಯನ್ನು ಕಿತ್ತೊಗೆದ ಪರಿಣಾಮವಾಗಿ ಈ ದೇಶದಲ್ಲಿ ಆಡಳಿತ ವ್ಯವಸ್ಥೆಯಲ್ಲಿ ಪರಿವರ್ತನೆ ಆಗಿದೆಯೆಂದು ಮಾತನಾಡಿದವರಲ್ಲಿ ಹಲವರು ಹೇಳಿದ್ದಾರೆ. ಆದ್ದರಿಂದ, ಅಂಥ ನಿಯಮಗಳನ್ನು ಕಾನೂನಾಗಿ ತರುವುದಕ್ಕೆ ಹಿಂದಿನ ಆಳ್ವಿಕೆಯಲ್ಲಿ ಜನ ವಿರೋಧಿಸಿದ್ದರಬಹುದಾದರೂ ಈಗ ಅವೇ ಆಕ್ಷೇಪಣೆಗಳನ್ನೆತ್ತಬಾರದು. ಏಕೆಂದರೆ ಇಂದು ಜನರ ಪ್ರತಿನಿಧಿಗಳು ಸರ್ಕಾರದ ಆಡಳಿತದ ಭಾರ ಹೊತ್ತಿದ್ದಾರೆ.

ಇದೇ, ಜವಾಬ್ದಾರಿ ಹೊತ್ತಿರುವ ಅನೇಕ ಜನರ ಚಿಂತನೆಯ ಧಾಟಿ, ವಾದದ ಧಾಟಿ, ಸಮಸ್ಯೆಗೆ ಇದೇ ಸರಿಯಾದ ದೃಷ್ಟಿಕೋನ ಎಂದು ನನಗನ್ನಿಸುವುದಿಲ್ಲ. ಬಿಳಿಯರ ಬಿಗಿ ಮುಷ್ಟಿಯಲ್ಲಿ ನಮ್ಮ ದೇಶ ಇದ್ದಾಗ ನಮ್ಮ ಕೈ ಕಟ್ಟಿತ್ತು ಎನ್ನುವುದಂತು ನಿಜ. ಕೆಲವೊಂದು ವಿದ್ಯಮಾನಗಳು ಆ ದಿನಗಳಲ್ಲಿ ನಿಜವಾಗಿಯೂ ಅಹಿತಕರವಾಗಿದ್ದವು, ಆ ಕೆಲವೊಂದು ಕೃತ್ಯಗಳನ್ನೆಸಗಿದವರು ಕಪ್ಪು ಜನರಾದ್ದರಿಂದ, ಇಲ್ಲವೆ ಕಂದುಬಣ್ಣದವರಾಗಿದ್ದರಿಂದ ಅವು ಒಳ್ಳೆಯದಾಗಿ ಕಾಣಲಿಲ್ಲ. ಅಥವಾ ಸಹಿಸಿಕೊಳ್ಳಲಾಗಲಿಲ್ಲ. ಸ್ವಾತಂತ್ರ್ಯ ಮತ್ತು ಪ್ರಜಾಸ್ವಾತಂತ್ರ್ಯದ ತವರೂರುಗಳಾದ ಇತರ ದೇಶಗಳಲ್ಲಾಗುತ್ತಿರುವ ವಿದ್ಯಮಾನಗಳನ್ನು ನಾವು ನೋಡಿದರೆ, - ಅದರಲ್ಲೂ ಇಂಗ್ಲೆಂಡ್ ಹಾಗೂ ಅಮೆರಿಕಾಗಳನ್ನು ನಾನು ಉಲ್ಲೇಖಿಸುತ್ತೇನೆ - ಆ ದೇಶಗಳ ಆಗುಹೋಗುಗಳನ್ನು ಯಾವ ವಿದೇಶಿ ಪ್ರಭುತ್ವವೂ ನಿಯಂತ್ರಿಸುತ್ತಿರಲಿಲ್ಲ - ವಿಚಾರಣೆ ಮಾಡದೆಯೇ ಸ್ಥಾನ ಬದ್ಧತೆಯಲ್ಲಿಡಲು ಕಾರ್ಯಕಾರಿ ಹಾಗೂ ನಿರಂಕುಶ ಅಧಿಕಾರಗಳನ್ನು ನಿಹಿತಗೊಳಿಸುವುದಕ್ಕೆ ಆ ದೇಶಗಳ ಜನರು ಮತ್ತು ಆ ದೇಶಗಳ ಸಂಸತ್ತಿನಲ್ಲಿನ ಹಾಗೂ ಶಾಸನ ಸಭೆಗಳಲ್ಲಿನ ಜನರ ಪ್ರತಿನಿಧಿಗಳು ಹೇಗೆ ಪ್ರತಿಭಟಿಸಿದ್ದರು ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಇಂಗ್ಲೆಂಡಿನಲ್ಲಿ ಯುದ್ಧದ ಸಮಯದಲ್ಲಿ, ಎಲ್ಲ ಹಕ್ಕುಗಳನ್ನು ಮತ್ತು ಹೇಬಿಯಸ್ ಕಾರ್ಪಸ್ ಅರ್ಜಿ ಸಲ್ಲಿಸುವ ಹಕ್ಕಿನಂಥ ವಿಶೇಷ ಸವಲತ್ತುಗಳನ್ನು ಸ್ಥಗಿತಗೊಳಿಸಲಾಗಿತ್ತು. ವ್ಯಕ್ತಿ ಸ್ವಾತಂತ್ರ್ಯದ ಹರಿಕಾರರಲ್ಲಿ ಒಬ್ಬರೆಂದೇ ಭಾವಿಸಲಾಗಿದ್ದ ಗಣ್ಯ ಬ್ರಿಟಿಷ್ ನ್ಯಾಯಾಧೀಶರೊಬ್ಬರು ಯುದ್ಧವು ಮ್ಯಾಗ್ನಕಾರ್ಟ ತತ್ವಗಳ ಪ್ರಕಾರ ಕೈಗೊಳ್ಳುವಂಥದ್ದಲ್ಲ ಎಂದು ಅಭಿಪ್ರಾಯಪಟ್ಟಿದ್ದರು. ಏಕೆಂದರೆ, ತುರ್ತು ಪರಿಸ್ಥಿತಿ ಕಾಲದಲ್ಲಿ ಅದರಲ್ಲೂ ಯುದ್ಧದ ಸಮಯದಲ್ಲಿ ಇಂಗ್ಲೆಂಡ್ ನಾಗರಿಕರ ಜನ್ಮಸಿದ್ಧ ಹಕ್ಕುಗಳಾದ ಆ ಮಹತ್ವದ ಸವಲತ್ತುಗಳನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಬೇಕೆಂಬುದು ಆಗ ಇದ್ದಂತಹ ಸಮರ್ಥನೆ ಸ್ಥಾನಬದ್ಧತೆಯಲ್ಲಿಡುವ ಅಧಿಕಾರಗಳನ್ನು ಚಲಾಯಿಸಬೇಕಾಗಿ ಬಂದಾಗಲೆಲ್ಲಾ ಗೃಹ ಮಂತ್ರಿಯವರೇ ಸ್ವತಃ - ಗೃಹ ಕಾರ್ಯದರ್ಶಿಯವರೂ ಸಹ - ಚಲಾಯಿಸ ಬೇಕಾಗುತ್ತದೆಯೇ ಹೊರತು ಬೇರಾರೂ ಅಲ್ಲ ಎನ್ನುವ ಅತಿ ಮಹತ್ವದ ವಿಧಿಯನ್ನು ಇಲ್ಲಿ ಈಗ ಸೇರಿಸಲಾಗಿದೆ. ಸಾರ್ವಜನಿಕ ಬಿಕ್ಕಟ್ಟು ಉದ್ಭವವಾದಾಗ ಸ್ಥಾನಬದ್ಧತೆ ಪ್ರಕರಣಗಳಿಗೆ ಸಮರ್ಥನೆ ಒದಗಿಸುವಂತೆ ಅವರನ್ನು ಕೇಳಲಾಗುತ್ತದೆ ಎಂಬುದು ಸದನಕ್ಕೆ ಗೊತ್ತಿದೆ. ಸಲಹಾ ಸಮಿತಿಗಳ ರಚನೆಗೆ ವಿಧಿಯನ್ನು ಸೇರಿಸಿದೆ. ಸಲಹಾ ಸಮಿತಿಯ ಮುಂದೆ,

ಲಭ್ಯವಿರುವ ಎಲ್ಲ ಸಾಮಗ್ರಿಗಳನ್ನು ಮಂಡಿಸಲು ತಾನು ಸಿದ್ಧವಿರುವುದಾಗಿ ಗೃಹ ಕಾರ್ಯದರ್ಶಿಯವರು ಹಲವಾರು ಸಂದರ್ಭಗಳಲ್ಲಿ ಹೇಳಿದ್ದಾರೆ. ಸ್ಥಾನಬದ್ಧತೆ ಗೊಳಗಾದ ವ್ಯಕ್ತಿಯು ಸಲಹಾ ಸಮಿತಿಯ ಮುಂದೆ ಹಾಜರಾಗಿ ತನ್ನ ಅಹವಾಲುಗಳನ್ನು ಹೇಳಿಕೊಳ್ಳಲು ಅವಕಾಶ ಕೊಟ್ಟಿದ್ದಾರೆ. ಅಮೆರಿಕಾದಲ್ಲೂ ಸಹ ತುರ್ತು ಪರಿಸ್ಥಿತಿ ಕಾಲದಲ್ಲಿ ವಿಚಾರಣೆ ಮಾಡದೆಯೇ ಸ್ಥಾನಬದ್ಧತೆಯಲ್ಲಿಡಲಾಗುತ್ತಿದೆ. ಆದರೆ, ಅಮೆರಿಕಾ ಸುಪ್ರೀಂ ಕೋರ್ಟಿನ ಹಲವಾರು ಗಣ್ಯ ನ್ಯಾಯಾಧೀಶರು ಹಾಗೂ ಅಮೆರಿಕಾ ಸಾರ್ವಜನಿಕ ಅಭಿಪ್ರಾಯದ ವಕ್ತಾರರೂ ಸಹ ಸ್ಥಾನಬದ್ಧತೆಯು ಒಂದು ಪ್ರತಿಬಂಧಕ ಕ್ರಮವಾಗಬೇಕೇ ಹೊರತು ಶಿಕ್ಷೆಯ ಕ್ರಮವಾಗಬಾರದೆಂದು ಹೇಳಿದ್ದಾರೆ. ಒಬ್ಬ ನ್ಯಾಯಾಧೀಶರಂತೂ ಒಂದು ದೃಷ್ಟಾಂತವನ್ನೇ ಕೊಟ್ಟಿದ್ದಾರೆ. ಕೆಲ ಜನರು ರೈಲ್ವೆ ಹಳಿಗಳನ್ನು ತೆಗೆದು ವಿಧ್ವಂಸಕ ಕೃತ್ಯ ಮಾಡಬಯಸಿದರೆ, ಆಗ ನೀವು ಆ ವಿಷಯವನ್ನು ನ್ಯಾಯಾಲಯದ ಮುಂದೆ ತರುವವರೆಗೂ ಕಾಯಬೇಕಾಗಿಲ್ಲ. ಅಂತಹ ಮನುಷ್ಯನನ್ನು ಬಂಧಿಸಿ ಸ್ಥಾನ ಬದ್ಧತೆಯಲ್ಲಿಡಬೇಕು : ಆನಂತರ, ಸಾಧ್ಯವಾದಷ್ಟು ಬೇಗನೆ ಆ ಸಂಗತಿಯನ್ನು ಮೂರನೇ ವೇದಿಕೆಯ ಮುಂದೆ ಮಂಡಿಸಬೇಕು ಎಂದು ಹೇಳಿದ್ದಾರೆ. ಮೂರನೇ ವೇದಿಕೆಗೆ ಉಲ್ಲೇಖ ಮಾಡುವ ತತ್ವ ಇಲ್ಲಿ ಅತಿ ಮುಖ್ಯವಾದುದು. ಏಕೆಂದರೆ, ನಾವಿಲ್ಲಿ ಚರ್ಚಿಸುತ್ತಿರುವ ಪ್ರಕರಣಗಳ ಬಗ್ಗೆ ನಾವೇನು ಮಾಡಬೇಕೆಂದಿದ್ದೇವೆ ? ಪ್ರಾಸಿಕ್ಯೂಟರ್, ಆಪಾದಿತ ಹಾಗೂ ನ್ಯಾಯಾಧಿಶ ಅದದೇ ರಾಗ ಎಳೆಯುವಂತೆ ಹಾಗೂ ತಜ್ಞವೈದ್ಯ ಹಾಗು ಹಾಸ್ಯಗಾರ ಇಬ್ಬರನ್ನು ಒಂದೇ ಮಾಡ ಹೊರಟಿದ್ದೇವೆ. ಹಾಗಲ್ಲ, ಆದ್ದರಿಂದಲೇ, ಆ ದೇಶಗಳಲ್ಲಿ ಮೂರನೇ ವೇದಿಕೆ ಒಂದಿರಲೇಬೇಕೆಂದು ಬೇಡಿಕೆ ಬಂದಿದೆ. ಸನ್ನಿವೇಶಗಳು ಅಸಾಧಾರಣ ಸ್ವರೂಪದವಾಗಿದ್ದರೂ ಅದು ನ್ಯಾಯಾಲಯವೇ ಆಗಿರಬವೇಕೆಂದೇನೂ ಇಲ್ಲ. ಆದರೂ, ಕಾರ್ಯಾಂಗವು ಸೂಕ್ತವಾಗಿ ವರ್ತಿಸಿದೆಯೇ, ಇಲ್ಲವೇ ಎಂಬುದನ್ನು ಪರಿಶೀಲಿಸಲು ಮೂರನೇ ವೇದಿಕೆಯೊಂದು ಇರಬೇಕು ಮತ್ತು ನಿರ್ಧರಿಸಬೇಕು. ಅಂಗಾಲು ಮುರಿತದಿಂದ Xನು ನರಳುತ್ತಿದ್ದಾನೆಂದು ತನಗನ್ನಿಸಿದೆಯೆಂದು Y ಹೇಳಿದರೆ, ಅದನ್ನು Y ನೇ ಹೇಳಿದಂತಾಗುತ್ತದೆ. ಆದರೆ, ತನ್ನ ಅಂಗಾಲು ನಿಜವಾಗಿಯೂ ಮುರಿದಿದೆ ಎಂದು X ನೇ ಬಂದು ಹೇಳಬೇಕು ಎಂದು ಬ್ರಿಟಿಷ್ ಅಧಿಕಾರಿಯೊಬ್ಬರು ಮೊಕದ್ದಮೆಯೊಂದರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ, ಯಾರೋ ತಪ್ಪು ಮಾಡಿದ್ದಾರೆಂದು ಕಾರ್ಯಾಂಗವು ಹೇಳಿದರಷ್ಟೇ ಸಾಲದು. ಮನುಷ್ಯ ತಪ್ಪು ಮಾಡಿದ್ದಾನೆಯೇ, ಇಲ್ಲವೇ ಎಂಬುದನ್ನು ಒಂದು ಸ್ವತಂತ್ರ ವೇದಿಕೆಯು ಪರಿಶೀಲಿಸಲೇಬೇಕಾಗುತ್ತದೆ.

ಸನ್ಮಾನ್ಯ ಗೃಹಮಂತ್ರಿಯವರು ತಮ್ಮ ಭಾಷಣದಲ್ಲಿ ಹಲವಾರು ವ್ಯಕ್ತಿಗಳು ಸಹಿ ಮಾಡಿರುವ ಕೆಲವೊಂದು ದಾಖಲೆಯನ್ನು ಉಲ್ಲೇಖಿಸಿದ್ದಾರೆ. ಸಂಸತ್ತು ತಪ್ಪಿರಬಹುದಾದ ಬಗ್ಗೆ ಅಥವಾ ಅನ್ಯಾಥಾ ರೀತಿಯ ಬಗ್ಗೆ ಆ ದಾಖಲೆಯಲ್ಲಿ, ಕೆಲವೊಂದು ಅಭಿಪ್ರಾಯಗಳಿವೆ. ಅವುಗಳ ಬಗ್ಗೆ ಈಗ ನಾನು ಹೇಳ ಹೋಗುವುದಿಲ್ಲ. ಆ ದಾಖಲೆಯನ್ನು ನೀವೊಮ್ಮೆ

ನೋಡಿ, ಯಾರ್‍ಯಾರು ಅದಕ್ಕೆ ಸಹಿ ಹಾಕಿದ್ದಾರೆ ? ಆ ಎಲ್ಲ ಹೆಸರುಗಳನ್ನು ಗುರುತಿಸಿದ ಬಗ್ಗೆ ಸನ್ಮಾನ್ಯ ಮಂತ್ರಿಗಳು ಮಾತನಾಡುತ್ತಿರುವಾಗ ನನಗೆ ಕೇಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ, ಅದಕ್ಕೆ ಸಹಿ ಹಾಕಿರುವವರಲ್ಲಿ ಕೆಲವರು ಕಮ್ಯೂನಿಷ್ಟರಲ್ಲ. ಯಾವುದೇ ರೀತಿಯ ಹಿಂಸೆಯನ್ನು ಬೆಂಬಲಿಸುವವರೂ ಅಲ್ಲ. ರಾಜಕೀಯದಲ್ಲಿ ಯಾವುದೇ ಸಕ್ರಿಯ ಪಾತ್ರ ವಹಿಸದವರೂ ಕೆಲವರು ಅದಕ್ಕೆ ಸಹಿ ಹಾಕಿರಬಹುದು. ಅಂಥವರುಗಳೇ ಅದಕ್ಕೆ ಸಹಿ ಹಾಕಿರಬಹುದು. ಬಹುಷಃ, ಕಮ್ಯೂನಿಷ್ಟ್ ಸಂಘಟನೆಗಳೊಂದಿಗೆ ಭಾಗಿಯಾಗಿರುವರೂ ಅದಕ್ಕೆ ಸಹಿ ಹಾಕಿರಬಹುದು............

ಈ ಬಗೆಯ ಕ್ರಮ ತೆಗೆದುಕೊಳ್ಳುವುದನ್ನು ಮುಂದುವರಿಸುವುದಕ್ಕೆ ಈ ಮಹನೀಯರುಗಳು ಏಕೆ ಅಷ್ಟೊಂದು ಆತಂಕಪಟ್ಟುಕೊಳ್ಳುತ್ತಿದ್ದಾರೆ ? ನಿಂದನೆ ವಾತಾವರಣದಲ್ಲಿ ಚರ್ಚೆ ನಮಗೆ ಬೇಕಿಲ್ಲ. ಇದೊಂದು ತುಂಬಾ ಗುರುತರ ವಿಷಯ. ನ್ಯಾಯಿಕ ವಿಚಾರಣೆಗಳನ್ನು ಕೈಬಿಡಲು ಸಂಸತ್ತು ಕಾನೂನನ್ನು ತರಬಹುದೆಂದು ರಾಜ್ಯಾಂಗದಲ್ಲಿ ಹೇಳಿದೆ. ಪ್ರತಿಬಂಧಕ ಸ್ಥಾನಬದ್ಧತೆಗೆ ರಾಜ್ಯಾಂಗದಲ್ಲಿ ವಿಧಿ ಕಲ್ಪಿಸಲಾಗಿದೆ. ಈಗಿನ ಕಾಯ್ದೆಯನ್ನು ಮುಂದುವರಿಸಲು ಸರ್ಕಾರ ಈ ದಿನ ವಿಧೇಯಕವೊಂದನ್ನು ತಂದಿದೆ. ಆದ್ದರಿಂದ ನಾವು, ನಮ್ಮ ಟೀಕಾಕಾರರು ಹಾಗೂ ನಮ್ಮ ವಿರೋಧಿಗಳು ಇಂಥದೊಂದು ನಿಯಮವನ್ನು ಯಾವ ಪ್ರೇರಣೆಯಿಂದ ವಿರೋಧಿಸುತ್ತಿದ್ದಾರೆ. ಅವರಿಗಿರುವ ಭಯವಾದರೂ ಏನು ಎಂಬುದನ್ನು ಹೇಳುವಂತೆ ಅವರ ಮನವೊಲಿಸೋಣ. ಸನ್ಮಾನ್ಯ ಗೃಹ ಮಂತ್ರಿಯವರು ನನಗೆ ತಿಳಿದಿರುವಂತೆ ಹುಟ್ಟು ಪ್ರಜಾಪ್ರಭುತ್ವವಾದಿ. ಅವರು ಜೀವನದಲ್ಲಿ ಅನೇಕ ಬಿರುಗಾಳಿಯನ್ನು ಎದುರಿಸಿದ್ದಾರೆ. ಎದುರಿಸಿದ್ದಷ್ಟೇ ಅಲ್ಲ, ಅವುಗಳನ್ನು ನಿಭಾಯಿಸಿಯೂ ಇದ್ದಾರೆ. ಆದರೆ, ಆ ದಿನ ಅವರು ಜನಸಾಮಾನ್ಯನ ಬುದ್ಧಿವಂತಿಕೆ ಬಗ್ಗೆ ಸಂಶಯಿಸಿದ್ದು ಅವರಿಂದಾದ ಒಂದು ಪ್ರಮಾದ. ಹಾಗಾಗಿ ನಿರಂಕುಶವಾದಿಗಳು ತಮ್ಮ ಸಂಶಯವನ್ನು ವ್ಯಕ್ತಪಡಿಸಿದರೇ ಹೊರತು ಪ್ರಜಾಪ್ರಭುತ್ವ ವಾದಿಗಳಲ್ಲ. ಸಂಪೂರ್ಣವಾದದ ಹಾಗೂ ನಿರಂಕುಶವಾದದ ಬೆಂಬಲಿಗರಲ್ಲಿ ಅನೇಕರು - ಅಂತಹವರ ಜೊತೆ ಶ್ರೀ ರಾಜಗೋಪಾಲಾಚಾರಿಯವರು ಇರಬಯಸುವುದಿಲ್ಲವೆಂದು ನನಗೆ ಗೊತ್ತಿದೆ - ಅದೇ ಧಾಟಿಯ ವಾದಕ್ಕಿಳಿದಿರುವುದು ನಿಜಕ್ಕೂ ಆಶ್ಚರ್ಯಕರ. ಅಂತಹವರಲ್ಲಿ ಕೆಲವರು ಕಳೆದು ಕೆಲವು ವರ್ಷಗಳ ಅವಧಿಯಲ್ಲಾದ ವಿಶ್ವವಿದ್ಯಮಾನಗಳ ಸುಳಿಯಲ್ಲಿ ಕೊಚ್ಚಿಹೋಗಿದ್ದಾರೆ. ನನ್ನ ಕೈಯಲ್ಲಿರುವ ಪುಸ್ತಕಗಳಿಂದ ಒಂದು ಅಥವಾ ಎರಡು ಸಾಲುಗಳನ್ನು ನಾನು ಓದಿ ಹೇಳಿದರೆ ಈಗ ತಾನೇ ಉದಯವಾಗಿರುವ ತಮ್ಮ ಗಣರಾಜ್ಯದ ನಾಗರೀಕರ ವೈಯುಕ್ತಿಕ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡುವ ಈ ಬಗೆಯ ನಿಯಮವೊಂದನ್ನು ತರಲು ನಾವು ಯಾವ ರೀತಿಯ ಮುಂಜಾಗ್ರತೆವಹಿಸಿದ್ದೇವೆ ಎಂಬ ಕಲ್ಪನೆ ನನಗೆ ಬರುತ್ತದೆ. ಈ ಪುಸ್ತಕವನ್ನು

"ಬರೆದವರು ಶ್ರೀ ಸಿ.ಕೆ. ಅಲೆನ್. ಅವರು ಕಮ್ಯುನಿಸ್ಟ್ ಲೇಖಕರಲ್ಲ. ಅವರು, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಜ್ಯುರಿಸ್ ಪ್ರುಡೆನ್ಸ್ ಪ್ರೊಫೆಸರ್, ಕಾನೂನು ಮತ್ತು ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳ ತಜ್ಞರೆಂದು ಅವರು ಹೆಸರುವಾಸಿಯಾಗಿದ್ದಾರೆ.

ವಿಶೇಷ ಕಾನೂನುಗಳನ್ನು ರೂಪಿಸುವ ಸನ್ನಿವೇಶಗಳು ಉದ್ಭವವಾಗಬಹುದೆಂಬ ಭಾವನೆಯಿಂದ ಈ ಸಾಮಾನ್ಯ ಅಂಶ ಕುರಿತಂತೆ ನಾನು ಮಾತನಾಡಿದೇನೆ. ನಾವು "ರೂಲ್ ಆಫ್ ಲಾ" ಗೆ ಬದ್ಧರಾಗಿದ್ದೇವೆ. ಅದೇ ನಮ್ಮ ರಾಜ್ಯಾಂಗದ ಜೀವಾಳ. ರೂಲ್ ಆಫ್ ಲಾ ವನ್ನು ನಾವು ತಿರುಚಿದ್ದೇವೆಂದು ನಮ್ಮ ಟೀಕಾಕಾರರು ಯಾರು ಹೇಳುತ್ತಿದ್ದಾರೋ ಅವರು ನಮ್ಮ ರಾಜ್ಯಾಂಗವನ್ನು ಓದಿಲ್ಲ. ತುರ್ತು ಪರಿಸ್ಥಿತಿ ಬಂದಾಗಲೆಲ್ಲಾ ವಿಶೇಷ ಶಾಸನವನ್ನು ರೂಪಿಸಲು ರಾಜ್ಯಾಂಗದಲ್ಲಿ ಸಂಸತ್ತಿಗೆ ಹೇರಳ ಅಧಿಕಾರ ಕೊಡಲು ನಾವು ವಿಧಿಗಳನ್ನು ಸೇರಿಸಿದ್ದೇವೆ ಎಂಬುದೇನೋ ನಿಜ. ಈ ಬಗೆಯ ವಿಶೇಷ ನಿಯಮವನ್ನು ಅಂಗೀಕರಿಸುವುದರ ಬದಲು ತುರ್ತು ಪರಿಸ್ಥಿತಿ ವಿಧಿಗಳ ಪ್ರಕಾರ ಕ್ರಮ ತೆಗೆದುಕೊಳ್ಳುವುದು ಒಳ್ಳೆಯದೆಂದು ಸಲಹೆ ಮಾಡಲಾಗಿದೆ. ಈಗ ಆ ಬಗ್ಗೆಯೂ ಹೇಳುತ್ತೇನೆ ಒಂದು ಸೀಮಿತ ಪ್ರದೇಶಕ್ಕೆ ನೀವು ತುರ್ತು ಪರಿಸ್ಥಿತಿಯನ್ನು ಘೋಷಿಸಿದರೆ ಹೈಕೋರ್ಟಿನ ಕೆಲಸ ಕಾರ್ಯಗಳ ಹೊರತು ರಾಜ್ಯಾಂಗದ ವಿಧಿಗಳೆಲ್ಲವನ್ನೂ ಸಂಪೂರ್ಣವಾಗಿ ಸ್ಥಗಿತಗೊಳಿಸಲಾಗುತ್ತದೆ ಎಂದರ್ಥ. ಇಡೀ ದೇಶದಲ್ಲಿ ಅಥವಾ ದೇಶದ ಯಾವುದೇ ಭಾಗದಲ್ಲಿ ನಿಜವಾಗಿಯೂ ತುರ್ತು ಪರಿಸ್ಥಿತಿ ಇರದಿದ್ದರೆ ಅಂತಹದೊಂದು ವಿಧಿಯ ಬಳಕೆಗೆ ಖಂಡಿತವಾಗಿಯು ನಾನು ಒಪ್ಪುವುದಿಲ್ಲ, ಈ ವಿಧೇಯಕವು ಸೀಮಿತ ಸ್ವರೂಪದ್ದು. ಯಾವುದೇ ನಿರ್ದಿಷ್ಟ ಪ್ರದೇಶಕ್ಕಾಗಲಿ ಅಥವಾ ಅಲ್ಲಿ ವಾಸವಾಗಿರುವ ಎಲ್ಲ ಜನರಿಗಾಗಲಿ ಇದು ಅನ್ವಯವಾಗುವುದಿಲ್ಲ. ಕೆಲವೊಂದು ವರ್ಗಗಳ ಅಪರಾಧಗಳಿಗೆ ಹಾಗೂ ವ್ಯಕ್ತಿಗಳಿಗೆ ಮಾತ್ರವೇ ಇದು ಅನ್ವಯವಾಗುತ್ತದೆ.

ನನ್ನ ಮನಸ್ಸಿನಲ್ಲಿದ್ದ ಈ ಅಭಿಪ್ರಾಯಗಳನ್ನು ಹೇಳಿ ಈಗ ನಾನು ಈಗಿನ ಕಾಯಿದೆಯ 3ನೇ ಪ್ರಕರಣದ ಬಗ್ಗೆ ಸ್ವಲ್ಪ ಮಾತನಾಡುತ್ತೇನೆ ಮತ್ತು ಗೃಹಮಂತ್ರಿಗಳಿಗೆ ಸಮಾಧಾನವಾಗಿದೆಯೇ ಎಂದು ಕೇಳುತ್ತೇನೆ. ಏಕೆಂದರೆ, ಅವರು ಅವರ ಟಿಪ್ಪಣಿಯಲ್ಲಿ ಈ ವಿಷಯವನ್ನು ತುಂಬಾ ಎಚ್ಚರಿಕೆಯಿಂದ ಪರಿಶೀಲಿಸಿದ್ದೇನೆಂದು ಹೇಳಿದ್ದಾರೆ. ಪ್ರಯುಕ್ತ 3ನೇ ಪ್ರಕರಣದಲ್ಲಿ ಹೇಳಿರುವ ಈ ಎಲ್ಲ ವರ್ಗಗಳ ಅಪರಾಧಗಳನ್ನು ಸೇರಿಸುವ ಅಗತ್ಯವಿದೆಯೆಂಬುದರ ಬಗ್ಗೆ ಅವರಿಗೆ ಸ್ವತಃ ಮನವರಿಕೆಯಾಗಿದೆಯೇ ಇಲ್ಲವೇ ಎಂಬ ಬಗ್ಗೆ ಈಗ ಅವರು ಹೇಳುತ್ತಾರೆಯೇ ? ಈಗ ನಾನು (ಎ) ಉಪವಿಧಿಯ ವ್ಯಾಪಕ ಸ್ವರೂಪದ ಬಗ್ಗೆ ಈ ಸದನದ ಗಮನ ಸೆಳೆಯಬಯಸುತ್ತೇನೆ. ಅದು "ಭಾರತದ ರಕ್ಷಣೆಗೆ; ವಿದೇಶಗಳೊಂದಿಗೆ ಭಾರತಕ್ಕೆ ಇರುವ ಸಂಬಂಧಗಳಿಗೆ ಅಥವಾ ಭಾರತದ ಭದ್ರತೆಗೆ, ಅಥವಾ ರಾಜ್ಯದ ಭದ್ರತೆಗೆ, ಅಥವಾ ಸಾರ್ವಜನಿಕ ಸುವ್ಯವಸ್ಥೆಯ ಪಾಲನೆಗೆ, ಅಥವಾ ಜನ ಸಮುದಾಯಕ್ಕೆ ಅವಶ್ಯಕವಾದ

ಸರಬರಾಜು ಹಾಗೂ ಸೇವೆಗಳ ನಿರ್ವಹಣೆಗೆ ಯಾವುದೇ ರೀತಿಯಲ್ಲಿ ಪ್ರತಿಕೂಲವಾಗಿ ವರ್ತಿಸುವ" ಎಂದಿದೆ. ವಿದೇಶಿಯನ್ನೊಬ್ಬನನ್ನು ಭಾರತದಿಂದ ನಾವು ಹೊರಹಾಕಬಯಸಿದರೆ ಅದಕ್ಕೂ ಸಂಬಂಧಿಸಿದ ಒಂದು ಉಪನಿಧಿ ಇದೆ. ನಾವು ಈ 3ನೇ ಪ್ರಕರಣವನ್ನು ಗಮನಿಸಿದರೆ ಅದರಲ್ಲಿ ಎಲ್ಲವೂ ಅಡಕವಾಗಿರುವುದು ನಮಗೆ ತಿಳಿದುಬರುತ್ತದೆ. ಹೊಸ ರಾಜ್ಯಾಂಗವನ್ನು ಜಾರಿಗೆ ತಂದ ಮೇಲೆ ನ್ಯಾಯಾಲಯಗಳು ನಾನಾ ರೀತಿಯ ವ್ಯಾಖ್ಯಾನ ಮಾಡುವ ಸಾಧ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅಂತಹದ್ದೊಂದು ವ್ಯಾಪಕ ವಿಧಿಯನ್ನು ತರುವುದು ಒಳ್ಳೆಯದೆಂದು, ಹಾಗೆ ಮಾಡಿದರೆ ನ್ಯಾಯಿಕ ತೀರ್ಪುಗಳ ಅನ್ವಯ ಜೈಲಿನಿಂದ ಬಿಡುಗಡೆಯಾಗುವ ವ್ಯಕ್ತಿಗಳು ಏನೇ ಕಾರಣಗಳನ್ನು ಹೇಳಿದರೂ, ಅದರಿಂದ ಯಾವುದೇ ತೊಂದರೆ ಉಂಟಾಗಲಾರದೆಂದು ಸರ್ದಾರ್ ಪಟೇಲರು ಕಳೆದ ವರ್ಷ ಈ ವಿಧೇಯಕವನ್ನು ಮಂಡಿಸಿದಾಗ ಹೇಳಿದ್ದರು. ಅದು ಹೋದ ವರ್ಷದಲ್ಲಿ ಮಂಡಿಸಿದ್ದ ವಾದ, 3ನೇ ಪ್ರಕರಣದ ಅಡಿಯಲ್ಲಿ ಎಷ್ಟು ಜನರನ್ನು ಸ್ಥಾನಬದ್ಧತೆಯಲ್ಲಿಡಲಾಗಿತ್ತು. 3ನೇ ಪ್ರಕರಣದ ಯಾವ ಭಾಗವನ್ನು ಅನ್ವಯಿಸಲಾಗಿತ್ತು ; ಎಷ್ಟು ಪ್ರಕರಣಗಳನ್ನು ಸಲಹಾ ಮಂಡಲಿಗೆ ಉಲ್ಲೇಖ ಮಾಡಲಾಗಿತ್ತು? ಸಲಹಾ ಮಂಡಲಿಗೆ ಉಲ್ಲೇಖ ಮಾಡಿರದಿದ್ದರೆ ಆ ಪ್ರಕಣಗಳ ಪರಶೀಲನೆಗಾಗಿ ಸರ್ಕಾರವು ಯಾವುದೇ ವಿಧಾನವನ್ನು ಅನುಸರಿಸಿತ್ತೇ ? ಕೊನೆಯದಾಗಿ, ನ್ಯಾಯಾಲಯದ ಆಜ್ಞೆಯಂತೆ ಎಷ್ಟು ಜನರನ್ನು ಬಿಡುಗಡೆ ಮಾಡಿಲಾಯಿತು? ಈ ಎಲ್ಲ ವಿವರಗಳನ್ನು ಸರ್ಕಾರವು ಸದನದಲ್ಲಿ ಮಂಡಿಸುವುದೆಂದು ನಿರೀಕ್ಷಿಸಲಾಗಿತ್ತು. ಕಾಯ್ದೆಯು ಜಾರಿಗೊಳ್ಳುತ್ತಿರುವುದರ ಬಗ್ಗೆ ನಮಗೆ ಅಂಥ ನಿರ್ದಿಷ್ಟ ಮಾಹಿತಿ ಇದ್ದಿದ್ದರೆ, ಆಗ ಮಾತ್ರ, 3ನೇ ಪ್ರಕರಣವನ್ನು ಮೂಲ ಕಾಯ್ದೆಯಲ್ಲಿದ್ದಂತೆಯೇ ಸರ್ಕಾರವು ಉಳಿಸಿಕೊಂಡಿರುವ ಕ್ರಮ ಸಮರ್ಥನೀಯವೇ ಎಂಬುದನ್ನು ನಾವು ನಿರ್ಧರಿಸುವುದಕ್ಕೆ ಸಾಧ್ಯವಾಗುತ್ತಿತ್ತು.

ಈಗ ವ್ಯಾಪಕ ಸ್ವರೂಪದ ಈ ನಿಯಮವನ್ನೇ ನೋಡೋಣ - ವಾಕ್ಯಗಳು ಹೀಗಿವೆ: "ವಿದೇಶಗಳೊಂದಿಗೆ ಭಾರತಕ್ಕಿರುವ ಸಂಬಂಧಗಳಿಗೆ ಯಾವುದೇ ರೀತಿಯಲ್ಲಿನು ಪ್ರತಿಕೂಲವಾಗಿ ವರ್ತಿಸುತ್ತಿದ್ದಾನೆಂದು ಸರ್ಕಾರಕ್ಕೆ ಮನವರಿಕೆಯಾದರೆ" - ನಾವು ಕೆಲವೊಂದು ಹೊರ ರಾಷ್ಟ್ರಗಳ ಬಗ್ಗೆ ಏನಾದರು ಮಾತನಾಡಿದರೆ, ಅವು ಪ್ರತಿಕೂಲ ಕೃತ್ಯವಾಗಿ ಬಿಡುತ್ತಿದ್ದವು ಉದಾಹರಣೆಗೆ, ನಿನ್ನೆ ದಿನ ಪ್ರಧಾನ ಮಂತ್ರಿಗಳು ಕಾಶ್ಮೀರಕ್ಕೆ ಸಂಬಂಧಿಸಿದಂತೆ ಮಾಡಿದ ಭಾಷಣವನ್ನೇ ತೆಗೆದುಕೊಳ್ಳೋಣ. ಅದು ಸರ್ಕಾರದ ಪರವಾಗಿ ವ್ಯಕ್ತವಾದ ಸುಸ್ಪಷ್ಟ ಹಾಗೂ ಪ್ರಬಲವಾದ ಅಭಿಪ್ರಾಯವೆಂದು ನಾವೆಲ್ಲಾ ಮೆಚ್ಚಿದ್ದೇವೆ. ಆ ರೀತಿ ಬೇರೆ ಯಾರಾದರೂ ಮಾತಾಡಿದ್ದರೆ, ಅದು ಪಾಕಿಸ್ತಾನದೊಂದಿಗಿನ ನಮ್ಮ ಸಂಬಂಧಕ್ಕೆ ಖಂಡಿತವಾಗಿಯೂ ಬಾಧಕವಾಗುತ್ತಿತ್ತು. ಪ್ರತಿಕೂಲ ಸ್ವರೂಪದ್ದೂ ಆಗುತ್ತಿತ್ತು. "ಸಾರ್ವಜನಿಕ ಸುವ್ಯವಸ್ಥೆ ಪಾಲನೆ" ವಾಕ್ಯವನ್ನೇ ತೆಗೆದುಕೊಳ್ಳಿ, ಹಿಂದೂ ಕೋಡ್‌ನ ಕರ್ತನನ್ನೇ ಸಾರ್ವಜನಿಕ ಸುವ್ಯವಸ್ಥೆಗೆ ಧಕ್ಕೆ

ಇರುವ ಏನನ್ನೋ ಮಾಡಿದ್ದಾನೆಂದು ಭಾವಿಸಬೇಕಾಗುತ್ತದೆ. ಏಕೆಂದರೆ ದೇಶದಲ್ಲಿ ಅದಕ್ಕೆ ತುಂಬಾ ವಿರೋಧ ಇದೆ.

ಈ ಕಾಯ್ದೆ ಏನು ಮಾಡಬಯಸಿದೆ? ಎಂಬ ಬಗ್ಗೆ ನಮ್ಮನ್ನು ನಾವೇ ತೀವ್ರವಾಗಿ ಕೇಳಿಕೊಳ್ಳೋಣ. ಪಂಡಿತ ಭಾರ್ಗವ ಹೇಳಿದಂತೆ, ಸಾರ್ವಜನಿಕ ಸುವ್ಯವಸ್ಥೆ ಪಾಲನೆ ವಿಷಯದಲ್ಲಿ ಯಾರಾದರೂ ಏನೋ ತಪ್ಪು ಮಾಡಿದರೆ ಆಗ ನೀವು ಅವನನ್ನು ಸ್ಥಾನ ಬದ್ಧತೆಯಲ್ಲಿಡಬಹುದು, ಆಗ, ನೀವು ಯಾರನ್ನಾದರೂ ಬಂಧಿಸಬಹುದು. ಆದರೆ, ಅಂಥ ಉದ್ದೇಶದಿಂದ ಖಂಡಿತವಾಗಿಯೂ ಈ ಕಾಯ್ದೆಯನ್ನು ರೂಪಿಸಿಲ್ಲ.

ಯಾರೇ ಆಗಲಿ, ಅಪರಾಧ ಮಾಡಿದರೆ, ಈಗಿನ ಕಾನೂನಿನ ಅಡಿಯಲ್ಲಿ ಅವನ ಮೇಲೆ ಕಾನೂನು ಕ್ರಮ ಜರುಗಿಸಿ, ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಪಡಿಸಿ, ಒಳ್ಳೆಯ ಮನುಷ್ಯ ಕೆಟ್ಟ ಕೆಲಸ ಮಾಡಿದರೆ, ಅವನ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಬಾರದು, ಎಂದು ಯಾರು ಹೇಳುವುದಿಲ್ಲ. ಮನುಷ್ಯ ಒಳ್ಳೆಯವನು ಅಥವಾ ಕೆಟ್ಟವನು ಎಂಬುದು ಇಲ್ಲಿ ಮುಖ್ಯವೇ ಅಲ್ಲ. ಯಾರೇ ವ್ಯಕ್ತಿ ಅಪರಾಧ ಮಾಡಿದರೆ, ಅಥವಾ ಅಪರಾಧ ಮಾಡಲು ಪ್ರಯತ್ನಿಸಿದರೆ, ಅಥವಾ ಅಪರಾಧ ಮಾಡಲು ಸಹಾಯ ಮಾಡಿದರೆ, ಕಾನೂನು ಇದ್ದೇ ಇದೆ. ನ್ಯಾಯಾಲಯಕ್ಕೆ ಹೋಗಲೇಬೇಕಾಗುತ್ತದೆ ಹಾಗೂ ವಿಚಾರಣೆಗೆ ಒಳಗಾಗಲೇ ಬೇಕಾಗುತ್ತದೆ. ಇವೇ ರಾಜ್ಯಾಂಗವು ನಮಗೆ ಕೊಟ್ಟಿರುವ ಹಕ್ಕುಗಳೆಂದು ನಾವಂದುಕೊಂಡಿದ್ದೇವೆ. ಯಾವುದೇ ನಾಗರಿಕ ದೇಶದಲ್ಲಿ ಯಾರೇ ನಾಗರೀಕರು ಇಂಥವೇ ಹಕ್ಕುಗಳಿಗೆ ಅರ್ಹರೆಂದು ನಾವು ಭಾವಿಸಿದ್ದೇವೆ. ಆದರೆ, ಈ ನಿವೇನು ಹೇಳುತ್ತಿದ್ದೀರೆಂದರೆ, ಸಮಾಜದ ಹಿತದೃಷ್ಟಿಗೆ ಮಾರಕವೆನಿಸುವ ಕೆಲವೊಂದು ಕೃತ್ಯಗಳನ್ನು ಮಾಡದಂತೆ ಕೆಲವರು ವ್ಯಕ್ತಿಗಳನ್ನು ನಿರ್ಬಂಧಿಸುವ ಸಲುವಾಗಿ ವಿಶೇಷ ಕಾನೂನು ಮಾಡಿ ನಾವು ನಿಮ್ಮ ಕೈ ಬಲಪಡಿಸಬೇಕೆಂದು ನೀವು ಬಯಸಿದ್ದೀರಿ. ಅಪಾಯ ಇರುವುದು ಇಲ್ಲೇ. ಯಾರೇ ವ್ಯಕ್ತಿ ಕಾಣುವಂತೆ ಕೆಲವೊಂದು ಕೃತ್ಯ ಮಾಡದ ಹೊರತು, ಅಥವಾ ಕೆಲವೊಂದು ಸಿದ್ಧತೆ ಮಾಡಿಕೊಳ್ಳವ ಹೊರತು ಅವನು ಇಂಥದ್ದನ್ನೇ ಮಾಡ ಹೊರಟಿದ್ದಾನೆಂಬುದು ನಿಮಗೆ ಹೇಗೆ ಗೊತ್ತಾಗುತ್ತದೆ? ಅವನ ಮನಸ್ಸಿನಲ್ಲೇನಿದೆ ಎಂಬುದು ನನಗೆ ಗೊತ್ತಿದೆ ಎಂದು ನೀವು ಹೇಳಿದರೆ, ನೀವು ಅವನ ಮನೋಸಾಮ್ರಾಜ್ಯದ - ಸಹಜದ್ದಿರಬಹುದು ಅಥವಾ ಅತಿರೇಕದ್ದಿರಬಹುದು - ಒಳಹೊಕ್ಕು ಬರಬೇಕಾಗುತ್ತದೆ. ನಾಗರೀಕರ ಪ್ರಾಣ ಹಾಗೂ ಸ್ವಾತಂತ್ರ್ಯದ ಹೊಣೆ ಹೊತ್ತಿರುವ ನೀವು ಸರ್ಕಾರವಾಗಿ ಕೆಲಸ ಮಾಡುವುದು ಸಾಧ್ಯವೇ ಇಲ್ಲ. ಗೂಢಚಾರರ ಹಾಗೂ ಮಾಹಿತಿದಾರರ ತಾಳ ಮೇಳ ಇಲ್ಲದ ಸುದ್ದಿಯ ಆಧಾರದ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುವುದು ಸರಿಯಲ್ಲ ಎಂಬುದು ಕಂಡು ಬರುವುದಿಲ್ಲವೇ ? ಯಾರೇ ವ್ಯಕ್ತಿಯನ್ನು ಬಂಧಿಸಬೇಕಾದರೆ, ಅವನನ್ನು ನ್ಯಾಯಾಲಯಕ್ಕೆ ತರಬೇಕು, ಅಂಥ ವ್ಯಕ್ತಿ ಬಗ್ಗೆ ಸಾದರಪಡಿಸಿದ ಪುರಾವೆಯನ್ನು

ನ್ಯಾಯಾಲಯ ಪರಿಶೀಲಿಸಬೇಕು, ಕಾನೂನಿಗೆ ಅನುಸಾರವಾದ ಸರಿಯಾದ, ಸೂಕ್ತವಾದ ತೀರ್ಮಾನ ಮಾಡಬೇಕೆಂಬ ಬೇಡಿಕೆ ಎಲ್ಲ ನಾಗರೀಕ ದೇಶಗಳಲ್ಲೂ ಇರುವುದಕ್ಕೆ ಇದೇ ಕಾರಣ. ನಿಮ್ಮ ಈಗಿನ ಕಾನೂನುಗಳಲ್ಲಿ ಲೋಪದೋಷಗಳಿವೆ, ಹಾಗಾಗಿ ದೇಶದಲ್ಲಿ ಅಪರಾಧಗಳಾಗುತ್ತಿವೆ, ಅಂಥವುಗಳ ಬಗ್ಗೆ ಈಗಿನ ಕಾನೂನುಗಳಲ್ಲಿ ಏನೂಹೇಳಿಲ್ಲ ಎಂದು ನಿಮಗನ್ನಿಸಿದರೆ ಮೂಲ ಕಾನೂನುಗಳಿಗೆ ತಿದ್ದುಪಡಿ ತನ್ನಿ - ಆ ವಿಷಯದ ಬಗ್ಗೆ ಪ್ರತ್ಯೇಕವಾಗಿ ನಾವು ಚರ್ಚಿಸೋಣ - ನಮ್ಮ ದೇಶದಲ್ಲಿ ಹೊಸ ಹೊಸ ಅಪರಾಧಗಳಾಗುತ್ತಿವೆ, ಈಗಿನ ಕಾನೂನುಗಳಲ್ಲಿ ಅವುಗಳ ಬಗ್ಗೆ ಯಾವುದೇ ನಿಯಮ ಇಲ್ಲ ಎಂದು ನಿಮಗನ್ನಿಸಿದರೆ ಇಂಡಿಯನ್ ಪೀನಲ್ ಕೋಡ್‌ಗೆ ಅಥವಾ ಕ್ರಿಮಿನಲ್ ಪ್ರೊಸೀಜರ್ ಕೋಡ್‌ಗೆ ಧಾರಾಳವಾಗಿ ನಿಯಮಗಳನ್ನು ಸೇರಿಸಿ, ನೀವು ಬಯಸಿದ ಹಾಗೆ ಕಾನೂನು ಕ್ರಮ ಜರುಗಿಸಿ. ಆದರೆ, ಕಾಯ್ದೆಯ 3ನೇ ಪ್ರಕರಣದಲ್ಲಿನ ವಿಸ್ತಾರವಾದ ನಿಯಮಗಳಲ್ಲಿ ಹೇಳಿರುವ ಕೆಲವೊಂದು ಅಪರಾಧಗಳನ್ನು ಮಾಡಬಹುದೆಂದು ನೀವು ಹೇಳಿದ ಮಾತ್ರಕ್ಕೇ ಅಂಥವರನ್ನು ವಿಚಾರಣೆ ಮಾಡದೆಯೇ ಬಂಧಿಸಲು ಹಾಗೂ ಸ್ಥಾನ ಬದ್ಧತೆಯಲ್ಲಿಡಲು, ನಿಮ್ಮ ಕಾರ್ಯಾಂಗ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲು ನಿಮಗೆ ಯಾವ ಹಕ್ಕೂ ಇಲ್ಲ.

ಜನರ ಮನಸ್ಸಿನಲ್ಲಿ ಯಾವ ಶಂಕೆ ಉಂಟಾಗಿದೆ ? ಕಳೆದ ಒಂದು ವರ್ಷದಿಂದ ಕಾಯ್ದೆ ಅನುಷ್ಠಾನಗೊಳ್ಳುತ್ತಿದೆ. ಜನರು ಇಂದು ಸಂದೇಹಪಡುತ್ತಿದ್ದಾರೆ, ಕೆಲವರಂತೂ, ಕಾಯ್ದೆಯ ನಿಯಮಗಳನ್ನು ನಿರ್ದಯದಿಂದ ಅನ್ವಯಿಸಲಾಗುತ್ತಿದೆಯೆಂದು ಖಡಾ ಖಂಡಿತವಾಗಿ ಹೇಳುತ್ತಿದ್ದಾರೆ. ಅದೇ ಭಯ.

ಈ ಕಾಯ್ದೆಯಲ್ಲಿ ನ್ಯಾಯಾಲಯ ಅಧಿಕಾರ ವ್ಯಾಪ್ತಿಯನ್ನು ತೆಗೆದು ಹಾಕಲಾಗಿದೆ. ಪ್ರತಿಬಂಧಕ ಸ್ಥಾನಬದ್ದತೆ ಕಾಯ್ದೆಯ ಒಂದು ಪ್ರಕರಣವನ್ನು ಬಿಟ್ಟರೆ - ಅದನ್ನಿಗೇ ತೆಗೆದುಹಾಕಲಾಗಿದೆ - ಕಾಯ್ದೆಯ ಉಳಿದಲ್ಲವು ಅಧಿಕಾರಕ್ಕೆ ಮೀರಿದ್ದಲ್ಲವೆಂದು ಸುಪ್ರೀಂ ಕೋರ್ಟು ತೀರ್ಪಿತ್ತಿದೆ. ಸುಪ್ರೀಂ ಕೋರ್ಟು ಮತ್ತು ಬೇರೆ ಬೇರೆ ರಾಜ್ಯಗಳಲ್ಲಿರುವ ಹೈಕೋರ್ಟುಗಳು, ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯ ನಿಯಮಗಳ ಪಾಲನೆ ಆಗಿಲ್ಲವೆಂದು ನಿರ್ಣಯಿಸಿ, ಎಷ್ಟು ಮಂದಿ ನೂರಾರು ಜನರನ್ನು ಬಿಡುಗಡೆ ಮಾಡಿವೆ ? ಎಂಬುದನ್ನು ನಮಗೆ ತಿಳಿಸಿದ್ದರೆ ಆಸಕ್ತಿ ಉಂಟಾಗುತ್ತಿತ್ತು. ಅಂಥ ಪ್ರಕರಣಗಳ ಬಗ್ಗೆ, ಹಾಗೆ ಸ್ಥಾನಬದ್ಧತೆಯಲ್ಲಿಡಲು ಕ್ರಮ ತೆಗೆದುಕೊಳ್ಳುವುದಕ್ಕೆ ಕಾರಣರಾದ ವ್ಯಕ್ತಿಗಳ ವಿರುದ್ಧ ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ ಎಂಬುದನ್ನು ನಾವು ಗೃಹಮಂತ್ರಿಯವರಿಂದ ತಿಳಿದುಕೊಳ್ಳಬಯಸಿದ್ದೇವೆ. ಯಾರೋ ಕೊಟ್ಟ ವರದಿಯ ಮೇಲೆ ಕ್ರಮ ಜರುಗಿಸಲಾಗಿದೆ. ಸುಪ್ರೀಂ ಕೋರ್ಟಿನ ಅಥವಾ ಹೈಕೋರ್ಟುಗಳ ತೀರ್ಪಿನಲ್ಲಿ ಹೇಳಿರುವಂತೆ, ಭಾರತದ

ನಾಗರಿಕರನ್ನು ಕಾನೂನುಬಾಹಿರವಾಗಿ ಬಂಧಿಸಿದ್ದಕ್ಕೆ ಜವಾಬ್ದಾರರಾದವರ ಬಗ್ಗೆ ಆಡಳಿತಾತ್ಮಕ ಕ್ರಮ ತೆಗೆದುಕೊಳ್ಳಲಾಗಿದೆಯೇ ? ಸನ್ಮಾನ್ಯ ಗೃಹಮಂತ್ರಿಯವರೇ ಈ ಬಗ್ಗೆ ಹೇಳಬೇಕು. ಏಕೆಂದರೆ, ಈ ಸದನದಲ್ಲಿ ಆ ಬಗ್ಗೆ ಯಾರು ದೂಷಿಸುತ್ತಿಲ್ಲ. ಆದರೆ, ರಾಜಕೀಯ ಸೇಡು ತೀರಿಸಿಕೊಳ್ಳುವ ಸಲುವಾಗಿ, ಯಾರೇ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳ ಗುಂಪನ್ನು ಹಿಡಿಯುವ ಉದ್ದೇಶದಿಂದ ಹಾಗೆ ಮಾಡಲಾಗಿದೆಯೆಂದು ಹೊರಗಿನ ಕೆಲವರು ಮಂತ್ರಿಯವರನ್ನು ದೂಷಿಸುತ್ತಿದ್ದಾರೆ. ಕಾನೂನನ್ನು ಉಲ್ಲಂಘಿಸಿ, ಬಂಧಿಸಿ, ಸ್ಥಾನಬದ್ಧತೆಯಟ್ಟಿರುವಾಗ, ಈ ನಾಡಿನ ಉನ್ನತ ನ್ಯಾಯಾಲಯದ ತೀರ್ಪಿನ ಪ್ರಕಾರ ಹಾಗೂ ಈಗಿನ ಕಾಯ್ದೆಯಲ್ಲಿರುವ ಕಠಿಣ ನಿಯಮಗಳ ಪ್ರಕಾರ ಕೂಡ ಕಾನೂನು ಬಾಹಿರದ್ದಾಗಿರುವಾಗ, ಸರ್ಕಾರದ ಉತ್ತರ ಏನು ?

ಸ್ಥಾನಬದ್ಧತೆಗೆ ಸಂಬಂಧಿಸಿದ ಕೆಲವು ಪ್ರಕರಣಗಳ ಬಗ್ಗೆ ನನ್ನ ಬಳಿ ಎರಡು ತೀರ್ಪುಗಳಿವೆ. ಒಂದು ಸುಪ್ರೀಂ ಕೋರ್ಟಿನದು. ಇನ್ನೊಂದು ಪಂಜಾಬ್ ಹೈಕೋರ್ಟಿನದು. ಈ ಎರಡೂ ಪ್ರಕರಣಗಳಲ್ಲಿ ಸುಪ್ರೀಂಕೋರ್ಟು ಸ್ಥಾನಬದ್ಧತೆಯು ಕಾನೂನುಬಾಯಿರ ಎಂದುಹೇಳಿಲ್ಲ. ಏಕೆಂದರೆ, ಅದು ಕಾಯ್ದೆಯ ನಿಯಮಗಳಿಗೆ ಅನುಸಾರವಾಗಿಯೇ ತೀರ್ಪಿತ್ತಿದೆ.

ರಹಸ್ಯ, ಹಿಂಸೆ, ಮೋಸಕ್ಕೆ ಅಂಟಿಕೊಂಡಿರುವ ಹಾಗೂ ಈ ವಿಧಾನಗಳಿಂದ ಅಧಿಕಾರ ಕಬಳಿಸ ಬಯಸುವ ವ್ಯಕ್ತಿಗಳನ್ನು, ಪಕ್ಷಗಳನ್ನು ಹಾಗೂ ಗುಂಪುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ವಿದೇಯಕವನ್ನು ತಂದಿಲ್ಲವೆಂದು ಗೃಹಮಂತ್ರಿಗಳು ಪ್ರಾರಂಭದ ದಿನವೇ ಹೇಳಿದ್ದಾರೆ. ಇಲ್ಲಿ ನನ್ನ ಅನಿಸಿಕೆಯನ್ನು ನಾನು ಸ್ಪಷ್ಟಪಡಿಸಬಯಸುತ್ತೇನೆ. ತಮ್ಮ ತಮ್ಮ ಸಹಜ ಚಟುವಟಿಕೆಗಳನ್ನು - ರಾಜಕೀಯ ಅಥವಾ ಆರ್ಥಿಕ - ಕೈಗೊಳ್ಳುವ ವ್ಯಕ್ತಿಗಳ, ಪಕ್ಷಗಳ ಅಥವಾ ಗುಂಪುಗಳ ಮೇಲೆ ಯಾವುದೇ ನಿರ್ಬಂಧ ಹೇರಬಾರದು. ಆರೋಗ್ಯಕರ ಚಟುವಟಿಕೆಗಳಿಂದ ಭಾರತದಲ್ಲಿ ಜನತಂತ್ರ ನೆಲೆಯೂರುತ್ತದೆ, ಬೆಳೆಯುತ್ತದೆ. ದೇಶದ ಹಿತದೃಷ್ಟಿಯಿಂದ ಹೇಳುವುದಾದರೆ, ಈದೇಶದಲ್ಲಿ ಹಿಂಸೆಗೆ ಅಂಟಿಕೊಂಡಿರುವ ಅಥವಾ ಹಿಂಸಾ ವಿಧಾನಗಳಿಂದ ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳಬಯಸುವ ಯಾವ ಸಂಸ್ಥೆಯೂ ಇರಬಾರದು. ಈ ಅಂಶದ ಮೇಲೆ ಸಾರ್ವಜನಿಕ ಜಾಗೃತಿಯನ್ನು ಮಾಡಿಸಬೇಕು. ಇದು ಸರ್ಕಾರ ಒಂದರಿಂದಲೇ ಸಾಧ್ಯವಿಲ್ಲ. ಎಲ್ಲ ಜನರ ಜವಾಬ್ದಾರಿಯೂ ಹೌದು.

ಒಂದು ಪಕ್ಷದ ಸ್ಪಷ್ಟ ನೀತಿ ಏನು ಎಂಬುದನ್ನು ಪರಾಮರ್ಶಿಸುವುದು ಬಹಳ ಕಷ್ಟದ ಕೆಲಸ. ಪರಾಮರ್ಶಿಸುವುದಕ್ಕೆ, ಸರ್ಕಾರದಲ್ಲಿ ಅಥವಾ ಜನರಲ್ಲಿ ಈಗ ಮಾಹಿತಿ ಇಲ್ಲವೆಂದು ಕಾಣುತ್ತದೆ. ಆದರೆ, ರಹಸ್ಯವಾಗಿ ಕೆಲಸ ಮಾಡುತ್ತಿರುವ, ಬುಡಮೇಲು ಕೃತ್ಯಗಳಿಂದ ಅಧಿಕಾರ ಕಬಳಿಸುವ ಪ್ರಯತ್ನ ಮಾಡುತ್ತಿರುವ ಚಟುವಟಿಕೆಗಳನ್ನು ಹತ್ತಿಕ್ಕಲು ಸರ್ಕಾರ ಈ ನಿಲುವು

ತೆಗೆದುಕೊಂಡಿದ್ದರೆ - ಸರ್ಕಾರದ ನೀತಿ ಅದೇ ಆಗಿದ್ದರೆ - ಆ ನೀತಿಯನ್ನು ಖಂಡಿತವಾಗಿಯೂ ಅನುಸರಿಸಲೇಬೇಕಾಗುತ್ತದೆ.

ಸರ್ಕಾರದ ಅಭಿಪ್ರಾಯದಲ್ಲಿ, ಆ ಚಟುವಟಿಕೆಗಳಲ್ಲಿ ತೊಡಗಿರುವ ಪಕ್ಷ ಯಾವುದು? ಅದರಲ್ಲೂ, ಗೃಹಮಂತ್ರಿಯವರು ಕಮ್ಯೂನಿಸ್ಟರನ್ನು ಉಲ್ಲೇಖಿಸಿದ್ದಾರೆ. ವ್ಯಕ್ತಿಯಾಗಲ್ಲ, ಪಕ್ಷವಾಗಿ, ಕಮ್ಯೂನಿಸ್ಟರು ಅಂಥ ಚಟುವಟಿಕೆಗಳಲ್ಲಿ ತೊಡಗಿದ್ದಾರೆಂಬುದಕ್ಕೆ ಪುರಾವೆ ಇದ್ದರೆ, ಭಾರತದಾದ್ಯಂತ ಕಮ್ಯೂನಿಷ್ಟ್ ಪಕ್ಷವನ್ನು ನಿಷೇಧಿಸಬಾರದೇಕೆ ? ಹಾಗೆ ಮಾಡದಂತೆ ಸರ್ಕಾರಕ್ಕೆ ಯಾವುದು ಅಡ್ಡ ನಿಂತಿದೆ ? ಹಾಗೆ ಮಾಡದಿದ್ದರೆ, ರಾಷ್ಟ್ರದ ಹಿತದೃಷ್ಟಿ ಈಡೇರುವುದಿಲ್ಲ. ಅಷ್ಟೇ ಅಲ್ಲ, ತಿಳಿವಳಿಕೆ ಇಲ್ಲದೆ, ಕಮ್ಯೂನಿಸ್ಟ್ ಪಕ್ಷಕ್ಕೆ ಬೆಂಬಲ ಕೊಡುತ್ತಿರುವ ಜನರನ್ನು ಕತ್ತಲೆಗೆ ತಳ್ಳಿದಂತಾಗುತ್ತದೆ. ನಿಮ್ಮಲ್ಲಿ ಪುರಾವೆ ಇದ್ದರೆ, - ಕಾಲಕಾಲಕ್ಕೆ ಸರ್ಕಾರವು ಹೊರತರುತ್ತಿರುವ ಪ್ರಕಟಣೆಗಳು ಪುರಾವೆ ಇರುವುದನ್ನು ಸೂಚಿಸುತ್ತವೆ - ಮತ್ತು ರಾಜ್ಯಾಂಗವು ತನ್ನ ನಾಗರಿಕರಿಗೆ ಯಾವ ಹಕ್ಕುಗಳನ್ನು ಕೊಟ್ಟಿದೆಯೋ, ಅವುಗಳಿಗೆ ಅನರ್ಹಗೊಳಿಸುವ ಚಟುವಟಿಕೆಗಳಲ್ಲಿ ತೊಡಗಿದ್ದಾರೆಂದು ನಿಮಗೆ ಈಗಲೂ ಖಾತ್ರಿ ಇದ್ದರೆ ಸರಿಯಾದ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ ಮತ್ತು ಸರ್ಕಾರದ ನಿಲುವನ್ನು ಸಮರ್ಥಿಸಲು ಎಲ್ಲ ವರ್ಗಗಳ ಜನರಿಗೆ ಕರೆ ಕೊಡಬೇಕಾಗುತ್ತದೆ. ಆದರೆ, ನೀರು ಅಂಥದೊಂದು ನೀತಿಯನ್ನು ಅನುಸರಿಸುವುದಿಲ್ಲ. ಕಮ್ಯುನಿಸ್ಟರು ಅನುಸರಿಸುತ್ತಿರುವ ವಿಧಾನಗಳನ್ನು - ಅವು ಒಳ್ಳೆಯವಿರಬಹುದು, ಕೆಟ್ಟವಿರಬಹುದು - ಹಲವಾರು ಬಾರಿ ನೀವು ಪ್ರಶಂಸಿದ್ದೀರಿ. ಅವುಗಳ ಬಗ್ಗೆ ನಾನು ಹೇಳುವುದಿಲ್ಲ. ಆದರೆ, ಚೀನಾದಲ್ಲಾದ ಮಹಾ ಕ್ರಾಂತಿಯನ್ನು ನೀವು ತುಂಬಾ ಹೊಗಳುತ್ತೀರಿ. ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ಅನ್ವಯ ನೀವು ಯಾವುದನ್ನು ರಕ್ಷಿಸ ಹೊರಟಿದ್ದೀರೋ ಅದರಂತೆ ಅಲ್ಲಿ ಕ್ರಾಂತಿ ಆಗಿಲ್ಲ. ಅಲ್ಲಿ ಜನರು ಕಾನೂನನ್ನು ತಮ್ಮ ಕೈಗೇ ತೆಗೆದುಕೊಂಡರು, ಕ್ರಾಂತಿ ಮಾಡಿದರು. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಾಗುತ್ತಿರುವ ಆ ಅಸಾಧಾರಣ ವಿದ್ಯಮಾನಗಳನ್ನು ಹೊಗಳುತ್ತೀರಿ. ಆದರೆ, ಇಲ್ಲಿ ಇದನ್ನು, ಅದನ್ನು ಹಾಗೂ ನಿಮ್ಮದೇ ದೇಶದಲ್ಲಿ ವ್ಯಕ್ತವಾಗುತ್ತಿರುವ ಇತರ ಅಭಿಪ್ರಾಯವನ್ನು ಹತ್ತಿಕ್ಕುತ್ತೇವೆಂದು ಹೇಳುತ್ತೀರಿ.

ಕಳೆದ ಹನ್ನೆರಡು ತಿಂಗಳಿಂದ ಈ ಕಾಯ್ದೆಯ ಅನುಷ್ಠಾನವನ್ನು ನಾನು ನೋಡುತ್ತಿದ್ದೇನೆ. ಸರ್ಕಾರವು, ಯಾವ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡಿದೆಯೋ, ಅದನ್ನು ಈ ಬಗೆಯ ವಿವರಣೆಯುಳ್ಳ ಒಂದು ನಿಯಮದಿಂದ ಎಷ್ಟರಮಟ್ಟಿಗೆ ಸಾಧಿಸಲಾಗುತ್ತದೆ ಎಂಬ ಬಗ್ಗೆ ನನಗೆ ನನ್ನದೇ ಆದ ಅನುಮಾನಗಳಿವೆ. ಅಂಥದೊಂದು ನಿಯಮ, ಹೆಚ್ಚೆಂದರೆ, ತಾತ್ಕಾಲಿಕ ಎನ್ನಬಹುದು. ಅಂಥ ಕಠಿಣ ಕಾನೂನುಗಳನ್ನು ತರುವುದು ಆಗತ್ಯವೆಂದು ಭಾವಿಸಿದ್ದ ದೇಶಗಳ ಪ್ರತಿಯೊಂದು ಸರ್ಕಾರವು ತಾತ್ಕಾಲಿಕ ಅಂಶವನ್ನು ಒಪ್ಪಿಕೊಂಡಿವೆ. ತತ್ಕಾಲದಲ್ಲಿ, ಸರ್ಕಾರಕ್ಕೆ

ಜನರನ್ನು ಸ್ಥಾನಬದ್ಧತೆಯಲ್ಲಿಡುವ ಅಧಿಕಾರ ಬೇಕಾಗುತ್ತದೆ. ಅದರಿಂದ, ಸರ್ಕಾರಕ್ಕೆ ಇತರ ರೀತಿಯಲ್ಲಿ ಸುಧಾರಣೆ ತರುವುದಕ್ಕೆ ಅವಕಾಶ ಸಹ ಸಿಕ್ಕಿದಂತಾಗುತ್ತದೆ. ಇಂದು, ನಾವು ಈ ನಿಯಮವನ್ನು ಎರಡು ದೃಷ್ಟಿಯಿಂದ ನೋಡಬೇಕಾಗುತ್ತದೆ. ಒಂದು, ಅದು ಕೆಲಸ ಮಾಡಿದೆಯೇ - ಕಳೆದ ಹನ್ನೆರಡು ತಿಂಗಳಲ್ಲಿ ಅದನ್ನು ಹೇಗೆ ಅನ್ವಯಿಸಲಾಗಿದೆ ? ಎರಡು, ಮುಂದೆಯೂ ಕೆಲಸ ಮಾಡಬಲ್ಲದೇ ?

ಮೊದಲನೆ ದೃಷ್ಟಿ ಬಗ್ಗೆ ಹೇಳುವುದಾದರೆ, 1959ರ ಅವಧಿಯಲ್ಲಿ ಸುಮಾರು ಹತ್ತು ಅಥವಾ ಹನ್ನೆರಡು ಸಾವಿರ ಜನರನ್ನು ಸ್ಥಾನಬದ್ಧತೆಯಲ್ಲಿಡಲಾಗಿದೆ. ಅದರಿಂದ, ದೇಶದ ಸಾಮಾನ್ಯ ವಾತಾವರಣದ ಮೇಲೆ ಯಾವ ಪರಿಣಾಣ ಉಂಟಾಗಿದೆ ? ಮುಗ್ಧ ಮನುಷ್ಯನ ಸ್ಥಾನಬದ್ಧತೆಯಿಂದ, ಸ್ವತಃ ಅವನ ಮೇಲೆ, ಅವನ ಕುಟುಂಬ, ಅವನ ಸಂಬಂಧಿಕರು, ಅವನ ಸಮೀಪದ ಜನರ ಮೇಲೆ ಯಾವ ಪರಿಣಾಮ ಉಂಟಾಗಿದೆ ? ಮಿಕ್ಕವರಿಗಿಂತಲೂ ಗೃಹಮಂತ್ರಿಗಳಿಗೆ ಚೆನ್ನಾಗಿ ಗೊತ್ತಿದೆ. ಬ್ರಿಟಿಷ್ ಆಳ್ವಿಕೆಯಲ್ಲಿ ಜಾರಿಯಲ್ಲಿದ್ದ ಸ್ಥಾನಬದ್ಧತೆ ಕಾಯ್ದೆಗಳಿಂದ ನಮಗೆ ಅನುಭವ ಆಗಿದೆ. ಇಡೀ ಚಳುವಳಿ ಭೂಗತವಾಗಿತ್ತು. ಆ ದಿನಗಳಲ್ಲಿ ಬಾರತದಲ್ಲಿ ಅನುಸರಿಸಿದ ಭಯೋತ್ಪಾದಕ ವಿಧಾನಗಳಿಗೆ ಆ ದಿನಗಳಲ್ಲಿ ಬ್ರಿಟಿಷ್ ಸರ್ಕಾರವು ಅನುಸರಿಸಿದ್ಧ ದೂರದೃಷ್ಟಿ ಇಲ್ಲದ, ಮನಸೋ ಇಚ್ಚೆಯ ಹಾಗೂ ನಿರ್ದಯದ ದಮನ ನೀತಿಯೇ ಕಾರಣವೆಂದು ನಾನು ಭಾವಿಸಿದ್ದೇನೆ. ಬ್ರಿಟಿಷರು, ಆ ದಿನಗಳಲ್ಲಿ ನಿಜವಾದ ಮುಷ್ಕರ್ಮಿಗಳನ್ನು ಹಿಡಿಯುವುದರ ಬದಲು ಕೈಗೆ ಸಿಕ್ಕಿದವರನ್ನು ಹಿಡಿಯಲು ಗಮನ ಕೊಡುತ್ತಿದ್ದರು. ಇಲ್ಲಿ, ನಮ್ಮಲ್ಲೇ ನಾವು ಈ ಪ್ರಶ್ನೆ ಏಕೆ ಹಾಕಿ ಕೊಳ್ಳಬಾರದು ? ಇಂದು, ಕಮ್ಯೂನಿಸ್ಟರಲ್ಲಿ, ಅನೇಕರು, ಈ ಸದನದ ಸದಸ್ಯರಿಗೆ ಗೊತ್ತಿದ್ದಾರೆ. ಅವರಲ್ಲಿ ಕೆಲವರು ಪ್ರತಿಭಾವಂತರಿದ್ದಾರೆ, ವಿದ್ಯಾವಂತರಿದ್ದಾರೆ, ರಾಷ್ಟ್ರಕ್ಕಾಗಿ ದುಡಿದವರಿದ್ದಾರೆ, ಇಂದು ಅಧಿಕಾರದಲ್ಲಿರುವವರ ಸಂಗಾತಿಗಳು ಆಗಿದ್ದಾರೆ ಎಂದು ನಾನು ಮುಚ್ಚುಮರೆ ಇಲ್ಲದೆ ಹೇಳುತ್ತೇನೆ. ಅವರಿಗೇನಾಯಿತು ? ಅವರೇಕೆ ಹುಚ್ಚರಂತಿದ್ದಾರೆ ? ವಿನಾ ಕಾರಣ, ಭಾರತದ ಶಾಂತಿಯ, ಏಳಿಗೆಯ ವಿಧ್ವಂಸಕ ರೆನಿಸಿಕೊಂಡಿರುವ ಆ ಜನರ ಮನಸ್ಸಿನಲ್ಲಿರುವ ಸಂಶಯದ ನಿವಾರಣೆಗೆ ಯಾವ ಬಹುಮುಖ್ಯ ಸಮಸ್ಯೆಗಳನ್ನು ಇನ್ನು ಬಗೆಹರಿಸಲು ಸಾಧ್ಯವಾಗಿಲ್ಲವೋ, ಅಂಥ ಸಮಸ್ಯೆಗಳಿಂದಲೇ ಇಂದು ಈ ದೇಶದಲ್ಲಿ ಕಮ್ಯೂನಿಸಂ ಬೆಳೆಯುತ್ತಿದೆಯೋ ಆ ಸಮಸ್ಯೆಗಳನ್ನು ನಿಭಾಯಿಸಲು ಸರ್ಕಾರದ ರಚನಾತ್ಮಕ ನೀತಿ ಏನು ? ಎನ್ನುವ ಬಗ್ಗೆ ಗೃಹ ಮಂತ್ರಿಗಳಿಂದ ನಾನು ತಿಳಿದು ಕೊಳ್ಳಬಯಸುತ್ತೇನೆ. ಯಾವುದೇ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯಿಂದಲೇ ಕಮ್ಯೂನಿಸಂನ್ನು ಹತ್ತಿಕ್ಕಲು ನಿಮಗೆ ಆಗುವುದಿಲ್ಲ. ದೇಶದಲ್ಲಾಗುತ್ತಿರುವ ಅವ್ಯವಸ್ಥೆಯನ್ನು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯಿಂದಲೇ ತಡೆಯಲು ನಿಮಗೆ ಆಗುವುದಿಲ್ಲ. ಇಂದು, ಈ ಗಲಿಬಿಲಿಗಳಿಗೆ ಏನು ಕಾರಣ ? ಜನರೇಕೆ ಅಷ್ಟೊಂದು

ಅಸಮಾಧಾನದಿಂದಿದ್ದಾರೆ? ಇಂದು ಅಧಿಕಾರದಲ್ಲಿರುವ ಜನರು ಯಾರನ್ನು, ಬಲವಂತದಿಂದಲ್ಲ, ಪ್ರೀತಿ ವಿಶ್ವಾಸದಿಂದಲೇ ತಮ್ಮ ನಾಯಕರೆಂದು ನಂಬಿದ್ದರೋ ಅಂಥ ಜನರ ಸ್ಥಾನಮಾನವನ್ನು ಅವರೇ ಪ್ರಶ್ನಿಸುತ್ತಿದ್ದಾರೆ, ಏಕೆ ? ಇದು ಅಭಿಪ್ರಾಯಗಳ ಅಥವಾ ಪ್ರತಿ ಅಭಿಪ್ರಾಯಗಳ ವಿಷಯ ಅಲ್ಲ. ಈ ವಿಷಯದಲ್ಲಿ ಸರ್ಕಾರ ಮಾತ್ರವೇ ವಿಫಲವಾಗಿಲ್ಲ. ನಾವೆಲ್ಲರೂ ವಿಫಲರಾಗಿದ್ದೇವೆ. ಈ ವಿಷಯದಲ್ಲಿ ಸರ್ಕಾರಕ್ಕೆ ಎಷ್ಟು ಜವಾಬ್ದಾರಿ ಇದೆಯೋ ಸಂಸತ್ತಿನ ಸದಸ್ಯರಾಗಿ ನಮಗೂ ಅಷ್ಟೇ ಜವಾಬ್ದಾರಿ ಇದೆ. ಅವ್ಯವಸ್ಥೆ ಅಥವಾ ಅಡ್ಡಿ ಅಡಚಣೆ ದಿಕ್ಕಿನತ್ತ ಸಾಗುತ್ತಿರುವ ಜನರ ಮನಸ್ಸನ್ನು ನಿಯಂತ್ರಿಸಲು ಇಂದು ನಾವೇಕೆ ಅಸಮರ್ಥರಾಗಿದ್ದೇವೆ? ಬಹುಷಃ, ಇದಕ್ಕೆ ಕಾರಣ ಆರ್ಥಿಕ ಪರಿಸ್ಥಿತಿ ಹಾಗೂ ಕೆಟ್ಟ ಆಡಳಿತಕ್ಕೆ ಸಂಬಂಧಿಸಿರಲೇಬೇಕಾಗುತ್ತಿದೆ. ಯಾವುದೇ ರೀತಿಯಿಂದಾಗಲಿ, ನಾವು ನಮ್ಮ ದೇಶದ ಆರ್ಥಿಕ ಸಮಸ್ಯೆಗಳನ್ನು ಬಗೆಹರಿಸುವವರೆಗೂ, ನಾವು ಸರಿಯಾದ ಮಾರ್ಗದಲ್ಲಿ ಹೋಗುತ್ತಿದ್ದೇವೆಂದು ಜನರು ಅರಿತುಕೊಳ್ಳುವಂತೆ ಮಾಡುವವರೆಗೂ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯ ಪರಿಸ್ಥಿತಿಯನ್ನು ನಾವು ನಿಭಾಯಿಸುವ ಸಾಧ್ಯತೆ ಇಲ್ಲ. ಎಷ್ಟು ಜನರನ್ನು ನೀವು ಬಂಧಿಸುತ್ತೀರಿ ? ಹತ್ತಾರು ಸಾವಿರ ಜನರನ್ನು ಬಂಧಿಸಿದ್ದೀರಿ. ನೀವು ಇನ್ನೂ ಇಪ್ಪತ್ತು ಸಾವಿರ ಜನರನ್ನು ಬಂಧಿಸಬಹುದು, ನಲವತ್ತು ಸಾವಿರ ಜನರನ್ನು ಬಂಧಿಸಬಹುದು, ಒಂದು ಲಕ್ಷ ಜನರನ್ನು ಬಂಧಿಸಬಹುದು, ಈಗ, ನೀವೆಷ್ಟು ಜನರನ್ನು ಬಂಧಿಸಿದ್ದೀರೋ ಅದರ ಎರಡರಷ್ಟು ಸಂಖ್ಯೆ ಜನರಿಗೇ ನಿಮ್ಮ ಜೈಲುಗಳುಸಾಲುತ್ತಿಲ್ಲ, ಹೀಗೆ, ರಾಜ್ಯಭಾರ ನಡೆಸುತ್ತೀರೇನು ? ಎಂದು, ಈ ಸದನಕ್ಕೆ ಹಾಗು ಈ ದೇಶಕ್ಕೆ ಗೃಹಮಂತ್ರಿಗಳು ಕೊಡುವ ಸಂದೇಶ ಇದೇ ಏನು ? ಕಮ್ಯೂನಿಸ್ಟ್ ಪಕ್ಷದಲ್ಲಿರುವ ಕೆಲವರು ವಿದೇಶಗಳೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದಾರೆ. ಕಮ್ಯೂನಿಸಂನಿಂದ ಭಾರತದ ರಕ್ಷಣೆ ಸಾಧ್ಯವೆಂದು ಅವರು ಭಾವಿಸಿದ್ದಾರೆ. ನಮಗದು ತಪ್ಪೆಂದು ತೋರುತ್ತದೆ, ಅವರಿಗೆ ಅದೇ ಸರಿ ಎಂದು ತೋರುತ್ತದೆ. ಆ ಅಭಿಪ್ರಾಯವನ್ನು ನಾವು ಒಪ್ಪುವುದಿಲ್ಲ. ಭಾರತ, ಒಂದು ಬಣಕ್ಕೆ ಅಥವಾ ಇನ್ನೊಂದು ಬಣಕ್ಕೆ ಅಂಟಿಕೊಂಡರೆ ಭಾರತದ ಉದ್ಧಾರವಾಗುತ್ತದೆಂಬ ಈ ಅಭಿಪ್ರಾಯವನ್ನು ಯಾವುದೇ ರೀತಿಯಲ್ಲೂ ನಾವೊಪ್ಪುವುದಿಲ್ಲ. ಭಾರತ ಈಗಲೂ ಭಾರತವೇ, ಮುಂದೆಯೂ ಭಾರತವೇ. ಸ್ವತಂತ್ರ ದೇಶದಲ್ಲಿ ನಾವೀಗ ಎದುರಿಸುತ್ತಿರುವ ಭಾರೀ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ನಾವು ನಮ್ಮದೇ ಆದ ತತ್ತ್ವ ಜ್ಞಾನವನ್ನು, ನಮ್ಮದೇ ಆದ ಧೋರಣೆಯನ್ನು ಬೆಳೆಸಿಕೊಳ್ಳ ಬೇಕಾಗಿದೆ. ಆದರೆ, ಆ ದಿಶೆಯಲ್ಲಿ, ನೀವು ಜನರನ್ನು ಹುರಿದುಂಬಿಸುವ ಸಂದೇಶವನ್ನು, ಧ್ಯೇಯ ಮಂತ್ರ ಕೊಡಬೇಕಾಗಿದೆ. ಇಂದು, ಭಾರತದ ಅತ್ಯಂತ ಗಣ್ಯ, ಹಿರಿಯ ಮುತ್ಸದ್ಧಿಗಳಲ್ಲಿ ಒಬ್ಬರಾದ ಶ್ರೀ ರಾಜಾಜಿಯವರನ್ನು, ಈ ವಿಷಯವನ್ನು, ಮನದಟ್ಟು ಮಾಡಿಕೊಂಡು ಜನರಲ್ಲಿ ಹೊಸ ನಂಬಿಕೆ ಮೂಡಿಸಬೇಕೆಂದು ಕೇಳಿಕೊಳ್ಳುತ್ತೇನೆ. ಆಗ ಮಾತ್ರ, ಯಾರು ಈ ದೇಶವನ್ನು ಹಾದಿ ತಪ್ಪಿಸಬಯಸಿದ್ದಾರೋ ಅಂಥವರ ಕಪಿಮುಷ್ಟಿಯಿಂದ ಜನರು ಹೊರಬರಲು

ಸಾಧ್ಯವಾಗುತ್ತದೆ. ಅಲ್ಲದೆ, ನಮ್ಮ ದೇಶದ ಭದ್ರತೆಯನ್ನೇ ಅಲುಗಾಡಿಸುತ್ತಿರುವ ಆ ಭಾರಿ ಆರ್ಥಿಕ ಸಮಸ್ಯೆಗಳ ಪರಿಹಾರಕ್ಕೆ ಸರಿಯಾದ ಮಾರ್ಗ ಕಂಡುಕೊಳ್ಳಲು ಕೆಲವೊಂದು ಸೂಚನೆ ನೀಡಬೇಕೆಂದು ಸಹ ಶ್ರೀ ರಾಜಾಜಿಯವರನ್ನು ಕೇಳಿಕೊಳ್ಳುತ್ತೇನೆ. ಅಭಿಪ್ರಾಯಗಳನ್ನು ಬಲವಂತದಿಂದ ತುಳಿದರೆ ಅಥವಾ ತಪ್ಪುಗಳನ್ನು ಸರಿಪಡಿಸಲು ಪದೇ ಪದೇ ವಿಫಲರಾದರೆ ಬೆಂಕಿಗೆ ತುಪ್ಪ ಸುರಿದಂತಾಗುತ್ತದೆ. ಸ್ಥಾನಬದ್ಧತೆ ಕಾಯ್ದೆಯಿಂದ, ನಿಮ್ಮ ಸಂಗ್ರಹಣಾ ನೀತಿಯಿಂದ ಸಾಮಾನ್ಯ ಗ್ರಾಮಸ್ಥರ, ಅನಕ್ಷರಸ್ಥ ಜನರ ಮೇಲೆ ಯಾವ ಪರಿಣಾಮ ಉಂಟಾಗಿದೆ ಯೆಂಬುದನ್ನು ನಾನು ನೋಡಿದ್ದೇನೆ. ಆಹಾರ ಪರಿಸ್ಥಿತಿಯ ಲಾಭ ಪಡೆದುಕೊಳ್ಳ ಬಯಸುವ ಜನರಿದ್ದಾರೆಂದು ಈ ದಿನ ಗೃಹ ಮಂತ್ರಿಯವರು ಹೇಳಿದ್ದಾರೆ. ಲಾಭಕೋರರ ಬಗ್ಗೆ ಮಾತ್ರವೆ ಹೇಳಬೇಡಿ ? ದೇಶದಲ್ಲಿ ಉಂಟಾಗಿರುವ ಈ ಪರಿಸ್ಥಿತಿಯ ಲಾಭವನ್ನು ನೀವು ಹೇಗೆ ಪಡೆದುಕೊಳ್ಳುತ್ತಿದ್ದೀರಿ ? ಬೇರೆಯವರು ಲಾಭ ಪಡೆದುಕೊಳ್ಳುವಂಥ ಪರಿಸ್ಥಿತಿಯನ್ನು ನೀವೇಕೆ ಸೃಷ್ಟಿಸುತ್ತಿದ್ದೀರಿ ?

ಕಳೆದ ಕೆಲವು ವಾರಗಳ ಹಿಂದೆ ನಾನು ಕೆಲವೊಂದು ಪ್ರದೇಶಗಳಿಗೆ ಹೋಗಿದ್ದೆ. ಅಲ್ಲಿ, ನಿಗದಿತ ಬೆಲೆ ಕೊಟ್ಟು, ಬತ್ತ, ಧಾನ್ಯಗಳ ಸಂಗ್ರಹಣೆ ಕೆಲಸ ನಡೆಯುತ್ತಿತ್ತು. ಸ್ಥಳೀಯ ಜನರು, ಆ ನಿಗದಿತ ಬೆಲೆಗಳು, ನ್ಯಾಯ ಬೆಲೆಗಳಲ್ಲಿ ಎಂದೇ ಭಾವಿಸಿದ್ದಾರೆ. ಕಮ್ಯೂನಿಷ್ಟರಿಗೂ, ಕಮ್ಯೂನಿಸಂಗೆ ಇರುವಷ್ಟೇ ಅಜಗಜಾಂತರ. ಆದರೂ, ಆ ಜನರು ಭಾರತದ ಸ್ವತಂತ್ರ ನಾಗರೀಕರಾಗಿ ಸಭ್ಯ ಜೀವನ ನಡೆಸಬಯಸಿದ್ದಾರೆ. ಯಾವ ಬೆಲೆಗೆ ತಮ್ಮ ದವಸಧಾನ್ಯ ಕೊಡಬೇಕೆಂದು ಕೇಳಲಾಗಿದೆಯೇ, ಎಷ್ಟು ಕೊಡಬೇಕೆಂದು ಕೇಳಲಾಗಿದೆಯೋ ಆ ಬೆಲೆಗೆ ಕೊಡಲು ಸಾಧ್ಯವಿಲ್ಲವೆಂದು ಅವರು ಭಾವಿಸಿದ್ದಾರೆ. ಎಷ್ಟು ಅಗತ್ಯವೆಂದು ಭಾವಿಸಿದ್ದಾರೋ ಅಷ್ಟನ್ನು ಅವರಿಟ್ಟುಕೊಂಡಿದ್ದಾರೆ. ಆದರಿಂದಲೇ ಅವರ ಬದುಕು. ಅವರ ಗೋಳನ್ನು ಗಮನಕ್ಕೆ ತೆಗೆದುಕೊಂಡೇ ಇಲ್ಲ. ಕೆಲವು ಜನರು ರಾಜಕೀಯ ಪ್ರೇರಣೆಗೆ ಒಳಗಾಗಿರಬಹುದು. ಆದರೆ ಪರಿಣಾಮ ಏನಾಗುತ್ತಿದೆ ? ನೀವಲ್ಲಿಗೆ ಹೋಗುತ್ತೀರಿ, ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ಪ್ರಕಾರ ಕೆಲ ಜನರನ್ನು ಬಂಧಿಸುತ್ತೀರಿ. ಇದು ಯಾವುದೇ ಸಮಸ್ಯೆಯನ್ನು ಬಗೆಹರಿಸುತ್ತದೆಯೇ ? ಸಮಸ್ಯೆಯನ್ನು ಇನ್ನಷ್ಟು ಹೆಚ್ಚು ಮಾಡುತ್ತದೆ. ಏಕೆಂದರೆ, ಆ ಸ್ಥಳದಲ್ಲಿ ವಾಸಿಸುತ್ತಿರುವ ಜನರು ತತ್‌ಕ್ಷಣವೇ ಸರ್ಕಾರದ ವಿರೋಧಿಗಳಾಗುತ್ತಾರೆ. ಕಮ್ಯೂನಿಷ್ಟ್ ಬೋಧನೆಗಳಿಗೆ ಸುಲಭವಾಗಿ ಮಾರು ಹೋಗುತ್ತಾರೆ. ಏಕೆಂದರೆ, ತೊಂದರೆಗಳನ್ನು ಸೃಷ್ಟಿಸಬಯಸುವವರು "ನೋಡಿ, ನಿಮ್ಮ ಹಣೆ ಬರಹ, ಸುಮ್ಮನಿರಬೇಡಿ, ಎದ್ದೇಳಿ" ಎಂದು ಪ್ರಚೋದಿಸುತ್ತಾರೆ.

ಒಂದಲ್ಲ ಒಂದು ಕಾರಣದಿಂದ, ನಮ್ಮ ದೇಶ, ಇಂದು ತೀವ್ರ ಆಶಾಭಂಗದ ಪರಿಸ್ಥಿತಿಯನ್ನು ಎದುರಿಸುತ್ತಿದೆ ಎಂಬ ಕಟು ಸತ್ಯವನ್ನು ನಾವು ಮರೆಯಬಾರದು.

ತೊಂದರೆಗಳು ಅಥವಾ ನಿರ್ದಿಷ್ಟ ಸಮಸ್ಯೆಗಳು, ಅವೆಷ್ಟೇ ದೊಡ್ಡವಿರಲಿ, ಪರವಾಗಿಲ್ಲ, ರಾಷ್ಟ್ರ ರಾಷ್ಟ್ರಗಳಲ್ಲಿ ಇದ್ದೇ ಇರುತ್ತದೆ. ಆದರೆ, ಈಗಿನ ಪರಿಸ್ಥಿತಿಯಿಂದ ಹೊರಬರಲು ತಮಗೆ ಸಾಧ್ಯವಾಗುತ್ತಿಲ್ಲ. ಪರಿಹಾರವೇ ಇಲ್ಲ ಎಂದು ಜನರು ಸಾಮಾನ್ಯವಾಗಿ ಭಾವಿಸಹೊರಟರೆ ಅಪಾಯ ಇರುವುದು ಅಲ್ಲೇ. ಈಗಿನ ಕೆಟ್ಟ ಸ್ಥಿತಿಗಿಂತ ಬೇರಾವುದೂ ಇರಲಾರದೆಂದು ಜನ ಚಳುವಳಿಗೆ ಇಳಿಯುತ್ತಾರೆ. ಜನರು ಹತಾಶರಾಗುತ್ತಾರೆ, ಮುಂದಾಲೋಚನೆ ಇಲ್ಲದವರಾಗುತ್ತಾರೆ. ಈ ವಿಷಯ ಸನ್ನಿವೇಶ ಇಂದು, ಎಲ್ಲ ಕಡೆ ಹಬ್ಬುತ್ತಿದೆ - ಭಾರತದ ಎಲ್ಲ ಕಡೆ ಎಂದು ನಾನು ಹೇಳಲಾರೆ - ಆದರೆ, ತೀವ್ರ ಅಸಮಾಧಾನ, ಕಮ್ಯೂನಿಸ್ಟರು ಅಥವಾ ಸರ್ಕಾರಿ ವಿರೋಧಿ ಜನರಲ್ಲೇ ಅಂತಲ್ಲ, ಎಲ್ಲ ಕಡೆ ಇದೆಯೆಂಬ ಅನಿಷ್ಟಕರ ಸೂಚನೆ ಕಂಡುಬರುತ್ತಿದೆ. ಸರ್ಕಾರದ ಅಧ್ಯಕ್ಷತೆ ಹಾಗೂ ವಿಫಲತೆಯಿಂದ ಈ ದೇಶದಲ್ಲಿ ವಿದ್ಯಮಾನಗಳು ಜರುಗುತ್ತಿರುವ ರೀತಿಯಿಂದ ಜನರು ಬೇಸತ್ತಿದ್ದಾರೆ. ತಲೆಯೆತ್ತದುಂತಾಗಿದೆ. ಭಾರತದ ಶಾಂತಿ ಹಾಗೂ ಉನ್ನತಿಯನ್ನು ಕಾಡುತ್ತಿರುವ ಈ ಪ್ರಮುಖ ಸಮಸ್ಯೆಗೆ ನಿಮ್ಮಲ್ಲಿರುವ ಪರಿಹಾರ ಏನು ? ಇದು ಒಂದು ಅಂಶ, ಕಳೆದ ಒಂದು ವರ್ಷದಿಂದ ಈ ಕಾಯ್ದೆಯು ಹೇಗೆ ಕೆಲಸ ಮಾಡುತ್ತಿದೆಯನ್ನುವುದನ್ನು ಪರಶೀಲಿಸುವುದು ಇನ್ನೊಂದು ಅಂಶ.

ಕಳೆದ ಏಪ್ರಿಲ್‌ನಲ್ಲಿ ದೆಹಲಿ ಅಧಿಕಾರಿಗಳು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ಅಡಿಯಲ್ಲಿ ಸ್ಥಾನಬದ್ಧತೆಯಲ್ಲಿರುವ ಶ್ರೀ ಅಶುತೋಷ್ ಲಾಹಿರಿಯವರ ಪ್ರಕರಣದಲ್ಲಿ ಸುಪ್ರೀಂಕೋರ್ಟು ಇತ್ತಿರುವ ತೀರ್ಪು ನನ್ನ ಬಳಿ ಇದೆ. ಇಲ್ಲಿ ಸುಪ್ರೀಂ ಕೋರ್ಟು ಹಸ್ತ ಕ್ಷೇಪ ಮಾಡಿಲ್ಲ. ಆದರೆ, ಸುಪ್ರೀಂ ಕೋರ್ಟ್ ತೀರ್ಪು ಔಚಿತ್ಯ ರಹಿತವಾದುದಾಗಿದೆ. ಈ ಸಂಭಾವಿತ ವ್ಯಕ್ತಿ 1950ರ ಮಾರ್ಚ್‌ನಲ್ಲಿ ಇಲ್ಲಿಗೆ ಬಂದಾಗ ಬಂಧಿಸಿದರು. ನಂತರ ಆತನಿಗೆ ಕಾರಣಗಳನ್ನು ಕೊಟ್ಟರು. ಅವುಗಳಲ್ಲಿ ಒಂದು ಕಾರಣವೆಂದರೆ, ಅವರು ಪಶ್ಚಿಮ ಬಂಗಾಳದಲ್ಲಿ ಅನಪೇಕ್ಷಣೀಯ ಸ್ವರೂಪದ ಚಟುವಟಿಕೆಗಳಲ್ಲಿ ತೊಡಗಿದ್ದರೆಂಬುದು. ಆದರೆ, ಅವರನ್ನು ಪಶ್ಚಿಮ ಬಂಗಾಳ ಸರ್ಕಾರದ ಆದೇಶದ ಮೇರೆಗೆ ಬಂಧಿಸಲಿಲ್ಲ. ದೆಹಲಿ ಅಧಿಕಾರಿಗಳ ಆದೇಶದ ಮೇರೆಗೆ ಅವರನ್ನು ಬಂಧಿಸಲಾಗಿದೆ. ಸುಪ್ರೀಂಕೋರ್ಟು ಪ್ರಕರಣವನ್ನು ಪರಿಶೀಲಿಸಿ, ಕಾರಣಗಳನ್ನು ಹೀಗೆ ಹೇಳಿದೆ "ನೀವು 1950ರ ಮಾರ್ಚ್ 27 ರಂದು ದೆಹಲಿಗೆ ಬಂದು, ಇಲ್ಲಿ ಒಂದು ಪತ್ರಿಕಾಗೋಷ್ಠಿಯನ್ನು ಕರೆದು ಪಶ್ಚಿಮ ಬಂಗಾಳದಲ್ಲಿನ ವಿದ್ಯಮಾನಗಳನ್ನು ಕೋಮುವಾದವುಗಳೆಂದು ತುಂಬಾ ಉತ್ಪ್ರೇಕ್ಷೆಯಿಂದ ಬಣ್ಣಿಸಿದ್ದೀರಿ". ಸರ್ಕಾರವು ಪತ್ರಿಕಾಗೋಷ್ಠಿಯ ನಡವಳಿಕೆಗಳು ಪ್ರಕಟವಾಗದಂತೆ ನಿಷೇಧಿಸಿತು. ಯಾವುದೂ ಯಾವುದೇ ಪತ್ರಿಕೆಯಲ್ಲಿ ಪ್ರಕಟವಾಗಲಿಲ್ಲ. ಇದು ಮೊದಲನೇ ಕಾರಣ, ಎರಡನೇ ಕಾರಣವೆಂದರೆ "ಪತ್ರಿಕಾ ಗೋಷ್ಠಿಯ ನಂತರ, ನೀವು ಕೋಮು ಭಾವನೆಗಳನ್ನು ಪ್ರಚೋದಿಸುವಂತಹ

ಸ್ವರೂಪದ ಚಟುವಟಿಕೆಗಳನ್ನು ಮುಂದುವರಿಸಿರುವುದು ಕಂಡುಬಂದಿದೆ. ಅಲ್ಲದೆ, ನೀವು ಪಶ್ಚಿಮ ಬಂಗಾಳದಲ್ಲಿದ್ದಾಗ ನಿಮ್ಮ ಚಟುವಟಿಕೆಗಳು ಕೋಮು ಸ್ವರೂಪದವೆಂಬುದೂ ತಿಳಿದುಬಂದಿದೆ. ಸಾರ್ವಜನಿಕ ಸಭೆಯಲ್ಲಿ ನಿಮ್ಮ (ಅವರು ಅಲ್ಲಿರಲೇ ಇಲ್ಲ) ಅತಿರೇಕದ ಹೇಳಿಕೆಗಳಿಂದಾಗಿ 1950ರ ಮಾರ್ಚ್‌ನಲ್ಲಿ ದೆಹಲಿಯಲ್ಲಿ ಕೋಮು ದಂಗೆಗಳಾದ್ದರಿಂದ ದೆಹಲಿಯ ಪ್ರಸ್ತುತ ವಾತಾವರಣದಲ್ಲಿ ನಿಮ್ಮ ಚಟುವಟಿಕೆಗಳು ನಿಜವಾಗಿಯೂ ವಿವಿಧ ಸಮುಧಾಯಗಳ ನಡುವೆ ವೈಷಮ್ಯವನ್ನು ಬೆಳೆಸುತ್ತಿದ್ದು ಆದರಿಂದ ಸಾರ್ವಜನಿಕ ಶಾಂತಿ ಹಾಗೂ ಸುವ್ಯವಸ್ಥೆ ಅಸ್ತವ್ಯಸ್ತಗೊಳ್ಳುವುದಕ್ಕೆ ದಾರಿಯಾಗುತ್ತಿದೆ".

ಈ ಕಾರಣಗಳ ಮೇಲೆ ಅವರನ್ನು ಬಂಧಿಸಲಾಗಿದೆ. ಕೋರ್ಟು ವಿಷಯವನ್ನು ಪರಿಶೀಲಿಸಿದೆ. ಇಡೀ ತೀರ್ಪನ್ನು ನಾನು ಓದುವುದಿಲ್ಲ. ಸಂಬಂಧಪಟ್ಟ ಭಾಗಗಳನ್ನು ಓದುತ್ತೇನೆ. ತನ್ನ ಸ್ಥಾನಬದ್ಧತೆ ದುರುದ್ದೇಶದ್ದೆಂದು, ತನ್ನನ್ನು ಸ್ಥಾನಬದ್ಧತೆಯಲ್ಲಿಡುವುದಕ್ಕೆ ಯಾವ ಅಧಾರಗಳೂ ಇರಲಿಲ್ಲವೆಂದು, ತನ್ನ ರಾಜಕೀಯ ಅಭಿಪ್ರಾಯಗಳ ಹೇಳಿಕೆಯಿಂದಾಗಿ ತನ್ನನ್ನು ಸ್ಥಾನಬದ್ಧತೆಯಲ್ಲಿಡಲಾಗಿದೆಯೆಂದು ನಿರ್ಣಯಿಸುವಂತೆ ಅರ್ಜಿದಾರರು ನ್ಯಾಯಾಲಯಕ್ಕೆ ಪ್ರಾರ್ಥನೆ ಮಾಡಿಕೊಂಡಿದ್ದರು. ನಿಮಗೇ ಗೊತ್ತಿರುವಂತೆ, ಬೇರೆ ಜನರೂ ದೆಹಲಿಗೆ ಬಂದಿದ್ದಾರೆ, ಅವರನ್ನು ಗಡೀಪಾರು ಮಾಡಲಾಗಿದೆ. ಆದರೆ, ಈ ಸಂಭಾವಿತನನ್ನು ಮಾತ್ರವೇ ದೆಹಲಿ ಅಧಿಕಾರಿಗಳು ಸ್ಥಾನಬದ್ಧತೆಯಿಡಲು ಆಯ್ದುಕೊಂಡಿದ್ದಾರೆ. ದೆಹಲಿಯಿಂದ ಹೊರಹಾಕಲು ಅನ್ವಯಿಸಬಹುದಾದ ನಿಯಮಗಳು ಕ್ರಿಮಿನಲ್ ಪ್ರೊಸೀಜರ್ ಕೋಡ್‌ನಲ್ಲಿವೆ. ನಿಜ ಹೇಳಬೇಕೆಂದರೆ, ಅದೇ ಸಭೆಯಲ್ಲಿ ಬಹು ಮುಖ್ಯ ಪಾತ್ರ ವಹಿಸಬೇಕೆಂದಿದ್ದ ವ್ಯಕ್ತಿಗಳನ್ನು ದೆಹಲಿಯಿಂದ ಹೊರಹಾಕಲಾಗಿದೆ. ತೀರ್ಪು ಹೀಗೆ ಹೇಳಿದೆ:

> "ಅರ್ಜಿದಾರನ ಬಗ್ಗೆ, ಏಕೆ ಈ ರೀತಿಯಲ್ಲಿ ಭಿನ್ನವಾಗಿ ವರ್ತಿಸಲಾಗಿದೆಯೆಂಬುದನ್ನು ಕಂಡುಕೊಳ್ಳಲು ಸ್ವಲ್ಪ ಕಷ್ಟವಾಗುತ್ತಿದೆ. ಅರ್ಜಿದಾರ ಅನಿರ್ದಿಷ್ಟ ಕಾಲದವರೆಗೆ ಜೈಲಿನಲ್ಲಿ ಸ್ಥಾನಬದ್ಧತೆಯಲ್ಲಿದ್ದಾನೆ. ಸ್ಥಾನಬದ್ಧತೆಯಲ್ಲಿಡಲು ಸಾಮಾನ್ಯ ಕಾನೂನೇ ಸಾಕಾಗಿತ್ತು. ಅದು ಬಿಟ್ಟು ಈ ಕಾಯ್ದೆಯ ಅಸಾಧಾರಣ ನಿಯಮಗಳನ್ನು ಅನ್ವಯಿಸಿರುವುದನ್ನು ನೋಡಿದರೆ, ಕಾರ್ಯಾಂಗ ಅಧಿಕಾರಿಗಳು ಹೊಂದಿರುವ ದುರುದ್ದೇಶಕ್ಕೆ ಇದಕ್ಕಿಂತ ಇನ್ನೂ ಒಳ್ಳೆಯ ಪುರಾವೆ ಇರಲಾರದು. ದೆಹಲಿ ಅಧಿಕಾರಿಗಳಲ್ಲಿ ಸದ್ಭಾವನೆ ಇರಲಿಲ್ಲವೆಂಬ ನಿಶ್ಚಿತ ಅಭಿಪ್ರಾಯಕ್ಕೆ, ಬರಲು ನನಗೆ ಸಾಧ್ಯವಾಗದಿದ್ದರೂ, ಈ ಪ್ರಕರಣ ಖಂಡಿತವಾಗಿಯೂ ಸಂಶಯಾತೀತವಾಗಿಲ್ಲ. ರಾಷ್ಟ್ರದ ಹಿತದೃಷ್ಟಿಯಿಂದ ಸಂಸತ್ತು ಕಾರ್ಯಾಂಗಕ್ಕೇ ಕೊಟ್ಟಿರುವ ಆ ಅಸಾಧಾರಣ ಅಧಿಕಾರಗಳ ದುರುಪಯೋಗ ಆಗಿ, ಅನ್ಯಾಯ ಅಥವಾ ತುಳಿತಕ್ಕೆ ಒಳಗಾಗುವುದನ್ನು ಪೋಷಿಸುವಂತಹ ಯಾವ ದೃಷ್ಟಾಂತಗಳೂ ಇನ್ನು ಮುಂದೆ ಆಗದಂತೆ ಅಧಿಕಾರಿಗಳು ಎಚ್ಚರಿಕೆ ವಹಿಸುತ್ತಾರೆಂಬ ನಂಬಿಕೆ ನನಗಿದೆ ಎಂದಷ್ಟೇ ನಾನು ಹೇಳಬಲ್ಲೆ".

ಇದೇ ಬಗೆಯ ತೀರ್ಪಿನ್ನು, ಅದೇ ಮೊಕದ್ದಮೆಯಲ್ಲಿ ಕೆಲವರು ಇತರ ನ್ಯಾಯಾಧೀಶರೂ ಇತ್ತಿದ್ದಾರೆ.

ಕಥೆ ಇಲ್ಲಿಗೇ ಮುಗಿಯುವುದಿಲ್ಲ. 1950ರ ಮಾರ್ಚ್ 19 ರಂದು ತೀರ್ಪು ಬಂತು. ಸರ್ಕಾರವು ದುರುದ್ದೇಶದಿಂದ ವರ್ತಿಸಿದೆಯೇ - ಇದು, ಸರ್ಕಾರವು ದುರುದ್ದೇಶದಿಂದ ವರ್ತಿಸಿದೆಯೆಂದು ಕಂಡಿತವಾಗಿ ಹೇಳಲಿಕ್ಕೆ ಆಗದಂತಹ ಪ್ರಕರಣ ಹಾಗೂ ಅದನ್ನು ರುಜುವಾತುಪಡಿಸುವ ಭಾರ ಅರ್ಜಿದಾರನದು - ಎಂಬ ನಿರ್ಣಯಕ್ಕೆ ಬರಲಾಗುತ್ತಿಲ್ಲವೆಂದು ಸುಪ್ರೀಂಕೋರ್ಟ್ ಅಭಿಪ್ರಾಯಪಟ್ಟಿದ್ದರೂ ಈ ವ್ಯಕ್ತಿಯ ಬಿಡುಗಡೆಗೆ ಸುಪ್ರೀಂಕೋರ್ಟ್ ತೀರ್ಪಿನ ನಂತರದ ಎರಡು ತಿಂಗಳಾದ ಮೇಲೂ ಎಂದರೆ ಜುಲೈತನಕ, ಯಾವ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ಈ ಮಧ್ಯೆ, ಈ ವ್ಯಕ್ತಿಯ ಸ್ಥಾನಬದ್ಧತೆಗೂ ಪಶ್ಚಿಮ ಬಂಗಾಳ ಸರ್ಕಾರಕ್ಕೂ ಏನೇನೂ ಸಂಬಂಧ ಇಲ್ಲ ಹಾಗೂ ಅಂಥ ಯಾವುದೇ ಕ್ರಮ ತೆಗೆದುಕೊಳ್ಳಬೇಕೆಂದು ತಾನು ಎಂದೂ ಶಿಫಾರಸ್ಸು ಮಾಡಿಲ್ಲವೆಂದು ಪಶ್ಚಿಮ ಬಂಗಾಳದ ಪ್ರಧಾನಿಯ ಕಾರ್ಯದರ್ಶಿಯು ಕೊಟ್ಟಿರುವ ಪತ್ರವನ್ನು ಲಗತ್ತಿಸಿ ಈ ವ್ಯಕ್ತಿ ಜುಲೈ ಪ್ರಾರಂಭದಲ್ಲಿ ಸುಪ್ರೀಂ ಕೋರ್ಟಿಗೆ ಇನ್ನೊಂದು ಅರ್ಜಿ ಹಾಕಿಕೊಂಡರು. ಆತನನ್ನು ಸ್ಥಾನಬದ್ಧತೆಯಲ್ಲಿಡುವುದಕ್ಕೆ ಪಶ್ಚಿಮ ಬಂಗಾಳದಲ್ಲಿನ ಅತನ ಚಟುವಟಿಕೆಗಳೂ ಒಂದು ಕಾರಣವೆಂದು ನಾನು ಓದಿ ಹೇಳಿದ ಕಾರಣಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಪಶ್ಚಿಮ ಬಂಗಾಳದ ಮುಖ್ಯ ಮಂತ್ರಿಗಳ ಕಾರ್ಯದರ್ಶಿಯ ಪತ್ರವನ್ನು ಲಗತ್ತಿಸಿ ಸುಪ್ರೀಂಕೋರ್ಟಿಗೆ ಅರ್ಜಿ ಸಲ್ಲಿಸಿದ ಕೆಲವು ದಿನಗಳ ನಂತರ ಭಾರತ ಸರ್ಕಾರವು ಅವರನ್ನು ಬಿಡುಗಡೆ ಮಾಡಿತು. ಇದು ಒಂದು ಪ್ರಕರಣ ನನಗೆ ಹಲವಾರು ಪ್ರಕರಣಗಳು ಗೊತ್ತಿವೆ. ಪಂಜಾಬ್ ಹೈಕೋರ್ಟು ಹಲವಾರು ಜನರನ್ನು ಬಿಡುಗಡೆ ಮಾಡಿದೆ. ಮುಂಬಯಿ ಹೈಕೋರ್ಟು ಅಡ್ವೋಕೇಟ್ ಜನರಲ್ಲರನ್ನು ಹೀಗೆ ಕೇಳಿದೆ: ಈ ವ್ಯಕ್ತಿಗಳು ಹಿಂದೂ ಮಹಾಸಭಾದ ಸದಸ್ಯರೆಂಬುದನ್ನು ಬಿಟ್ಟರೆ, ಯಾವ ಕಾರಣಗಳ ಮೇಲೆ ಅವರುಗಳನ್ನುಸ್ಥಾನಬದ್ಧತೆ ಯಲ್ಲಿಡಲಾಗಿದೆ; ಈ ಕಾರಣದ ಮೇಲೆ ನೀವು ಅವರುಗಳನ್ನು ಸ್ತಾನಬದ್ಧತೆಯಲ್ಲಿಡುವಂತಿಲ್ಲ. ತಿಂಗಳುಗಟ್ಟಲೆ ಯಾವ ಕಾರಣಗಳನ್ನು ಕೊಡದೆ ಈ ಕಾಯ್ದೆಯಡಿ ಅವರುಗಳನ್ನು ಸ್ಥಾನಬದ್ಧತೆಯಲ್ಲಿಟ್ಟಿದ್ದರಿಂದ ಹೈಕೋರ್ಟು ಅವರುಗಳ ಬಿಡುಗಡೆಗೆ ಆಜ್ಞೆ ಮಾಡಿತು. 1950ರ ಆಗಸ್ಟ್ 23 ರಂದು ಬಂಧನಕ್ಕೊಳಗಾದ ಶ್ರೀ ರಾಮ್ ಸಿಂಗ್, ಬಲರಾಜ್ ಕೃಷ್ಣ ಮತ್ತು ರಾಮ್ ನಾಥ್ ಕಾಲಿಯಾ ಈ ಮೂವರು ಈಗಲೂ ದೆಹಲಿಯಲ್ಲಿ ಸ್ಥಾನಬದ್ಧತೆಯಲ್ಲಿದ್ದಾರೆ. ಅವರುಗಳ ಸ್ಥಾನಬದ್ಧತೆಗೆ ಕೊಟ್ಟಿರುವ ಕಾರಣಗಳ ಹೀಗಿವೆ:

"ಯಾವ ಕಾರಣಗಳ ಮೇಲೆ 1950ರ ಆಗಸ್ಟ್ 22ರ ಸ್ಥಾನಬದ್ಧತೆ ಆದೇಶ ಮಾಡಲಾಗಿದೆ ಎಂಬುದನ್ನು ಪ್ರತಿಬಂಧಕ ಸ್ಥಾನ ಬದ್ದತೆ ಕಾಯ್ದೆಯ 7ನೇ ಪ್ರಕರಣಕ್ಕನುಸಾರವಾಗಿ, ಈ ಮೂಲಕ ತಿಳಿಸಲಾಗಿದೆ. ಆ ಕಾರಣಗಳೆಂದರೆ, ಸಾಮಾನ್ಯವಾಗಿ ಹಿಂದೆ, ಅದರಲ್ಲೂ 1950ರ ಆಗಸ್ಟ್ 13 ಹಾಗೂ 15ರಂದು ದೆಹಲಿಯಲ್ಲಿ ಸಾರ್ವಜನಿಕ ಸಭೆಗಳಲ್ಲಿ ನೀವು ಮಾಡಿದ ಭಾಷಣಗಳು ಹಿಂದೂಗಳು ಹಾಗೂ ಮುಸ್ಲಿಂಮರ ನಡುವೆ ಅಸಮಾಧಾನವನ್ನು ಪ್ರಚೋದಿಸುವಂಥ ವುಗಳಾಗಿದ್ದವು ಹಾಗೂ ದೆಹಲಿಯಲ್ಲಿ ಸಾರ್ವಜನಿಕ ಸುವ್ಯವಸ್ಥೆಗೆ ಪ್ರತಿಕೂಲ ವಾದವುಗಳಾಗಿದ್ದವು. ಆದ್ದರಿಂದ, ನೀವು ಅಂಥ ಭಾಷಣಗಳನ್ನು ಮಾಡುವುದನ್ನು ತಡೆಯಲು ಸದರಿ ಆದೇಶ ಮಾಡುವುದು ಅವಶ್ಯಕವಾಗಿದೆ".

ಕೋಮು ದೃಷ್ಟಿಯಿಂದ ಆಕ್ಷೇಪಾರ್ಹವೆಂದು ಭಾವಿಸಿದ್ದ ಎರಡು ಭಾಷಣಗಳನ್ನು ಈ ಮೂವರು ಸಂಭಾವಿತರು ಮಾಡಿದ್ದರಿಂದ ಈ ಕಾಯ್ದೆಯಡಿ ಅವರುಗಳನ್ನು ಸ್ಥಾನ ಬದ್ಧತೆಯಲ್ಲಿಡಲಾಗಿತ್ತು ಎಂಬುದು ಕಾರಣ. ಕಾನೂನಿನ ಕೆಲವು ನಿಯಮಗಳನ್ನು ಉಲ್ಲಂಘಿಸುವಂತಹ ಭಾಷಣಗಳನ್ನು ಅವರು ಮಾಡಿದ್ದರೆ ಆ ಆರೋಪದ ಮೇಲೆ ಅವರುಗಳನ್ನು ಬಂಧಿಸಿ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕಾಗಿತ್ತು. ವಿಷಯ ಹೈಕೋರ್ಟಿನವರೆಗೂ ಹೋದಾಗ, ಯಾವುದು ಸಾಕೆಂದು ಅಧಿಕಾರಿಗಳು ಭಾವಿಸಿದ್ದರೋ ಆ ಕಾರಣಗಳ ಮೇಲೆಯೇ ಈಗಿನ ಕಾನೂನಿನಡಿ ಹಸ್ತಕ್ಷೇಪ ಮಾಡುವುದು ಸಾಧ್ಯವಾಗದೆಂದು ಹೈಕೋರ್ಟು ಹೇಳಿದೆ. ಅದ್ದರಿಂದ, ನೆರವಿಗೆ ಬರಲು ಸಾಧ್ಯವಾಗದೆಂದು ಅದು ಹೇಳಿದೆ. ದೆಹಲಿಯಲ್ಲಿ ಮಾಡಿದ ಎರಡು ಭಾಷಣಗಳ ಆರೋಪದ ಮೇಲೆ - ಏಳು ತಿಂಗಳು ಕಳೆದಿವೆ - ಅವರಿನ್ನೂ ದೆಹಲಿಯಲ್ಲಿ ಕೊಳೆಯುತ್ತಿದ್ದಾರೆ. ಸರ್ಕಾರವು ಅವರನ್ನು ವಿಚಾರಣೆಗೆಗೆ ನ್ಯಾಯಾಲಯದ ಮುಂದೆ ಹಾಜರುಪಡಿಸುವ ಧೈರ್ಯ ತೋರಿಲ್ಲ. ಯಾವುದೇ ಸರ್ಕಾರ ಹಾಗೆ ಮಾಡಿಲ್ಲ. ನೀವು ದೆಹಲಿಯಲ್ಲಿರುವವರು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯಡಿ ಮನಸೋ ಇಚ್ಛೆ ಹಾಗೆ ಮಾಡಿದ್ದೀರಿ.

ನಾನು ಮೊದಲೇ ಹೇಳಿದಂತೆ, ಇನ್ನಷ್ಟು ದೃಷ್ಟಾಂತಗಳನ್ನು ಕೊಡುವುದಿಲ್ಲ. ಹಿಂದೆ, ಇನ್ನೊಂದು ದಿನ ಸುಪ್ರೀಂ ಕೋರ್ಟು, ಅಸ್ಸಾಂನಲ್ಲಿನ ಸುಮಾರು ಇಪ್ಪತ್ತು ಜನ ರಾಜಕೀಯ ಬಂದಿಗಳನ್ನು ಬಿಡುಗಡೆ ಮಾಡಿದೆ. ಸುಪ್ರೀಂ ಕೋರ್ಟಿನ ನ್ಯಾಯಾಧೀಶರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಪುನರ್‌ಮನನಕ್ಕೆ ಅರ್ಹವಾಗಿವೆ. ಅವರು ಅಡ್ವೊಕೇಟ್ ಜನರಲ್ಲರನ್ನು ಹೀಗೆ ಕೇಳಿದ್ದಾರೆ: ಈ ಜನರನ್ನು ನೀವು ಏಕೆ ಸ್ಥಾನಬದ್ಧತೆಯಲ್ಲಿಟ್ಟಿದ್ದೀರಿ. ನಮಗೆ ಕಾರಣಗಳನ್ನು ಕೊಡಿ; ನಮಗೆ ನೀವು ಕಾರಣಗಳನ್ನು ಕೊಡಲಾಗದಂತಹ ಸ್ಥಿತಿಯಲ್ಲಿದ್ದರೆ, ಕೊನೇ ಪಕ್ಷ, ಆ ಕಾರಣಗಳು ಸಾರ್ವಜನಿಕ ಹಿತದೃಷ್ಟಿಯಿಂದ ಬಹಿರಂಗಪಡಿಸಲಾರದಂಥವು ಎಂದಾದರೂ

ಹೇಳಿ, ಕಾನೂನಿಗೆ ಚೌಕಟ್ಟಿದೆಯಲ್ಲ, ಅದಕ್ಕಾದರೂ ಮನವರಿಕೆಯಾಗಲಿ; ನೀವೇನನ್ನೂ ಹೇಳದಿದ್ದರೆ, ನಾವು ಅವರನ್ನು ಬಿಡುಗಡೆ ಮಾಡಲೇಬೇಕಾಗುತ್ತದೆ. ನಾಗರೀಕನ ಸ್ವಾತಂತ್ರ್ಯದ ಮೇಲೆ ಗೃಹಮಂತ್ರಿಯವರಾಗಲಿ ಅಥವಾ ಸಂಸತ್ತಾಗಲಿ ಚೆಲ್ಲಾಟ ಮಾಡಬಯಸಿರುವ ರೀತಿ ಇದೇ ಏನು ?

ಅಧಿಕಾರ ಕಬಳಿಸಲು ಹಿಂಸೆ, ಮೋಸ, ರಹಸ್ಯ ಪ್ರಯತ್ನಕ್ಕೆ ಅಂಟಿಕೊಂಡಿರುವಂಥ ವ್ಯಕ್ತಿಗಳಿಗೆ ಅಥವಾ ಗುಂಪುಗಳಿಗೆ ಅಥವಾ ಪಕ್ಷಗಳಿಗೆ ಈ ನಿಯಮಗಳು ಅನ್ವಯವಾಗಬೇಕೆಂದು ತಾವು ಬಯಸಿರುವುದಾಗಿ ಗೃಹಮಂತ್ರಿಯವರು ಹೇಳಿದ್ದಾರೆ. ನಿಮಗೆ ಆ ನಿಯಮವೇ ಬೇಕೆಂದು ನೀವು ನಿಜವಾಗಿಯೂ ಹೇಳುವುದಾದರೆ, ದಯಮಾಡಿ 3ನೇ ಪ್ರಕರಣಕ್ಕೆ ತಿದ್ದುಪಡಿ ತನ್ನಿ, ಜನರ ಸ್ವಾತಂತ್ರ್ಯದ ಮೇಲೆ ಚಲ್ಲಾಟವಾಡಲು .... ಯಾವುದೋ ಕಾರಣದ ಮೇಲೆ ಯಾರನ್ನೋ ಯಾರೇ ಕಾರ್ಯಾಂಗ ಅಧಿಕಾರಿ ಬಂಧಿಸುವುದು ಸಾಧ್ಯವಾಗದಂತೆ ಮಾಡಿ. ಸರ್ಕಾರಕ್ಕೆ ಯಾವ ಅಧಿಕಾರಗಳು ಬೇಕೆಂಬ ಬಗ್ಗೆ ಸರ್ಕಾರ ಮೊದಲು ನಿರ್ಧರಿಸಿಕೊಳ್ಳಬೇಕು. ಏಕೆಂದರೆ, ನಿರ್ದಿಷ್ಟ ಪ್ರಕರಣಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಕಾರ್ಯಾಂಗ ಅಧಿಕಾರಿಗೆ ಆದೇಶ ನೀಡುವುದಕ್ಕೆ ಸರ್ಕಾರಕ್ಕೆ ಅನುವು ಮಾಡಿಕೊಡುವಂತಹ ಕೆಲವು ದಾಖಲೆಗಳು ಇದ್ದೇ ಇರಬೇಕು. ಅಂಥ ಪ್ರಕರಣಗಳ ಮೇಲೆ ನೀವು ಗಮನ ಕೇಂದ್ರೀಕರಿಸಬಹುದು. ಈಗಿನ ಪೀನಲ್ ಕೋಡ್ ಅಥವಾ ಕ್ರಿಮಿನಲ್ ಪ್ರೊ ಸೀಜರ್ ಕೋಡ್‌ನಲ್ಲಿರುವ ನಿಯಮಗಳ ವ್ಯಾಪ್ತಿಗೆ ಬರದಂತಹ ಅಪರಾಧಗಳು ದೇಶದ ಪ್ರಸ್ತುತ ವ್ಯವಸ್ಥೆಯಲ್ಲಿ ಆಗುತ್ತಿವೆ ಎಂದು ನೀವು ಭಾವಿಸಿದರೆ, ಆ ಕಾನೂನುಗಳಿಗೆ ತಿದ್ದುಪಡಿ ತರುವ ಹಾಗೂ ಇನ್ನಷ್ಟು ಅಪರಾಧಗಳನ್ನು ಸೇರಿಸುವ ನಿರ್ದಿಷ್ಟ ಪ್ರಸ್ತಾವನೆಗಳನ್ನು ಮಂಡಿಸಿರಿ: ಜನರನ್ನು ಬಂಧಿಸುವ ಹಾಗೂ ವಿಚಾರಣೆ ಮಾಡದೆಯೇ ಇಟ್ಟುಕೊಳ್ಳುವ ಹಳೆಯ ಅಪಾಯಕಾರಿ ಪದ್ಧತಿಯನ್ನು ಮುಂದುವರಿಸಬೇಡಿ. ಮುಂದುವರಿಸಬೇಕಾಗಿ ಬಂದಲ್ಲಿ, ರಾಷ್ಟ್ರದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ತಾತ್ಕಾಲಿಕ ಕ್ರಮವಾಗಿ ಮುಂದುವರಿಸಿ, ಪ್ರಮುಖ ಸಮಸ್ಯೆಗಳನ್ನು ಬಗೆಹರಿಸಲು ಇತರ ಪರಿಹಾರಕ ಕ್ರಮಗಳನ್ನು ಕಂಡುಕೊಳ್ಳಿ.

ಅವಶ್ಯಕ ಸರಬರಾಜು ಹಾಗೂ ಸೇವೆಗಳ ಬಗ್ಗೆ ಪ್ರಶ್ನೆ ಎದ್ದಿದೆ. ಈ ಸದನದ ಅನೇಕ ಸದಸ್ಯರಿಂದಷ್ಟೇ ಅಲ್ಲ, ಹೊರಗಿನಿದಲೂ ಸಹ, ಆ ಬಗೆಯ ಅಪರಾಧಗಳನ್ನು ಮಾಡಿದವರು, ಸಮಾಜದಲ್ಲಿ ಅವರೆಷ್ಟೇ ದೊಡ್ಡವರಾಗಿದ್ದರೂ, ಅಪಾಯಕಾರಿ ವ್ಯಕ್ತಿಗಳೇ, ಅಂಥವರ ಬಗ್ಗೆ ಸರಿಯಾದ ಕ್ರಮ ತೆಗೆದುಕೊಳ್ಳಬೇಕೆಂಬ ನೈಜ ಬೇಡಿಕೆ ಇರುವುದು ನನಗೆ ಗೊತ್ತಿದೆ. ಇದು ವಿಷಯದ ಒಂದು ಅಂಶ. ಆದರೆ, ಅತ್ಯಾವಶ್ಯಕ ಸರಕುಗಳ ಸರಬರಾಜು ಮತ್ತು ಸೇವೆಗಳ ಈಗಿನ ಪರಿಸ್ಥಿತಿಯಲ್ಲಿ ಹಸ್ತಕ್ಷೇಪ ಮಾಡುವ ಕಾಳ - ಸಂತೆಕೋರರಿಗೆ ಮತ್ತು ಇತರರಿಗೆ ಕಠಿಣ ಶಿಕ್ಷೆ ಕೊಡಬೇಕೆನ್ನುವ ನಮ್ಮ ಅಪೇಕ್ಷೆ ಏನಿದೆ, ಅದರ ಬಗ್ಗೆ ನಾವೇ

ಗೊಂದಲಕ್ಕಿಡಾಗಬಾರದು. ಇಂದಿನ ತಮ್ಮ ಚರ್ಚೆಯ ವಸ್ತು ವಿಷಯವಾಗಿರುವ ಪ್ರಮುಖ ವಿಚಾರದ ಬಗ್ಗೆ ನಾವು ಗೊಂದಲಕ್ಕೀಡಾಗಬಾರದು. ವಿಚಾರಣೆ ಮಾಡದೆಯೇ ಜನರನ್ನು ಬಂಧಿಸಲು ಹಾಗೂ ಸ್ಥಾನಬದ್ಧತೆಯಲ್ಲಿಡಲು ಸಂಸತ್ತು ಕಾರ್ಯಾಂಗ ಅಧಿಕಾರಿಗಳಿಗೆ ಅಧಿಕಾರವನ್ನು ವಹಿಸಿಕೊಡಲು ಆಸ್ಪದ ಕೊಡುವ ಸನ್ನಿವೇಶ, ಸಂದರ್ಭಗಳು ಯಾವುವು? ಕಾಳ - ಸಂತೆಕೋರರನ್ನು ಮತ್ತು ಇತರರನ್ನು ಈ ವಿಧೇಯಕದ ವ್ಯಾಪ್ತಿಗೆ ತಂದರೆ, ಅಂಥವರು ಪರಿಣಾಮಗಳಿಗೆ ಒಳಗಾಗಲೇ ಬೇಕಾಗುತ್ತದೆ. ಆದರೆ, ನೀವು ಕಾಳಸಂತೆಕೋರರ ವಿಷಯದಲ್ಲೂ ಬ್ಲಾಕ್‌ಮೇಲ್ ನೀತಿಯನ್ನು ಅನುಸರಿಸುವಂತಿಲ್ಲ. ಹಿಂದೆ, ಹಾಗೂ ಆಗುತ್ತಿತ್ತು. ನೀವು ಕೆಲವು ಜನರನ್ನು ಹಿಡಿಯುತ್ತೀರಿ, ಅವರು ಕಾಳಸಂತೆಕೋರರೆನ್ನುತ್ತೀರಿ, ಜೈಲಿಗೆ ಹಾಕುತ್ತೀರಿ. ಕಾಳ - ಸಂತೆಕೋರ ಹೌದೇ, ಅಲ್ಲವೇ ಎನ್ನುವುದನ್ನು ಬೇರೆಯವರು ಹೇಳಬೇಕಾಗುತ್ತದೆ. ಮುಗ್ಧ ಜನರನ್ನು ಜೈಲಿಗೆ ಹಾಕಬೇಡಿ. ಈ ವಿಶೇಷ ನಿಯಮಗಳ ಪ್ರಕಾರ ನೀವು ಕ್ರಮ ಜರುಗಿಸಬೇಕಾದರೆ, ನೀವು ತುಂಬಾ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕಾಗುತ್ತದೆ.

ರಾಷ್ಟ್ರ ವಿರೋಧಿ ಅಪರಾಧಗಳನ್ನು ನಾವು ಸಹಿಸುವುದಿಲ್ಲ ಎಂಬ ಮಾತು ಕೇಳಿ ಬರುತ್ತಿವೆ. ಕೆಲವೊಮ್ಮೆ ರಾಷ್ಟ್ರ ಎಂಬ ಶಬ್ದ ತೀರಾ, 'ಅಭಾಸ'ದ್ದಾಗುತ್ತದೆ ಹಾಗೂ ಸ್ಪಷ್ಟ ವಿವರಣೆ ಕೊಡಲು ಆಗುವುದಿಲ್ಲ. ನೀವು ಒದೆಯಬಯಸಿದರೆ ಅದಕ್ಕೆ ಶರೀರ ಇಲ್ಲ. ನಿಂದಿಸಬಯಸಿದರೆ ಅದಕ್ಕೆ ಆತ್ಮ ಇಲ್ಲ. ಹಾಗಿರುವಾಗ, ರಾಷ್ಟ್ರದ ಹೆಸರಿನಲ್ಲಿ ನೀವು ಹಲವನ್ನು ಕೈಗೊಳ್ಳ ಹೊರಟಿದ್ದೀರಿ. ನಾವು, ಪಕ್ಷದ ಸರ್ಕಾರವಾಗಿ ಕೆಲಸ ಮಾಡುತ್ತಿರುವ ಸರ್ಕಾರದ ಹಾಗೂ ಸಮುದಾಯದ ಅಥವಾ ರಾಷ್ಟ್ರದ ಹಿತಾಸಕ್ತಿ ನಡುವೆ ಲಕ್ಷ್ಮಣ ರೇಖೆ ಎಳೆಯಬೇಕಾಗಿದೆ. ಈ ಸ್ವರೂಪದ ಕಾಯ್ದೆಯನ್ನು ಚುನಾವಣೆ ಕಾಲಗಳಲ್ಲಿ ಕಠಿಣವಾಗಿ ಹಾಗೂ ಕ್ರೂರವಾಗಿ ಅನ್ವಯಿಸಬಹುದಾಗಿದೆ ಎಂಬ ವಿಚಾರ ತಲೆ ಎತ್ತಿದೆ. ಈಗ ಆ ಅಂಶವನ್ನು ತುಂಬಾ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ನೀವು ಇಚ್ಛಿಸಿದ ಯಾರನ್ನಾದರೂ ಸ್ಥಾನಬದ್ಧತೆಯಲ್ಲಿಡುವ ಅಧಿಕಾರ ನಿಮಗಿದ್ದರೆ, ಅವರು ಸಲಹಾ ಮಂಡಲಿ ಮುಂದೆ ಹೋದರೂ, ತಮ್ಮ ವಾದವನ್ನು ಮಂಡಿಸಿದರೂ ಯಾವುದೇ ಪರಿಹಾರ ಕೋರುವಹೊತ್ತಿಗೆ ಕೋನೇ ಪಕ್ಷ ಕೆಲವು ತಿಂಗಳೇ ಕಳೆದು ಹೋಗಿರುತ್ತದೆ. ಆಗ, ಯಾರೂ ಪರಿಗಣನೆಗೆ ತೆಗೆದುಕೊಳ್ಳದಂತಹ ಸ್ಥಿತಿಯನ್ನು ನೀವು ಸೃಷ್ಟಿಸಬಲ್ಲಿರಿ.

ಆದ್ದರಿಂದ, ಮೊದಲನೆಯದಾಗಿ, ಸಂಸತ್ತಿನ ಮುಂದೆ ಎಲ್ಲ ದಾಖಲೆ ಮಾಹಿತಿಯನ್ನು ಮಂಡಿಸುವಂತೆ ಹಾಗೂ ಜನರ ಯಾವ ವರ್ಗಗಳ ವಿರುದ್ಧ ಕಾನೂನು ಕ್ರಮ ಜರುಗಿಸಬಯಸಿದ್ದಾರೆನ್ನುವುದನ್ನು ತಿಳಿಸುವಂತೆ ನಾನು ಗೃಹ ಮಂತ್ರಿಗಳಿಗೆ ಸಲಹೆ ಮಾಡುತ್ತೇನೆ. ಹಿಂಸೆ ಮಾರ್ಗಗಳನ್ನು ಅನುಸರಿಸಿ ಬಯಸುವ ಗುಂಪುಗಳು ಹಾಗೂ ಜನರು ಇರುವುದನ್ನು

ಈ ಕ್ಷಣ ಮರೆತು ನಾನು ಹೇಳುತ್ತಿಲ್ಲ. ಇಂದು ಕಲ್ಕತ್ತ ಹಡಗು ಕಟ್ಟೆಗಳಲ್ಲಿ ಮುಷ್ಕರ ಘೋಷಿಸಲಾಗಿದೆ. ಹಡಗುಕಟ್ಟೆ ಕೆಲಸಗಾರರನ್ನು ಕಮ್ಯೂನಿಷ್ಟರ ನಿಯಂತ್ರಣದಲ್ಲಿರುವ ಸಂಘಕ್ಕೆ ಹದಿನೈದು ದಿನಗಳ ಹಿಂದೆಯಷ್ಟೇ ವಹಿಸಲಾಗಿದೆಯೆನ್ನುವುದು ಗೃಹ ಮಂತ್ರಿಗಳಿಗೆ ತಿಳಿದು ಬಂದಿದೆಯೇ ಎಂಬುದು ನನಗೆ ಗೊತ್ತಿಲ್ಲ. ಸರ್ಕಾರದ ನೀತಿ ಏನು ? ನಮಗೆ ಅದೇ ಅರ್ಥವಾಗುತ್ತಿಲ್ಲ. ಸರ್ಕಾರಕ್ಕೆ ಅಪಾಯಗಳು ಗೊತ್ತಿದೆ. ಹದಿನೈದು ದಿನಗಳ ಹಿಂದೆ ಸರ್ಕಾರವು ಕಲ್ಕತ್ತದಲ್ಲಿ ಒಂದು ಸಮ್ಮೇಳನ ಮಾಡಿತ್ತು. ಮಾನ್ಯತೆ ಕೊಡಬಾರದೆಂದು, ಕಲ್ಕತ್ತ ಹಡಗು ಕಟ್ಟೆಗಳಲ್ಲಿ ತೊಂದರೆ ಸೃಷ್ಟಿಸಬಯಸುವವರ ಕೈಯನ್ನು ಬಲಪಡಿಸುವ ಯಾವುದನ್ನೂ ಮಾಡಬಾರದೆಂದು ಅಲ್ಲಿ ಸಾಮಾನ್ಯ ಅಭಿಪ್ರಾಯ ವ್ಯಕ್ತವಾಯಿತು. ಅದು ರಾಷ್ಟ್ರದ ನರನಾಡಿಗಳ ಕೇಂದ್ರ. ನೀವು ಪಶ್ಚಿಮ ಬಂಗಾಳದ ಅಷ್ಟೇ ಅಲ್ಲ. ಇಡೀ ದೇಶದ ಆಡಳಿತವನ್ನು ನಿಸ್ಸತ್ವಗೊಳಿಸಬಹುದು. ಆದರೆ, ಕೊನೆಕೊನೆಯಲ್ಲಿ ಮಾನ್ಯತೆ ಕೊಡಲಾಯಿತು, ಅದು ಸಿಕ್ಕಿದ ಕೂಡಲೇ ಮುಷ್ಕರ ಪ್ರಾರಂಭವಾಯಿತು. ಇಲ್ಲಿ ನೀವಿಂದು ಪ್ರತಿಬಂಧಕ ಸ್ಥಾನಬದ್ಧತೆ ವಿಧೇಯಕವನ್ನು ಅಂಗೀಕರಿಸುತ್ತಿದ್ದೀರಿ, ಯಾರ ಮೇಲೆ ಕ್ರಮ ತೆಗೆದುಕೊಳ್ಳ ಬಯಸಿದ್ದೀರೆಂಬುದನ್ನು ಏಕೆ ಹೇಳುತ್ತಿಲ್ಲ ? ಅದನ್ನು ಮೊದಲು ಹೇಳಿ, ಇಡೀ ವಿಚಾರವನ್ನು ಮುಂದಿಡಿ, ದೇಶಕ್ಕೆ ಗೊತ್ತಾಗಲಿ. ಕಮ್ಯೂನಿಸ್ಟರು ಅಪಾಯಕಾರಿ ಚಳುವಳಿಯಲ್ಲಿ ತೊಡಗಿದ್ದಾರೆ, ಅವರನ್ನು ಬಗ್ಗುಬಡಿಯಬೇಕಾಗಿದೆ ಎಂದು ಹೇಳಿ. ಜನರಿಗೆ, ದೇಶಕ್ಕೆ ಕರೆ ಕೊಡಿ. ನಾವು ಮುಗ್ಧ ಜನರ ತಂಟೆಗೆ ಹೋಗುವುದಿಲ್ಲ ಎಂದು ಜನರಿಗೆ ಹೇಳಿ. ಪರಿಸ್ಥಿತಿಯಲ್ಲಿ ಸುಧಾರಣೆ ಆಗುವ ತನಕ ನಾವು, ಅಪಾಯಕಾರಿ ಜನರನ್ನು ಪ್ರಾಬಲ್ಯ ವಲಯದಿಂದ ದೂರ ಇಡಬಯಸಿದ್ದೇವೆಂದು ಹೇಳಿ. ನಮ್ಮ ಸ್ಪಷ್ಟ ನೀತಿ, ಗುರಿ ಏನೆಂಬುದು ನಮಗೂ ಗೊತ್ತಾಗಲಿ. ಅದು, ಜನರಿಗೂ ಗೊತ್ತಾಗಲಿ. ಸರಿಯಾದ ಕ್ರಮ ತೆಗೆದುಕೊಳ್ಳದೇ ಇರೋದು, ಈ ದಿನ ಹೇಳೋದೊಂದು, ನಾಳೆ ಮಾಡೋದೊಂದು, ಪ್ರಪಂಚದ ಕೆಲ ಭಾಗಗಳಲ್ಲಿನ ವಿಚಾರಧಾರೆಯಿಂದ ಕೆಲವೊಂದು ಒಳ್ಳೆ ಉದ್ದೇಶ ಈಡೇರಿದೆಯೆಂದು ಹೇಳೋದು, ಇವೆಲ್ಲಾ ಜನರನ್ನು ಗೊಂದಲಕ್ಕೆ ಬೀಳಿಸುತ್ತವೆ. ಭಾರತದ ಕಮ್ಯೂನಿಸ್ಟ್ ಪಕ್ಷವು ಯಾವುದೇ ರೂಪದಲ್ಲಿ ಚಟುವಟಿಕೆಗಳಲ್ಲಿ ತೊಡಗಿರಬಹುದು, ಅದರಿಂದ ಭಾರತಕ್ಕೆ ನಿಜವಾದ ಅಪಾಯ ಉಂಟಾಗುತ್ತಿದೆ ಎಂದು ಹೇಳಿ, ನಿಮ್ಮಲ್ಲಿ ದಾಖಲೆ, ಮಾಹಿತಿ ಇದ್ದರೆ, ಸದನದ ಮುಂದೆ, ದೇಶದ ಮುಂದೆ ಮಂಡಿಸಿ, ದೇಶ ನಿರ್ಧಾರ ತೆಗೆದುಕೊಳ್ಳುತ್ತದೆ. ಕಮ್ಯೂನಿಷ್ಟರದಲ್ಲಿ ಅನೇಕರು ಈಗ ಹಿಂಸೆ ಮಾರ್ಗವನ್ನು ಬಿಟ್ಟುಬಿಡಲು ಹಾಗೂ ವ್ಯವಸ್ಥಾಬದ್ಧವಾದ ಸಂಸ್ಥೆಯಾಗಿ ಕೆಲಸ ಮಾಡಬಯಸಿದ್ದಾರೆಂದು ಹೇಳಲಾಗಿದೆ. ಅದು ನಿಜವಾಗಿದ್ದರೂ, ಅದೇ ವೇದಿಕೆಯಲ್ಲಿ ಒಂದು ಗೂಡುವುದಕ್ಕೆ ಅಸ್ಪದ ಕೊಡುವ ವಿಧಾನವನ್ನು ಅನುಸರಿಸುವ ಪ್ರಯತ್ನ ಮಾಡಬೇಡಿ. ಇಂದು ಜನ, ಪರಿವರ್ತನೆ ಬಯಸಿದರೆ, ಪರಿವರ್ತನೆಗೊಳ್ಳಲಿ. ಈ ಕಮ್ಯೂನಿಸ್ಟರೆಲ್ಲಾ ಯಾರು ? ನಮ್ಮಂತೆಯೇ ಅವರೂ ಭಾರತೀಯರೇ, ಅವರನ್ನು ತಪ್ಪುದಾರಿಗೆ ಎಳೆದಿರಬಹುದು.

ನೀವು ಅವರನ್ನು ಸರಿಯಾದ ದಾರಿಗೆ ತರುವುದಾರೆ, ನಿಮ್ಮ ರಚನಾತ್ಮಕ ನೀತಿಯಿಂದ ಸರಿದಾರಿಗೆ ತನ್ನಿ. ಭಯದ, ಕಲ್ಪನೆಯ, ದ್ವೇಷದ ಆಧಾರದ ಮೇಲಲ್ಲದ, ವಾಸ್ತವಿಕ ಸಂಗತಿಗಳು, ಅಂಕಿ ಅಂಶಗಳ ಮೇಲೆ ಆಧಾರಿತವಾಗಿರುವ ಸ್ಪಷ್ಟ ನೀತಿ ಸರ್ಕಾರಕ್ಕಿರಬೇಕು. ಇದು ನನ್ನ ಮೊದಲ ಮನವಿ.

ನನ್ನ ಎರಡನೇ ಸಲಹೆಯೇನೆಂದರೆ, 3ನೇ ಪ್ರಕರಣಕ್ಕೆ ತಿದ್ದುಪಡಿ, ಗೃಹಮಂತ್ರಿಗಳು ತಮ್ಮ ಭಾಷಣದಲ್ಲಿ ಹೇಳಿರುವ ವಿವರಣೆಯನ್ನು ನಾವು ಒಪ್ಪುತ್ತೇನೆ. ಅಂಥ ಪ್ರಕರಣಗಳಿಗೆ ಮಾತ್ರವೇ ಈ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯು ಅನ್ವಯವಾಗುವಂತೆ 3ನೇ ಪ್ರಕರಣದಲ್ಲಿ ಅದೂ ಒಂದು ನಿಯಮವಾಗಲಿ.

ಇನ್ನು ಇತರ ವಿಷಯಗಳ ಬಗ್ಗೆ ಹೇಳುವುದಾದರೆ, ಈ ಸಲಹಾ ಮಂಡಳಿಗಳಲ್ಲಿ ಮುಂದೆ ಯಾವಾಗಲೋ ನ್ಯಾಯಾಧೀಶರಾಗುವವರು. ನ್ಯಾಯಾಧೀಶರಾಗಿ ಬಡ್ತಿಕೊಡಬೇಕೆಂದು ಗೃಹಮಂತ್ರಿಯವರು ಅಂದುಕೊಂಡಿರುವವರು ಇರಬಾರದು. ನ್ಯಾಯಾಧೀಶರು ಅಥವಾ ನಿವೃತ್ತ ನ್ಯಾಯಾಧೀಶರು ಅದರಲ್ಲಿರಬೇಕು. ಈ ಮಂಡಲಿಗಳು ಇಡೀ ವಿಷಯವನ್ನು ಪರಮಾರ್ಶಿಸಬೇಕು. ಈ ಸಲಹಾ ಮಂಡಲಿಗಳಿಗೆ ಗೊತ್ತಾಗದಂತೆ ಯಾವುದನ್ನು ಬಚ್ಚಿಡಬೇಡಿ. ನಮ್ಮ ಮುಂದಿರುವ ಕರಡು ವಿಧೇಯಕದಲ್ಲಿ ಈ ಅಂಶ ಸ್ಪಷ್ಟವಾಗಿ ಗೊತ್ತಾಗುತ್ತಿಲ್ಲ. ನಿಮ್ಮಲ್ಲಿ ಏನೇನು ದಾಖಲೆ, ಮಾಹಿತಿ ಇರುತ್ತದೋ, ಅದನ್ನು ಸಲಹಾ ಮಂಡಲಿ ಮುಂದೆ ಮಂಡಿಸಿ, ಬಡ ಮನುಷ್ಯನಿಗೆ, ಆಪಾದಿತನಿಗೆ ಅವಕಾಶ ಕೊಡಿ. ಅವನು ಬರಲಿ, ತನ್ನ ಅಹವಾಲನ್ನು ಸಲಹಾ ಮಂಡಲಿ ಮುಂದೆ ಹೇಳಿಕೊಳ್ಳಲಿ.

ಸನ್ಮಾನ್ಯ ಗೃಹಮಂತ್ರಿಯವರು ಸ್ವತಃ ತಮ್ಮ ಭಾಷಣದಲ್ಲಿ ಹೇಳಿದ ರೀತಿಯಲ್ಲಿ. ಈ ಬದಲಾವಣೆಗಳನ್ನು ತಂದರೆ, ಆಗ, ಕಾಯ್ದೆಯ ದುರುಪಯೋಗದ ಸಾಧ್ಯತೆ ಅಷ್ಟೊಂದಿರಲಾರದು. ಯಾವುದೇ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ಇಲ್ಲದೆಯೇ ಭಾರತದ ರಾಜ್ಯಭಾರ ನಡೆಸುವ ದಿನ ಬಂದರೆ ಇಲ್ಲಿನ ಸನ್ಮಾನ್ಯ ಸದಸ್ಯರುಗಳಿಗಿಂತಲೂ ಸಂತೋಷಪಡುವವರು ಬೇರಾರೂ ಇರಲಾರರು.

## ಹಿಂದು ಸಂಹಿತೆಯ ಕೋಡ್ ವಿಧೇಯಕ *

ಸುಮಾರು ಏಳು ತಿಂಗಳಾದ ಮೇಲೆ, ನಾವಿಲ್ಲಿ ಹಿಂದೂ ಕೋಡ್ ವಿಧೇಯಕದ ಪರಿಶೀಲನೆಗಾಗಿ ಸೇರಿದ್ದೇವೆ. ಈ ಅವಧಿಯಲ್ಲಿ ಎಷ್ಟೋ ವಿದ್ಯಮಾನಗಳಾಗಿವೆ. ಸರ್ಕಾರ ಮುಕ್ತ ಮನಸ್ಸಿನಿಂದಿದೆ ಹಾಗೂ ಈ ಸದನದಲ್ಲಿ ಮತ್ತು ಹೊರಗೆ ಮಾಡಿರುವ ಟೀಕೆಗಳನ್ನು ಗಮನದಲ್ಲಿಟ್ಟುಕೊಂಡು ತಿದ್ದುಪಡಿ ತರಲು ಸರ್ಕಾರ ಮುಂದೆ ಬಂದಿರುವುದು ಸಮಾಧಾನದ ಸಂಗತಿಯೆಂದು ನಾನು ಹೇಳಬಯಸುತ್ತೇನೆ.

ಈ ವಿಧೇಯಕದ ಪರವಾಗಿ ಅಥವಾ ವಿರೋಧವಾಗಿ ಅಷ್ಟೋಂದು ಟೀಕೆಗೆ ಆಸ್ಪದ ಕೊಟ್ಟಿರುವುದು ನಮ್ಮ ದೇಶದ ಇತಿಹಾಸದಲ್ಲಿ ಎಂದೂ ಆಗಿಲ್ಲ. ನನಗೆ ನಂಬಲಾಗುತ್ತಿಲ್ಲ.

ಈಗ ನಮ್ಮ ಚರ್ಚೆಗೆ ಒಳಗಾಗುತ್ತಿರುವ ನಿಯಮ ಸಾಮಾನ್ಯ ಸ್ವರೂಪದ್ದು. ಇಡೀ ಸಂಹಿತೆಯ ಅನ್ವಯದ ಪ್ರಶ್ನೆಯನ್ನು ಅದು ಎತ್ತಿದೆ. ಆ ದೃಷ್ಟಿಯಿಂದ ನಾನು ಸುಸಂಗತವಾದ ಕೆಲವು ಸಾಮಾನ್ಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಬಯಸುತ್ತೇನೆ.

ಸನ್ಮಾನ್ಯ ಕಾನೂನು ಮಂತ್ರಿಗಳು ಮಂಡಿಸಿರುವ ತಿದ್ದುಪಡಿಯಲ್ಲಿ ಹೇಳಿದಂತೆ, ಈ ಸಂಹಿತೆಯನ್ನು ಹಿಂದೂಗಳಿಗೆ ಅಥವಾ ಸಿಖ್ಖರು, ಜೈನರು ಹಾಗೂ ಬೌದ್ಧರೂ ಸೇರಿದಂತೆ ಇತರ ವರ್ಗಗಳಿಗೆ ಅನ್ವಯವಾಗುವಂತೆ ಮಾಡಬೇಕೇ ಎಂಬ ಪ್ರಶ್ನೆ ಎದ್ದಿದೆ. ಸಂಹಿತೆಯು ಭಾರತದ ಎಲ್ಲನಾಗರಿಕರಿಗೆ ಅನ್ವಯವಾಗಬಾರದೇ ಎಂಬ ಪ್ರಶ್ನೆ ಸಹ ಎದ್ದಿದೆ. ರಾಜ್ಯಾಂಗದಲ್ಲಿರುವ ರಾಜ್ಯ ನಿರ್ದೇಶಕ ನೀತಿಯ ಅಧ್ಯಾಯದಲ್ಲಿ, ಸಂಸತ್ತು, ಹೊಸ ರಾಜ್ಯಾಂಗದ ಅಡಿಯಲ್ಲಿ ಎಲ್ಲ ನಾಗರೀಕರಿಗೆ ಅನ್ವಯವಾಗುವಂತಹ ಒಂದು ಸಂಹಿತೆಯನ್ನು - ಆಲ್ ಇಂಡಿಯಾ ಸಿವಿಲ್ ಕೋಡ್ - ಅಂಗೀಕರಿಸಬೇಕೆಂದು ಹೇಳಿದೆ. ಈ ವಿಧೇಯಕ ಬಗ್ಗೆ ಚರ್ಚೆ ಪ್ರಾರಂಭವಾಗಿದ್ದಾಗ, ನಾವು ಒಟ್ಟಾರೆ ಬೇರೆಯೇ ಸನ್ನಿವೇಶಗಳಲ್ಲಿ ಕೆಲಸ ಮಾಡುತ್ತಿದ್ದೆವು. ಆದ್ದರಿಂದ, ಹೊಸ ಸರ್ಕಾರವು, ರಾಜ್ಯಾಂಗ ಅಂಗೀಕಾರವಾದ ಮೇಲೂ, ಸಮುದಾಯದ ಒಂದು ವರ್ಗಕ್ಕೆ ಅನ್ವಯವಾಗುವಂತಹ ವಿವರಣೆಯುಳ್ಳ ಸಂಹಿತೆಯನ್ನು ತರಹೊರಟಿರುವುದು ವಿಷಾದನೀಯ, ನಮ್ಮದು ಜಾತ್ಯಾತೀತ ರಾಷ್ಟ್ರ ಎಂದು ಹೇಳಲಾಗಿದೆ. ನಿಜ ಹೇಳಬೇಕೆಂದರೆ 'ಜಾತ್ಯಾತೀತತೆ' ಎಂಬ ಹೊಸ ರೋಗಕ್ಕೆ ನಾವು ಆಗಾಗ ತುತ್ತಾಗುತ್ತಿದ್ದೇವೆ. ಸಮುದಾಯದ ಒಂದೇ ವರ್ಗಕ್ಕೆ ಅನ್ವಯವಾಗುವಂತಹ ಕಾನೂನನ್ನು ಅಂಗೀಕರಿಸಲು ಸಂಸತ್ತಿಗೆ ಎಷ್ಟರಮಟ್ಟಿಗೆ ಅಧಿಕಾರ ಇದೆ - ನಾನು ಯಾವುದೇ ತಾಂತ್ರಿಕ ಅಂಶ ಎತ್ತುತ್ತಿಲ್ಲ - ಎಷ್ಟರ ಮಟ್ಟಿಗೆ ಅದು ಅಪೇಕ್ಷಣೀಯ ? ಕಾನೂನು ಮಂತ್ರಿಗಳು ಏನು ಉತ್ತರ ಕೊಟುತ್ತಾರೆಂಬುದು ನನಗೆ ಗೊತ್ತಿದೆ. ಏಕೆಂದರೆ, ಅವರು ತಮ್ಮ ಹಿಂದಿನ ಭಾಷಣಗಳಲ್ಲಿ ಈ ವಿಷಯದ ಬಗ್ಗೆ ಹೇಳಿದ್ದಾರೆ. ಆಲ್ ಇಂಡಿಯಾ ಸಿವಿಲ್ ಕೋಡ್ ದೇಶಕ್ಕೆ ನಿಜವಾಗಿಯೂ ಬೇಕಾಗಿದ್ದರೆ, ಅದನ್ನು ರೂಪಿಸುವಲ್ಲಿ

---

* ಸಂಸದೀಯ ನಡವಳಿಕೆ ದಿನಾಂಕ 17ನೇ ಸಪ್ಟೆಂಬರ್ 1951 (ಕಲಂ: 2705 - 2724)

ಯಾವುದೇ ತೊಂದರೆ ಇಲ್ಲವೆಂದು ಅವರು ಹೇಳಿದ್ದಾರೆ. ಉತ್ತರ ಅದೇ. ಆದರೆ, ಅಂಥದೊಂದು ಸಂಹಿತೆ ನಮಗೆ ಏಕಿರಬಾರದು ? ಈ ಸಂಹಿತೆಯಲ್ಲಿ ಹೇಳಿರುವ ಕೆಲವೊಂದು ನಿಯಮಗಳನ್ನು ಇತರ ಸಮುದಾಯಗಳಿಗೂ ಅದರಲ್ಲೂ ಮುಸ್ಲಿಮರಿಗೆ ಅನ್ವಯಿಸಲು ಉದ್ದೇಶಿಸಲಾಗಿದೆ ಎಂಬ ಬಲವಾದ ಅನುಮಾನ ನನಗಿದೆ. ಒಬ್ಬಳೇ ಹೆಂಡತಿ - ಒಬ್ಬನೇ ಗಂಡ ಪದ್ಧತಿಯನ್ನು ನಾವು ಚರ್ಚೆ ಮಾಡುತ್ತಿದ್ದೇವೆ. ಒಬ್ಬಳೇ ಹೆಂಡತಿ - ಒಬ್ಬನೇ ಗಂಡ ಪದ್ಧತಿ ಹಿಂದೂಗಳಿಗೆ ಮಾತ್ರವೇ ಅಥವಾ ಬೌದ್ಧರಿಗೆ ಮಾತ್ರವೇ ಅಥವಾ ಸಿಖ್ಖರಿಗೆ ಮಾತ್ರವೇ ಸರಿ ಎಂಬುದು ಯಾರ ಭಾವನೆಯೂ ಅಲ್ಲವೆಂದು ನಾನು ನಂಬುತ್ತೇನೆ. ನೀತಿಯ ದೃಷ್ಟಿಯಿಂದ ಒಬ್ಬಳೇ ಹೆಂಡತಿ - ಒಬ್ಬನೇ ಗಂಡ ಪದ್ಧತಿಯನ್ನು ಸಮರ್ಥಿಸುವವರು, ಈ ಪದ್ಧತಿ ಒಳ್ಳೆಯದು ಹಾಗೂ ಅದನ್ನು ಎಲ್ಲರಿಗೂ - ಈ ನಾಗರಿಕ ಪ್ರಪಂಚದ ಎಲ್ಲರಿಗಲ್ಲದಿದ್ದರೂ- ಕೊನೇಪಕ್ಷ ಈ ಸಂಸತ್ತು ಅಂಗೀಕರಿಸಿದ ಕಾನೂನಿಗೆ ಒಳಪಡುವ ಭಾರತದ ಎಲ್ಲ ನಾಗರೀಕರಿಗೂ ಅದು ಅನ್ವಯುವಾಗುವಂತೆ ಮಾಡಬೇಕೆಂಬ ಪ್ರಾಮಾಣಿಕ ಭಾವನೆಯುಳ್ಳವರೆಂದು ನಾನು ನಂಬಿದ್ದೇನೆ. ಒಬ್ಬಳೇ ಹೆಂಡತಿ - ಒಬ್ಬನೇ ಗಂಡ ಪದ್ಧತಿಯನ್ನು ಅಳವಡಿಸುವ ಹಾಗೂ ಅದನ್ನು ಎಲ್ಲ ನಾಗರಿಕರಿಗೆ ಅನ್ವಯವಾಗುವಂತೆ ಮಾಡುವ ಪ್ರತ್ಯೇಕ ವಿಧೇಯಕವನ್ನು ಏಕೆ ತರಬಾರದು ?

ಈ ವಿಚಾರದ ಮೇಲೆ ನಾನು ಹೆಚ್ಚು ಒತ್ತು ಕೊಡಹೋಗುವುದಿಲ್ಲ. ಏಕೆಂದರೆ, ಈ ವಿಧೇಯಕದ ಪ್ರವರ್ತಕರ ದೌರ್ಬಲ್ಯ ನನಗೆ ಗೊತ್ತು. ಮುಸ್ಲಿಂ ಸಮುದಾಯಕ್ಕೆ ಕೈಹಾಕುವ ಧೈರ್ಯ ಅವರಿಗೆ ಇಲ್ಲ. ಸರ್ಕಾರಕ್ಕೆ ಅದನ್ನು ತರುವ ಧೈರ್ಯ ಇಲ್ಲವೆಂದು ಭಾರತದ ಅದ್ಯಂತ ಹಲವರು ತುಂಬಾ ವಿರೋಧ ವ್ಯಕ್ತಪಡಿಸಿದ್ದಾರೆ. ಆದರೂ ನೀವು ಬಯಸುವ ರೀತಿಯಲ್ಲಿ ಹಾಗೂ ಪರಿಣಾಮಗಳೇನೆ ಆಗಲಿ, ಹಿಂದೂ ಸಮುದಾಯಕ್ಕೆ ಅದನ್ನು ನೀವು ತರಬಹುದು.

| | | |
|---|---|---|
| ಶ್ರೀ ರಾಜಗೋಪಾಲಾಚಾರಿ | : | ಏಕೆಂದರೆ ನಾವೇ ಸಮುದಾಯ |
| ಡಾ॥ ಶ್ಯಾಮಪ್ರಸಾದ್ ಮುಖರ್ಜಿ | : | ಈ ಸದನಕ್ಕೆ, ಸರ್ಕಾರಕ್ಕೆ ನನ್ನ ಮನವಿ ಏನೆಂದರೆ, ಅದಕ್ಕೆ ಬೇರೊಂದು ಆಧಾರ ಇರಬೇಕಾಗುತ್ತದೆ. ನನ್ನ ಮಾತುಗಳು ತುಂಬಾ ವಿವಾದಾಸ್ಪದವಾಗಲು ನಾನು ಬಯಸುವುದಿಲ್ಲ. |
| ಶ್ರೀ ಕಾಮತ್ | : | ಏಕಾಗಬಾರದು ? ನಿಮ್ಮಿಂದ ಎಷ್ಟು ಸಾಧ್ಯವೊ ಅಷ್ಟು ವಿವಾದಾಸ್ಪದ ಮಾಡಿ |

ಡಾ॥ ಶ್ಯಾಮಪ್ರಸಾದ್ ಮುಖರ್ಜಿ : ಸಮಾಜ ಸುಧಾರಣೆ ವಿಷಯಗಳನ್ನು, ಕೊಟ್ಟು - ತೆಗೆದುಕೊಳ್ಳುವ ಭಾವನೆಯಿಂದ ಚರ್ಚೆ ಯಾಗುವಂತಹ ವಾತಾವರಣವನ್ನು ನಾನು ಉಂಟು ಮಾಡ ಬಯಸಿದ್ದೇನೆ. ಅದು, ಗೃಹ ಮಂತ್ರಿಗಳ ಪರವಾಗಿ ಕಾನೂನು ಮಂತ್ರಿಯವರು ಮಂಡಿಸುತ್ತಿರುವ ಪತ್ರಿಕಾವಿಧೇಯ ಕದಂತಲ್ಲ. ಸಮಾಜ ಸುಧಾರಣೆಯನ್ನು ಒಳಗೊಂಡ ವಿಧೇಯಕದ ಸುಗಮ ಅಂಗೀಕಾರಕ್ಕೆ ನೆರವಾಗಲು ಸಂಸತ್ತಿನ ಹೊರಗೆ ಪೊಲೀಸರು ನಿಲ್ಲುವುದು ನಮಗೆ ಬೇಕಿಲ್ಲ. ಅದರಿಂದ ನಿಜವಾಗಿಯೂ ಯಾರಿಗೂ ಪ್ರಯೋಜನವಿಲ್ಲ. ಸಮಾಜ ಸುಧಾರಣೆಯನ್ನು ತರುವುದೇ ಯಾವುದೇ ವಿಧೇಯಕದ ಉದ್ದೇಶವಾಗಿದ್ದರೆ, ರಾಷ್ಟ್ರದ ಬಹು ಜನರ ಬೆಂಬಲ ಅದಕ್ಕಿರಲೇ ಬೇಕಾಗುತ್ತದೆ.

ಈ ದೇಶದಲ್ಲಿ ನಾವು ಸಮಾಜ ಸುಧಾರಣೆಗಳನ್ನು ತರಬಯಸಿದರೆ, ನಮಗೆ ಬೆಂಬಲವಾಗಿ ಎಷ್ಟು ಜನ ಸಾಧ್ಯವೋ ಅಷ್ಟು ಜನರು ಇರಲೇಬೇಕಾಗುತ್ತದೆ.

ಸಮಾಜ ಸುಧಾರಣೆ ವಿಷಯಗಳನ್ನು ವ್ಯವಹರಿಸಲು ಪಾರ್ಲಿಮೆಂಟಿಗೆ ಯಾವ ಹಕ್ಕೂ ಇಲ್ಲವೆಂಬ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ. ನಮ್ಮ ಪ್ರಾಚೀನ ಗ್ರಂಥಗಳಾದ ವೇದಗಳು, ಸ್ಮೃತಿಗಳು ಹಾಗೂ ಶ್ರುತಿಗಳು ಎಷ್ಟೊಂದು ಪೂಜ್ಯ ಎಂಬುದು ನನಗೆ ಗೊತ್ತು. ಪ್ರಾಚೀನ ಕಾಲದಲ್ಲಿ ನ್ಯಾಯಕರ್ತರು ಪ್ರತಿಪಾದಿಸಿದ ಶ್ರೇಷ್ಠ ತತ್ತ್ವಗಳನ್ನು ವ್ಯಾಖ್ಯಾನಕಾರರು ವ್ಯಾಖ್ಯಾನಿಸಿದ್ದಾರೆಂಬುದನ್ನು ಇತಿಹಾಸ ತಿಳಿಸುತ್ತದೆ. ಕ್ರಮೇಣ ವ್ಯಾಖ್ಯಾನಕಾರರು ಸಹ ಕಾಲಚಕ್ರದಲ್ಲಿ ಮರೆಯಾದರು. ಕಳೆದ 150 ವರ್ಷಗಳಿಂದ ಏನಾಗುತ್ತಿದೆ ಯೆಂದರೆ ಸಾಮಾಜಿಕ ಸುಧಾರಣೆ ವಿಷಯಗಳನ್ನು, ನ್ಯಾಯಾಧಿಶರು, ಯೂರೋಪಿಯನ್ ನ್ಯಾಯಾಧೀಶರು ದೂರದ ಲಂಡನ್ನಿನಲ್ಲಿ ಕುಳಿತು ಚರ್ಚಿಸುತ್ತಾರೆ, ದೇಶದ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆ ಮಾಡುತ್ತಿದ್ದಾರೆ. ಶಾಸನಕರ್ತರೂ ಸಹ ಕಾಲಕಾಲಕ್ಕೆ ಹಾಗೆಯೇ ಮಾಡುತ್ತಿದ್ದಾರೆ. ಆದ್ದರಿಂದ, ಈಗಿನ ಕಾನೂನಿನ ಅಡಿಯಲ್ಲಿ ಈ ದೇಶದ ಜನರು ಅನುಭವಿಸುತ್ತಿರಬಹುದಾದ ಹಕ್ಕುಗಳು ಹಾಗೂ ಸವಲತ್ತುಗಳಲ್ಲಿ ಬದಲಾವಣೆ ತರುವ ಶಾಸನವನ್ನು ಅಂಗೀಕರಿಸುವ ಹಕ್ಕು ಈಗ ಸಂಸತ್ತಿಗಿಲ್ಲ ಎಂದು ನಮ್ಮಲ್ಲಿ ಯಾರಾದರೂ ಹೇಳುವ ಕಾಲ ಮಿಂಚಿ ಹೋಗಿದೆ.

ಈ ಸಂಸತ್ತಿನ ಹಕ್ಕಿನ ಬಗ್ಗೆ ಹೇಳುವುದಾದರೆ, ನಿಜವಾಗಿಯೂ ಅದೊಂದು ಕ್ಲಿಷ್ಟ ವಿಷಯ, ಸಂಸತ್ತಿನ ಸದಸ್ಯನಾಗಿರುವ ನನಗೆ ಅದರ ಅಧಿಕಾರವನ್ನು ಪ್ರಶ್ನಿಸಲು ಕಷ್ಟವಾಗುತ್ತಿದೆ. ಆದರೆ, ಜನರ ಸಂಕಲ್ಪವನ್ನು ವ್ಯಕ್ತಪಡಿಸುವುದಕ್ಕೆ ಸಂಸತ್ತಿಗಿರುವ ಹಕ್ಕಿನ ವಿಷಯವನ್ನು ಮುಂದಿನ ಕೆಲವು ತಿಂಗಳಲ್ಲಿ ನಿರ್ಧರಿಸಲಾಗುತ್ತದೆ. ಜನರೇ ಸ್ವತಃ ತಮ್ಮ ತೀರ್ಮಾನವನ್ನು ಕೊಡುತ್ತಾರೆ. ಯಾವುದನ್ನು ಈ ಸದನ, ಚರ್ಚಿಸಬೇಕೆಂದು ವಾಸ್ತವಿಕವಾಗಿ, ಪ್ರಾಮಾಣಿಕವಾಗಿ ಮತ್ತು ನ್ಯಾಯೋಚಿತವಾಗಿ ಹೇಳಿಲ್ಲವೋ ಅಂಥ ವಿಷಯಗಳನ್ನು ಈ ಕಡೆ ಕುಳಿತಿರುವ ನಾವಾಗಲೀ ಅಥವಾ ಆ ಕಡೆ ಕುಳಿತಿರುವ ಸರ್ಕಾರದವರಾಗಲೀ ಚರ್ಚಿಸಬೇಕೆಂದು ಹೇಳುವುದರಿಂದ ಏನೂ ಪ್ರಯೋಜನವಿಲ್ಲ. ಈ ವಿಧೇಯಕದ ಕೆಲವು ಅಥವಾ ಹಲವಾರು ಮೂಲಭೂತ ಲಕ್ಷಣಗಳ ಬಗ್ಗೆ ಇಂದು ತುಂಬಾ ಬಲವಾದ ಅಭಿಪ್ರಾಯಗಳು ವ್ಯಕ್ತವಾಗಿವೆ. ಈ ಅಭಿಪ್ರಾಯಗಳ ಅಂತರಾಳವನ್ನು ಪರಾಮರ್ಶಿಸಬೇಕೆಂದು ಈ ವಿಧೇಯಕವನ್ನು ಬೆಂಬಲಿಸುತ್ತಿರುವ ಸದಸ್ಯರನ್ನು ನಾನು ಕೇಳಿಕೊಳ್ಳುತ್ತೇನೆ. ನಾನು ಒಪ್ಪುವ ಕೆಲವೊಂದು ಲಕ್ಷಣಗಳು ಈ ವಿಧೇಯಕದಲ್ಲಿರಬಹುದು. ಆದರೆ, ಅದನ್ನು ಸಂಪೂರ್ಣವಾಗಿ ಅಥವಾ ಭಾಗಶಃ ವಿರೋಧಿಸುತ್ತಿರುವವರ ದೃಷ್ಟಿಯಿಂದ ಈ ಕಾನೂನನ್ನು ನೋಡಲು ನಾನು ಪ್ರಯತ್ನಿಸುತ್ತಿದ್ದೇನೆ. ಈ ಕಾನೂನನ್ನು ಯಾರು ಬೆಂಬಲಿಸುತ್ತಿದ್ದಾರೋ ಅವರ ಭಾವನೆಗಳ ಆಳವನ್ನು ನಾವು ಹೇಗೆ ನೋಡಹೊರಟಿದ್ದೇವೋ ಹಾಗೆಯೇ ಅದನ್ನು ವಿರೋಧಿಸುತ್ತಿರುವವರ ಭಾವನೆಗಳ ಆಳವನ್ನು ಗಮನಕ್ಕೆ ತೆಗೆದುಕೊಳ್ಳಬೇಕು. ಪರಿಹಾರ ಕಂಡುಕೊಳ್ಳುವುದು ಹೇಗೆ ? ಪ್ರಮುಖ ಕಾರಣಗಳಿಗಾಗಿ ಈ ವಿಧೇಯಕದಲ್ಲಿನ ಕೆಲವೊಂದು ಭಾಗಗಳ ಪರಿಶೀಲನೆ ಮಾಡದಿರಲು ತೀರ್ಮಾನಿಸಲಾಗಿದೆಯೆಂಬುದು ಕಾಗದ ಪತ್ರಗಳಿಂದ ನಮಗೆ ತಿಳಿದು ಬರುತ್ತದೆ.

ಬಹುಶಃ ವಿಷಯದ ಆಯ್ಕೆಯಲ್ಲಿ ಹೊಯ್ದಾಟ ಆಗಿರುವಂತೆ ಕಾಣುತ್ತದೆ. ವಿವಾಹ ಹಾಗೂ ವಿಚ್ಛೇದನದ ವಿಷಯ ಒಂದು ಕಡೆ, ಆಸ್ತಿಪಾಸ್ತಿ ವಿಷಯ ಇನ್ನೊಂದು ಕಡೆ, ಹೇಗೋ, ಕೊನೆಯಲ್ಲಿ ವಿವಾಹ ಹಾಗೂ ವಿಚ್ಛೇದನದ ವಿಷಯ ಅಗ್ರಸ್ಥಾನಕ್ಕೆ ಬಂದು, ಆಸ್ತಿಪಾಸ್ತಿ ವಿಷಯ ಹಿಂದೆ ಸರಿದಿದೆ.

ಸದನದ ಮುಂದೆ ಪರಿಶೀಲನೆಗಾಗಿ ತಿದ್ದುಪಡಿಗಳನ್ನು ಮಂಡಿಸಲಾಗಿದೆ. ಯಾರು ಈ ಸಂಹಿತೆಯ ವ್ಯಾಪ್ತಿಗೆ ಒಳಪಡಬಯಸುತ್ತಾರೋ ಅವರು ಅದರಲ್ಲಿ ಹೇಳಿರುವ ನಿಯಮಗಳ ಸಂಪೂರ್ಣ ಉಪಯೋಗವನ್ನು ಪಡೆದುಕೊಳ್ಳುವ ಅವಕಾಶ ಕಲ್ಪಿಸುವುದಕ್ಕೆ ಹಾಗೂ ಈಗಿನ ಹಿಂದೂ ಕಾನೂನಿನಲ್ಲಿರುವ ನಿಯಮಗಳ ಪಾವಿತ್ರ್ಯತೆ, ಅಥವಾ ಕಾನೂನುಸಮ್ಮತತೆಯಲ್ಲಿ ಅಥವಾ ಅವುಗಳಿಂದ ನ್ಯಾಯ ದೊರಕುತ್ತದೆ ಎಂಬುದರಲ್ಲಿ ಯಾರಿಗೆ ನಂಬಿಕೆ ಇಲ್ಲವೋ ಅವರಿಗೆ, ಅವರು ಈಗಿನ ಹಿಂದೂ ಕಾನೂನಿನ ನಿಯಮಗಳ ವ್ಯಾಪ್ತಿಯಲ್ಲಿ ಮುಂದುವರಿಯಲು

ಅವಕಾಶ ಕಲ್ಪಿಸುವುದಕ್ಕೆ ಕೆಲವೊಂದು ವಿಧಾನವನ್ನು 2ನೇ ಉಪ-ವಿಧಿಯ ಅಡಿಯಲ್ಲಿ ರೂಪಿಸುವುದಕ್ಕೆ ನಮಗೆ ಸಾಧ್ಯವಾಗುತ್ತದೆಯೇ ?

ಪರಿಶೀಲನೆಗಾಗಿ ಸದನದ ಮುಂದೆ ಮಂಡಿಸಿರುವ ಹಲವಾರು ತಿದ್ದುಪಡಿಗಳ ಆಧಾರದ ಮೇಲೆ, ಸುಸ್ಪಷ್ಟವಾದ ರೀತಿಯಲ್ಲಿ ನಾನು ಈ ಪ್ರಸ್ತಾಪ ಮಾಡುತ್ತಿದ್ದೇನೆ.

ನಮ್ಮ ದೇಶ ಹಿಂದುಳಿದಿರುವ ಬಗ್ಗೆ ಅನೇಕ ಹೊರ ರಾಷ್ಟ್ರಗಳಲ್ಲಿ ನಾವು ಟೀಕೆಗೆ ತುತ್ತಾಗುತ್ತಿದ್ದೇವೆ ಎಂದು ಕೆಲ ಸ್ನೇಹಿತರು ನನಗೆ ಹೇಳುತ್ತಿದ್ದಾರೆ. ಕೆಲ ದಿನಗಳ ಹಿಂದೆ ಕೆಲವರು ನನ್ನಲ್ಲಿಗೆ ಬಂದು ಚೀನಾದಲ್ಲಿ ಜನರು, ಹಿಂದೂ ಕೋಡ್ ವಿಧೇಯಕ ಯಾವಾಗ ಅಂಗೀಕಾರವಾಗುತ್ತದೆ ಎಂಬುದನ್ನು ಗಮನಿಸುತ್ತಿದ್ದಾರೆಂದು ಹೇಳಿದರು । ಹಿಂದೂ ಕೋಡ್ ಬಗ್ಗೆ ಭಾರತದ ಜನರು ಯಾವ ರೀತಿಯ ಪ್ರಗತಿಪರ ಧೋರಣೆ ತಾಳುತ್ತಾರೆಂಬುದನ್ನು ಅಮೆರಿಕದಲ್ಲಿ ಕೆಲ ಜನರು ಗಮನಿಸುತ್ತಿದ್ದಾರೆಂದೂ ಕಾಣುತ್ತದೆ............

ಅಮೆರಿಕಾದ ಕಾನೂನುಗಳನ್ನು ನಾವು ನೋಡೋಣ. ಅಮೆರಿಕಾದ ಕಾನೂನುಗಳ ಬಗ್ಗೆ ಕೆಲವೊಂದು ಮಾಹಿತಿ ಪಡೆಯಲು ನಾನು ಪ್ರಯತ್ನ ಮಾಡುತ್ತಿದ್ದೆ. ಅಮೆರಿಕಾದಲ್ಲಿರುವ 26 ವಿವಿಧ ರಾಜ್ಯಗಳಲ್ಲಿ, ಅಮೆರಿಕ ಜನರ ಹಾಗೂ ನಿಗ್ರೋ ಜನರ ನಡುವೆ ವಿವಾಹಕ್ಕೆ ಅವಕಾಶ ಕೊಡುವುದಿಲ್ಲವೆಂಬುದು ನನಗೆ ಗೊತ್ತಾಯಿತು. ಆಫ್ರಿಕನ್ ವಂಶ ಲಕ್ಷಣ ಸ್ವಲ್ಪವಿದ್ದರೂ ಸಾಕು, ಅಮೆರಿಕಾ ಹಾಗೂ ನಿಗ್ರೋ ಜನರ ನಡುವೆ ವಿವಾಹಕ್ಕೆ ಅವರು ಒಪ್ಪುವುದೇ ಇಲ್ಲ. ಅಲ್ಲಿನ ಕೆಲವು ರಾಜ್ಯಗಳಲ್ಲಿ ಅಮೆರಿಕಾ ಹಾಗೂ ಚೀನಾ ಜನರ ಅಥವಾ ಅಮೆರಿಕಾ ಹಾಗೂ ಮಂಗೋಲಿಯ ಜನರ ನಡುವೆ ವಿವಾಹವನ್ನು ನಿಷೇಧಿಸಲಾಗಿದೆ. ವಾಸ್ತವಿಕವಾಗಿ ಅಲ್ಲಿನ ಎಲ್ಲ ರಾಜ್ಯಗಳಲ್ಲಿ ಬೇರೆ ಬೇರೆ ವಿವಾಹ ಕಾನೂನುಗಳಿವೆ. ಅಂದಮೇಲೆ, ಏಕರೂಪತೆ ಎಲ್ಲಿದೆ ? ಅಲ್ಲಿ, ಎಲ್ಲ ವಿವಾಹ ಕಾನೂನುಗಳಲ್ಲಿ ಸಂಪೂರ್ಣವಾಗಿ ಏಕರೂಪತೆ ಇಲ್ಲದಿದ್ದರೂ ಅಮೆರಿಕಾದ ಜನರು ಸಂತೋಷದಿಂದ, ನೆಮ್ಮದಿಯಿಂದ ಬದುಕುತ್ತಿದ್ದಾರೆಂದು ನಾನು ಭಾವಿಸಿದ್ದೇನೆ. ಆದ್ದರಿಂದ, ಈ ವಿಷಯದಲ್ಲಿ ಏಕರೂಪತೆ ಎಂಬುದು ಕೊನೆಯ ಮಾತಲ್ಲ. ಏಕರೂಪತೆಯಲ್ಲಿ ಜಡತೆ, ನಿಶ್ಚೇತನ ಅಡಗಿರುತ್ತದೆ.

ನಮ್ಮ ದೇಶವೇ ತೋರಿದ ಮಾರ್ಗವನ್ನು ನಾವು ಅನುಸರಿಸಬೇಕೆಂದು ನಾನು ಸಲಹೆ ಮಾಡುತ್ತೇನೆ. ರೋಮನ್ ಕೆಥೋಲಿಕ್ಕರನ್ನೇ ತೆಗೆದುಕೊಳ್ಳಿ. ಅವರ ಕಟ್ಟುನಿಟ್ಟಿನ ಕಾನೂನಿನ ಪ್ರಕಾರ, ಅವರ ಧರ್ಮದ ಪ್ರಕಾರ, ವಿಚ್ಛೇದನಕ್ಕೆ ಅವಕಾಶ ಇಲ್ಲ. ಆದರೆ, ಬಹುತೇಕ ಎಲ್ಲ ದೇಶಗಳೂ ನಾಗರಿಕ ಕಾನೂನುಗಳನ್ನು ಅಂಗೀಕರಿಸಿವೆ. ಅವಶ್ಯಕವಾದರೆ, ವಿಚ್ಛೇದನಕ್ಕೆ ರೋಮನ್ ಕೆಥೋಲಿಕ್ಕರಿಗೆ ಅವಕಾಶ ಕೊಟ್ಟಿವೆ. ಆದರೆ, ಅವು ಧರ್ಮದ ಬಗ್ಗೆ ಚಕಾರ ಎತ್ತಿಲ್ಲ. ಬೇರೆ ಬೇರೆಯಾಗಲು ಅವು ಅವಕಾಶ ಕೊಟ್ಟಿವೆ. ಆದರೆ, ರೋಮನ್ ಕೆಥೋಲಿಕ್ಕರಲ್ಲಿ

ಯಾರು ನಾಗರಿಕ ಕಾನೂನುಗಳ ವ್ಯಾಪ್ತಿಯಲ್ಲಿರ ಬಯಸಿದ್ದಾರೋ ಅಂಥವರಿಗೆ ಆ ಅವಕಾಶ ಇದೆ. ಈ ಕಾನೂನುಗಳು ಸಿಗುತ್ತಿಲ್ಲ. ತುಂಬಾ ಕಷ್ಟ. ಆದರೂ, ಸಂಸತ್ತಿನ ಗ್ರಂಥಾಲಯದಲ್ಲಿ ಯಾವ ಯಾವ ಪುಸ್ತಕಗಳಿವೆಯೋ ಅವುಗಳನ್ನೇ ಓದುವ ಪ್ರಯತ್ನ ಮಾಡಿದ್ದೇನೆ. ಈ ಎರಡು ಪದ್ಧತಿಗಳ ನಡುವೆ ಸ್ಪಷ್ಟ ವ್ಯತ್ಯಾಸ ಇರುವುದು ನನಗೆ ಕಂಡುಬಂದಿದೆ.

ಈಗಿನ ವಿವಾಹ ವಿಚ್ಛೇದನ ಪದ್ಧತಿಗೆ ನಮ್ಮನ್ನು ನಾವೇ ಸೀಮಿತಗೊಳಿಸಿ ಕೊಳ್ಳುತ್ತಿದ್ದೇವೆ. ಈ ದೇಶದಲ್ಲಿ ಪ್ರಗತಿಪರವಾದಿಗಳನ್ನು, ಪ್ರಗತಿಪರವಾದಿ ಮಹಿಳೆಯರನ್ನು ಯಾವುದು ಕಾಡುತ್ತಿದೆ ? ವಿಚ್ಛೇದನಕ್ಕೆ ಅವಕಾಶ ಇರಬೇಕೆಂದು ಮತ್ತು ಒಬ್ಬನೇ ಗಂಡ ಒಬ್ಬಳೇ ಹೆಂಡತಿ ಪದ್ಧತಿಗೆ ಅವಕಾಶ ಇರಬೇಕೆಂದು ಅವರು ತವಕಪಡುತ್ತಿದ್ದಾರೆ. ಈ ಎರಡು ವಿಷಯಗಳಿಗೆ ತುಂಬಾ ಒತ್ತು ಕೊಡಲಾಗಿದೆ. ಈಗ ವಿಚ್ಛೇದನವನ್ನೇ ನೋಡೋಣ. ವಿಚ್ಛೇದನಕ್ಕೆ ಅನುಮತಿ ಕೊಟ್ಟಿರುವ, ಭಾರತೀಯ ಶಾಸಕಾಂಗಗಳು ಅಂಗೀಕರಿಸಿರುವ, ಕಾನೂನುಗಳು ನಿಮ್ಮಲ್ಲಿವೆ. ನಾಗರಿಕ ಕಾನೂನುಗಳ ಪ್ರಕಾರ, ತಾನು ಹಿಂದೂ ಅಲ್ಲ ಎಂದು ಘೋಷಿಸಿಕೊಳ್ಳದ ಹೊರತು, ಹಿಂದೂ ವ್ಯಕ್ತಿ ಮದುವೆ ಆಗುವಂತಿಲ್ಲ. ಅದನ್ನು ಬದಲಾಯಿಸಲಾಗಿದೆ. ಒಬ್ಬ ಹಿಂದೂ ವ್ಯಕ್ತಿ, ಹಿಂದೂ ವ್ಯಕ್ತಿ ಆಗಿದ್ದುಕೊಂಡೇ ತನ್ನ ಅಥವಾ ತನ್ನ ಸಂಗಾತಿಯ ಇಷ್ಟಾನುಸಾರ ಮದುವೆ ಆಗಬಹುದಾಗಿದೆ. ಹಾಗೆಯೇ, ಅಂತರ - ಜಾತಿ ವಿವಾಹದ ವಿಷಯದಲ್ಲೂ ನೀವು, ಈಗಾಗಲೇ ಕಾನೂನುಗಳನ್ನು ಮಾಡಿದ್ದೀರಿ, ವ್ಯಕ್ತಿಯ ಹಿಂದೂ ಲಕ್ಷಣವನ್ನು ತೆಗೆದುಹಾಕದೆ, ಅಂತರ - ಜಾತಿ ವಿವಾಹಗಳಿಗೆ ಅನುಮತಿ ಕೊಟ್ಟಿದ್ದೀರಿ. ಸಗೋತ್ರ ವಿವಾಹ ಸಲ್ಲದೆಂದು ಬಹುಸಂಖ್ಯಾತ ಜನರು ಭಾವಿಸಿದ್ದರೂ, ಶಾಸನ ಸಭೆಯು, ಕಾನೂನಿನಲ್ಲಿ ಅದಕ್ಕೆ ಮಾನ್ಯತೆ ಕೊಟ್ಟಿದೆ.

ಪ್ರಗತಿಪರ ಬೆಳವಣಿಗೆಗೆ - ನಾನು ಹಾಗೆಂದು ಹೇಳಲಿಚ್ಛಿಸುತ್ತೇನೆ - ಅಥವಾ ವಿವಾಹ ಕಾನೂನುಗಳಿಗೆ ಇದ್ದ ಬೇಡಿಕೆಯನ್ನು ಈ ದೇಶದ ಶಾಸನಸಭೆಗಳು ಹೇಗೆ ಈಡೇರಿಸಿವೆಯೆಂಬುದನ್ನು ಈ ಸಂಗತಿಗಳು ಸೂಚಿಸುತ್ತವೆ. ಈ ವಿಷಯ ಸಂವಿಧಾನದಲ್ಲಿ ಸಮವರ್ತಿ ಪಟ್ಟಿಯಲ್ಲಿ ಸೇರಿದೆ. ಈ ವಿಷಯದ ಮೇಲೆ ಮುಂಬಯಿ ಹಾಗೂ ಮದ್ರಾಸ್, ಕಾನೂನುಗಳನ್ನು ಮಾಡಿವೆ ಎಂದು ನಾನು ಭಾವಿಸಿದ್ದೇನೆ. ಜನರ ಇಚ್ಛೆಗೆ ತಕ್ಕಂತೆ, ಅವಕಾಶಗಳಿರುವ ಒಂದಲ್ಲ ಒಂದು ರೀತಿಯ ಪ್ರಾಂತೀಯ ಕಾನೂನುಗಳನ್ನು ಹಲವಾರು ರಾಜ್ಯಗಳು ಅಂಗೀಕರಿಸಿವೆ.

ಹೊಸ ಕಾನೂನುಗಳಿಗೆ ಎಲ್ಲ ಹಿಂದೂಗಳನ್ನು ಬದ್ಧರನ್ನಾಗಿ ಮಾಡಲು ನೀವೇಕೆ ಇಚ್ಛಿಸುತ್ತಿದ್ದೀರಿ ? ತನ್ನ ಸಂಗಾತಿಯ ಇಚ್ಛೆಗೆ ವಿರುದ್ಧವಾಗಿ ಜನರು ವಿಚ್ಛೇದನ ಪದ್ಧತಿಯ ಪ್ರಯೋಜನ ಪಡೆದುಕೊಳ್ಳುವುದಕ್ಕೆ ನೀವು ಆಸ್ಪದ ಕೊಡಬಾರದು. ಅದೊಂದು, ಅವಕಾಶ ಕಲ್ಪಿಸುವ ನಿಯಮ. ಆ ಅವಕಾಶ ಈಗಾಗಲೇ ಅಸ್ತಿತ್ವದಲ್ಲಿದೆ.

ಹೀಗಿರುವಾಗ, ಲಕ್ಷಾಂತರ ಜನರ ಭಾವನೆಗಳಿಗೆ ಯಾವ ಹೊಡೆತ ಕೊಡ ಹೊರಟಿದ್ದೀರಿ ? ವ್ಯಕ್ತಿಯ ವಿವಾಹ ಸಂಸ್ಕಾರವನ್ನು ಈಗ ನೀವು ಕಾಗದದ ಮೇಲೆ ತಂದಿದ್ದೀರಿ. ಅದಕ್ಕೆ ಸ್ವಲ್ಪ ಪೌರಸ್ತ್ಯ ಸಂಸ್ಕೃತಿಯ ಹಾಗೂ ಆಕರ್ಷಕ ವರ್ಣನೆ ಕೊಡುವ ಸಲುವಾಗಿ ಅದರ ವಿವರಣೆಯನ್ನು 'ಆಚರಣೆ, ಬದಲು 'ಧಾರ್ಮಿಕ' ಎಂದು ಬದಲಾಯಿಸಿದ್ದೀರಿ. ಆದರೆ, ತಿರುಳು ಬದಲಾಗಿಲ್ಲ. ಈ ವಿಧೇಯಕವನ್ನು ಬೆಂಬಲಿಸುತ್ತಿರುವ ಸದನದ ಸದಸ್ಯರುಗಳಿಗೆ ನಾನು ಗಂಭೀರವಾಗಿ ಕೇಳಬಯಸುತ್ತೇನೆ. ಈ ಪ್ರಸ್ತಾವನೆಯಿಂದ ನೀವು ಏನು ಸಾಧಿಸಹೊರಟಿದ್ದೀರಿ ?

ವಿವಾಹ ಸಂಸ್ಕಾರ ಆಚರಣೆ ಬಗ್ಗೆ ಹೇಳುವುದಾದರೆ, ಅದೇ ಲಕ್ಷಾಂತರ ಜನರ - ವಿದ್ಯಾವಂತರ, ಅವಿದ್ಯಾವಂತರ, ಅಕ್ಷರಸ್ಥರ, ಅನಕ್ಷರಸ್ಥರ - ಮನದಾಳದಲ್ಲಿ ಹುದುಗಿರುವ ವಿಚಾರಧಾರೆ. ಅದೇ ಹಿಂದೂ ವಿವಾಹದ ಅವಿಭಾಜ್ಯ ಸ್ವರೂಪ. ಅದು, ಧರ್ಮ ಶ್ರದ್ಧೆಗೆ ಸೇರಿದ್ದು. ಕೇವಲ ಗಂಡು ಹೆಣ್ಣಿನ ವಿಷಯ ಅಲ್ಲ. ನನ್ನ ಪ್ರಾಂತ್ಯದಲ್ಲಷ್ಟೇ ಅಲ್ಲ. ಭಾರತದ ಹಲವಾರು ಭಾಗಗಳ ಜನರೊಂದಿಗೆ ನಾನು ಮತನಾಡಿದ್ದೇನೆ. ಅದೇ ಲಕ್ಷಾಂತರ ಜನರ ಮನದಾಳದಲ್ಲಿ ಹುದುಗಿದೆ. ಹಲವಾರು ಕಾರಣಗಳಿಂದಾಗಿ, ಯಾವುದೇ ವಿಚ್ಛೇದನ ಕಾನೂನಿನ ಪ್ರಯೋಜನ ಪಡೆಯುವ ಭಾವನೆ ಎಳ್ಳಷ್ಟೂ ಇರದ ಜನರು ಈ ವಿಷಯ ತಿಳಿದು ಆಶ್ಚರ್ಯಚಕಿತರಾಗಿದ್ದಾರೆ. ವಿಚ್ಛೇದನದ ಆಧುನಿಕ ವಿಧಾನದ ಪ್ರಯೋಜನ ಪಡೆಯಬಯಸುವ ಅಥವಾ ಹಿಂದೂ ಧಾರ್ಮಿಕ ವಿವಾಹ ವಿಧಾನ ಬೇಡವೆಂದು ಬಯಸುವ ಹಿಂದೂಗಳು ಒಂದು ವೇಳೆ ಈಗ ಈ ದೇಶದಲ್ಲಿ ಇದ್ದ ಪಕ್ಷದಲ್ಲಿ ಈಗಿನ ಕಾನೂನಿನ ಅಡಿಯಲ್ಲಿ ಅವರಿಗೆ ಸಾಕಷ್ಟು ಅವಕಾಶಗಳು ಇವೆಯೆಂದು ಸುಧಾರಣಾವಾದಿಗಳಾದ ಹಲವಾರು ಜನ ಹೇಳುತ್ತಿದ್ದಾರೆ. ಕಾನೂನನ್ನು ಅತ್ಯಾಧುನಿಕವನ್ನಾಗಿ ಮತ್ತು ಸಂಪೂರ್ಣವಾಗಿ ಹೊಸದನ್ನಾಗಿ ಮಾಡುವುದಾದರೆ, ಅಂಥವರ ಪ್ರಯೋಜನಕ್ಕಾಗಿ ಕಾನೂನನ್ನು ಪರಿಷ್ಕರಿಸಿ. ಆದರೆ, ಮೂಲಭೂತವಾದ ಹಾಗೂ ಅತಿ ಪವಿತ್ರ ಸ್ವರೂಪದ ಹಿಂದೂ ವಿಧಾನವನ್ನೇಕೆ ಕಿತ್ತೊಗೆಯಬೇಕು ? ಅದರಿಂದ ನಿಮಗೇನು ಲಾಭ ? ಈ ಪ್ರಶ್ನೆಗೆ ಸಮಾಧಾನಕರ ಉತ್ತರ ಪಡೆಯಲು ನನ್ನಿಂದ ಸಾಧ್ಯವಾಗಿಲ್ಲ. ಹೊಸ ವಿಧಾನಗಳನ್ನು ಎಲ್ಲ ಹಿಂದೂಗಳೂ ಕಡ್ಡಾಯವಾಗಿ ಅಳವಡಿಸಿಕೊಳ್ಳುತ್ತಾರೆಂಬುದು ಯಾರ ಭಾವನೆಯೂ ಅಲ್ಲ. ಸ್ಪಷ್ಟವಾಗಿ ಹೇಳುವುದಾದರೆ, ಯಾರದೂ ಅಲ್ಲ. ಅದ್ದರಿಂದ, ಆಯ್ಕೆ ಸ್ವಾತಂತ್ರ್ಯ ಕೊಟ್ಟರೆ ಹಾಗೂ ಆಯ್ಕೆ ಮಾಡಿಕೊಂಡು ಜನರು ಪ್ರಯೋಜನ ಪಡೆದುಕೊಂಡರೆ, ನಿಮ್ಮ ಉದ್ದೇಶ ಈಡೇರಿದಂತೆಯೇ.

ಇಂದಿನ ಭಾರತದಲ್ಲೂ, ಶೂದ್ರರಲ್ಲಿ ಸುಮಾರು ಶೇಕಡಾ 90 ರಷ್ಟು ಜನರಲ್ಲಿ, ಒಂದಲ್ಲ ಒಂದು ರೀತಿಯಲ್ಲಿ ವಿವಾಹ ವಿಚ್ಛೇದನ ಅಥವಾ ವಿಘಟನೆ ಅಸ್ತಿತ್ವದಲ್ಲಿದೆಯೆಂದು ನನಗೆ ಹೇಳಿದ್ದಾರೆ. ಒಳ್ಳೆಯದೇ ಆಯಿತಲ್ಲ. ಉತ್ತರ ಅಲ್ಲೇ ಇದೆ. ಯಾವುದಾದರೂ ಜಾತಿ

ಹಾಗೂ ಸಮುದಾಯಗಳು ವಿವಾಹ ವಿಚ್ಛೇದನ ಇರಬೇಕೆಂದು ಬಯಸಿದರೆ. ಅದಕ್ಕೆ ಅವಕಾಶ ಕಲ್ಪಿಸಿರುವ ಹಿಂದೂ ಕಾನೂನು ನಿಮ್ಮಲ್ಲಿದೆ. ಭಾರತದ ಜನಸಂಖ್ಯೆಯಲ್ಲಿ ಇನ್ನುಳಿದ ಸುಮಾರು ಶೇಕಡಾ 10 ಅಥವಾ 15 ರಷ್ಟು ಜನರು ಈ ಬದಲಾವಣೆಗಳನ್ನು ಏಕೆ ವಿರೋಧಿಸುತ್ತಿದ್ದಾರೆಂದು ನೀವು ಕೇಳಬಹುದು. ನೀವು ಮುನ್ನಡೆಯ ಬಯಸಿದರೆ ಅಥವಾ ಹಿಂದೆ ಸರಿಯ ಬಯಸಿದರೆ - ಹಿಂದೊ, ಮುಂದೋ - ನೀವು ಆ ರೀತಿ ಮಾಡಬಹುದು. ಆದರೆ, ನಿಮ್ಮನ್ನು ನಂಬದ ಹಾಗೂ ಪರಿಪೂರ್ಣ ನೈತಿಕ ತಳಹದಿಯುಳ್ಳ ಮತ್ತು ಮಾನವ ಘನತೆಯ ಅತ್ಯುನ್ನತ ಮೌಲ್ಯಗಳಿಗೆ ಅನುಸಾರವಾಗಿರುವಂತಹ ಯಾವುದರಲ್ಲೋ ನಂಬಿಕೆ ಉಳ್ಳಂತಹ ಇತರರನ್ನು ನೀವೇಕೆ ಎಳೆಯುತ್ತಿದ್ದೀರಿ ? ಈ ಮೂಲಭೂತ ಪ್ರಶ್ನೆಗೆ ಯಾವುದೇ ಉತ್ತರ ಪಡೆಯಲು ನನ್ನಿಂದಾಗುತ್ತಿಲ್ಲ.

ನಮ್ಮ ಪದ್ಧತಿ ಹಿಂದಿನ ಕಾಲದ್ದು ಎಂಬ ಮಾತು ಆಗಾಗ ಕೇಳಿ ಬರುತ್ತಿದೆ. ಹಿಂದೂ ಸಮಾಜ, ಪ್ರಚಂಡ ಏಳು ಬೀಳುಗಳ ಹೊಡೆತಕ್ಕೆ ಸಿಲುಕಿದ್ದರೂ, ತನ್ನ ಅಸ್ತಿತ್ವವನ್ನು ಉಳಿಸಿ ಕೊಂಡು ಬಂದಿರುವ ರೀತಿಯನ್ನು ಹೊಗಳಿರುವ ಶ್ರೇಷ್ಠ ಭಾರತೀಯ ಹಾಗೂ ಪಾಶ್ಚಿಮಾತ್ಯ ವಿದ್ವಾಂಸರ ಗ್ರಂಥಗಳಿಂದ ಆಯ್ದ ಭಾಗಗಳು ನನ್ನಲ್ಲಿವೆ. ಹಿಂದೂ ಸಮಾಜದಲ್ಲಿ ಎಲ್ಲವೂ ಸರಿಯಾಗಿದೆ ಎಂದು ಈ ಕ್ಷಣ ನಾನು ಹೇಳುತ್ತಿಲ್ಲ. ತಪ್ಪುಗಳು ಎಲ್ಲಿವೆ ಎಂಬುದು ನನಗೆ ಗೊತ್ತಿದೆ. ಆದರೆ, ಹಿಂದೂಗಳು, ಹಿಂದಿನ ತಲೆಮಾರುಗಳಿಂದ, ಸಾವಿರಾರು ವರ್ಷಗಳಿಂದಲೂ ನಂಬಿಕೊಂಡು ಬಂದಿರುವಂಥ ನಮ್ಮ ಧರ್ಮ ಅಥವಾ ಪರಮ ಸತ್ಯಗಳು ಈಗಲೂ ಉಳಿದುಕೊಂಡುಬಂದಿರುವುದು ಹಾಗೂ ಬೇರೆಲ್ಲೂ ಕಾಣಿಸಿಗದಂತಹ, ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುವ ಸಾಮರ್ಥ್ಯ ಮತ್ತು ಸತ್ವವನ್ನು ತೋರಿರುವುದು ನಿಜಕ್ಕೂ ಆಶ್ಚರ್ಯಕರ, ಅಭೂತಪೂರ್ವ, ಕಾರಣ ಏನು ? ಪ್ರಾಚೀನ ಕಾಲದ ಮಹಾಜ್ಞಾನಿಗಳು ಅಥವಾ ಋಷಿಮುನಿಗಳು ಪ್ರತಿಪಾದಿಸಿದ ಅಥವಾ ಅವರ ನಂತರದವರು ವ್ಯಾಖ್ಯಾನಿಸಿದ ಆ ಎಲ್ಲ ಪರಮ ಸತ್ಯಗಳು ಕೇವಲ ಶಾಸ್ತ್ರಾಧಾರಿತವಾದವುಗಳಾಗಿರಲಿಲ್ಲ. ಎಂಬುದೇ ಕಾರಣ, ಸಮಾಜದ ಅಗತ್ಯತೆಗಳಲ್ಲಿ ಬದಲಾವಣೆ ಆದಾಗಲೆಲ್ಲ ನ್ಯಾಯ ಪದ್ಧತಿಗಳಲ್ಲಿ ಬದಲಾವಣೆಗಳಾಗಿವೆ. ಬಹು ವಿಶಾಲವಾದ ನಮ್ಮ ದೇಶ - ರಾಜಕೀಯವಾಗಿ ಮೈದೆಳೆದಿರುವ ಇಂದಿನ ನಮ್ಮ ಭಾರತ - ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಬಲಾಢ್ಯ ರಾಷ್ಟ್ರವಾಗಿ ಬೆಳೆಯುವುದನ್ನು ನಾವು ನೋಡಬಯಸಿದ್ದೇವೆ. ಆದರೆ, ಈ ದೇಶದ ಹಲವಾರು ಭಾಗಗಳಲ್ಲಿ, ಪಟ್ಟಣಗಳಲ್ಲಿ ವಿದ್ಯಾವಂತರು, ಅವಿದ್ಯಾವಂತರು, ದೂರದೃಷ್ಟಿಯುಳ್ಳವರು, ಭಾವನಾ ಪ್ರಪಂಚಿಗಳು ಸಾವಿರಾರು ಜನರು ನೆಲಸಿದ್ದಾರೆ. ಹೇಗೋ ಸಮಾಜ ವಿಕಸನಗೊಂಡಿದೆ. ಪ್ರಚಂಡ ಆಕ್ರಮಣಗಳಿಗೆ ತುತ್ತಾದರೂ ಸಾಮಾಜಿಕ ವ್ಯವಸ್ಥೆ ಅಖಂಡವಾಗಿ ಉಳಿದಿರುವಂತಹ ಯಾವುದೇ ರಾಷ್ಟ್ರ ನಿಮಗೆ ಕಂಡುಬಂದಿದೆಯೇ ?

ಭಾರತ ಏಳು ನೂರು ವರ್ಷಗಳ ಕಾಲ ಮುಸ್ಲಿಂ ಆಳ್ವಿಕೆಗೆ ಒಳಪಟ್ಟಿತ್ತು. ಆ ಕಾಲದಲ್ಲಿ ಅನೇಕ ತತ್ವಗಳು ಹೊಮ್ಮಿದ್ದವು. ಅವು, ಇಂದಿನ ಸನ್ನಿವೇಶಗಳು, ಸಂದರ್ಭಗಳಲ್ಲಿ ಕೇವಲ ಸಂಪ್ರದಾಯಗಳಾಗಿ ತೋರಬಹುದು. ಆದರೆ, ಅವು, ಅಂದಿನ ಸಮಾಜದ ಸಂರಕ್ಷಣೆಯ ಮತ್ತು ಬಲವರ್ಧನೆಯ ಕಟ್ಟುಪಾಡುಗಳಾಗಿದ್ದವು. ಆದ್ದರಿಂದಲೇ, ಆ ನಿರ್ದಿಷ್ಟ ತತ್ವಗಳನ್ನು, ಇಂದು ಸಂಸತ್ತಿನಲ್ಲಿ ಕುಳಿತಿರುವ ನಮಗಾರಿಗಿಂತಲೂ ಯಾವುದೇ ರೀತಿಯಲ್ಲೂ ಕಡಿಮೆ ಅಲ್ಲದ, ಅಧಿಕಾರ ವಾಣಿಯಿಂದ ಪ್ರತಿಪಾದಿಸುವ ವಿದ್ವತ್ತು, ಶಕ್ತಿ ಸಾಮರ್ಥ್ಯ ಇದ್ದಂತಹ ಪ್ರಜ್ಞಾವಂತರೇ ಪ್ರತಿಪಾದಿಸಿದ್ದಾರೆ.

ಈ ದೇಶದಲ್ಲಿ ಕಾಲಕಾಲಕ್ಕೆ ಅಂದೋಲನಗಳು ಆಗಿವೆ. ಬ್ರಹ್ಮಸಮಾಜ, ಆರ್ಯ ಸಮಾಜವನ್ನು ಉಲ್ಲೇಖಿಸಲಾಗಿದೆ. ಒಂದು ಪರಂಪರೆ ಪ್ರಾರಂಭವಾದ ಕೂಡಲೇ ಸಮಾಜ ಜಡವಾಗುತ್ತದೆಂದು, ಸಂಪ್ರದಾಯಬದ್ಧವಾಗುತ್ತದೆಂದು ಹೇಳಲಾಗುತ್ತಿದೆ. ಈ ನಾಡಿನಲ್ಲಿ ಕೆಲವರು ಮಹಾನ್ ವ್ಯಕ್ತಿಗಳು, ಭಾರತೀಯ ಜ್ಞಾನ ಸಂಪತ್ತಿನ ಆದಿಮೂಲ ಆಕರಗ್ರಂಥಗಳಾದ ವೇದಗಳು ಅಥವಾ ಉಪನಿಷತ್‌ಗಳಿಗೆ ತಮ್ಮದೇ ಆದ ವ್ಯಾಖ್ಯಾನ ಕೊಟ್ಟಿದ್ದಾರೆ, ಸಾಂಪ್ರದಾಯ ವಾದದ ಕೆಡುಕುಗಳು ಹೆಚ್ಚಾಗದಂತೆ ಅಥವಾ ನೈತಿಕತೆ ಹಾಳಾಗದಂತೆ ತಡೆಯಲು ಪ್ರಯತ್ನಿಸಿದ್ದಾರೆ. ಆದರೆ, ಇಂದು ಏನಾಗಿದೆ ? ಸುಮಾರು ನೂರು ವರ್ಷಗಳ ಹಿಂದೆ, ಈ ದೇಶದಲ್ಲಿ, ಬ್ರಹ್ಮೊಸಮಾಜ ಪ್ರತಿಪಾದಿಸಿದ್ದ ಸಿದ್ಧಾಂತವನ್ನು, ನೀವು, ಇಂದು, ಹಿಂದೂ ಸಮಾಜವೆಂದು ಯಾವುದನ್ನು ಕರೆದಿದ್ದಿರೋ ಆ ಹಿಂದೂ ಸಮಾಜವೇ ತನ್ನಲ್ಲಿ ಲೀನಗೊಳಿಸಿಕೊಂಡಿದೆ.

ಬೇರೊಂದಿನ ನಾವು ಬೌದ್ಧಮತದ ಬಗ್ಗೆ ಚರ್ಚಿಸುತ್ತಿದ್ದೆವು, ಬೌದ್ಧಮತದ ಬಗ್ಗೆ ಡಾ॥ ಅಂಬೇಡ್ಕರವರು ನಿರರ್ಗಳವಾಗಿ ಅಧಿಕಾರ ವಾಣಿಯಿಂದ ಮಾತನಾಡಬಲ್ಲವರು. ಕೆಲವರು ಸ್ನೇಹಿತರು ಭಾರತದ ಹೊರಗಿನಿಂದ ಬಂದಿದ್ದಾರೆ. ಮಹಾಬೋಧಿ ಸಂಘಕ್ಕೂ ನನಗೂ ಸ್ವಲ್ಪ ಸಂಬಂಧ ಇದೆ. ನಾನು ಬೌದ್ಧ ಅಲ್ಲದಿದ್ದರೂ ನಾನು ಅದರ ಅಧ್ಯಕ್ಷನಾಗಿದ್ದೇನೆ. ನಾನೊಬ್ಬ ಹಿಂದೂ, ಆದರೂ, ಅದರ ಅಧ್ಯಕ್ಷ ಬೌದ್ಧ ಮತದ ಶ್ರೇಷ್ಠತೆಯನ್ನು ನಾನು ಉದಾರವಾಗಿ ಒಪ್ಪಿಕೊಂಡರೂ ನಾನು ಹಿಂದೂ ಆಗಿಯೇ ಇದ್ದೇನೆ. ನಾನು ಏನನ್ನು ಹೇಳ ಹೊರಟಿದ್ದೇನೆಂದರೆ, ಭಾರತದ ಹೊರಗಿನಿಂದ ಬಂದ ಕೆಲ ಸ್ನೇಹಿತರು, ಆರೋಪದ ಧಾಟಿಯಲ್ಲಿ ನನ್ನನ್ನು ಕೇಳಿದರು:

"ಭಾರತ, ಬುದ್ಧನ ಜನ್ಮಭೂಮಿ. ಆದರೆ, ಭಾರತ, ಭೌದ್ಧಮತವನ್ನು ಸಾಯಿಸಿತು." ಈಗ, ಆ ವಿವಾದಾತ್ಮಕ ಹೇಳಿಕೆಗಳ ಬಗ್ಗೆ ಮಾತನಾಡ ಹೋಗುವುದಿಲ್ಲ. ಆದರೆ, ಒಂದು ಮುಖ್ಯ ಸಂಗತಿ ಅದರಿಂದ ತಿಳಿದುಬರುತ್ತದೆ. ಅದೇನೆಂದರೆ, ಬುದ್ಧ ತನ್ನ ಸಿದ್ಧಾಂತಗಳನ್ನು ಬೋಧಿಸಲು ಪ್ರಾರಂಭಿಸಿದಾಗ ಪ್ರಪಂಚವನ್ನಷ್ಟೇ ಅಲ್ಲ, ಭಾರತವನ್ನು ಉಳಿಸಲು ಭಾರತಕ್ಕೆ

ಬುದ್ಧ ಬೇಕಾಗಿದ್ದ. ಹಿಂದೂ ನಾಗರೀಕತೆಯ ಜೀವಾಳವನ್ನು ಹಾಳು ಮಾಡುವುದರಲ್ಲಿದ್ದ ಕೆಲ ದುಷ್ಟ ಶಕ್ತಿಗಳು ಬೆಳೆಯುವುದನ್ನು ತಡೆಯುವುದರಲ್ಲಿ ಬುದ್ಧ ಸಫಲನಾದ. ಬುದ್ಧನನ್ನು 'ಅವತಾರ'ವೆಂದು ಹಿಂದೂಗಳೇ ಪರಿಭಾವಿಸಿದರು. ಭಾರತದಲ್ಲಿ ಬೌದ್ಧಮತದ ವಿರುದ್ಧ ಹೋರಾಡಿದ ಜನರು ಇದ್ದರಾದರೂ - ಅವರು ಹಾಗೆ ಮಾಡಿದ್ದು ಸರಿಯೇ, ತಪ್ಪೇ ಎನ್ನುವ ವಿಷಯಕ್ಕೆ ಈಗ ನಾನು ಹೋಗುವುದಿಲ್ಲ - ಕಾಲ ಕಳೆದಂತೆ, ಭಾರತದ ನೆಲದಲ್ಲಿ ಬೌದ್ಧಮತ ಹುಟ್ಟಿದೆ, ಭಾರತೀಯ ಸಂಸ್ಕೃತಿ ಅದನ್ನು ತನ್ನದಾಗಿಸಿಕೊಳ್ಳಬೇಕಿತ್ತು ಎಂಬುದು ಅರಿವಾಗತೊಡಗಿತು.

ಬೌದ್ಧಮತ ಬೇರೆ ದೇಶಗಳಲ್ಲಿ ಹಬ್ಬಿತು. ಆದರೆ, ಬೌದ್ಧಮತೀಯ ತತ್ವಗಳು ಕ್ರಮೇಣ ಹಿಂದೂ ಸಿದ್ಧಾಂತದಲ್ಲಿ ಸೇರಿಹೋದವು. ನಾನು ಇದನ್ನೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ, ಹಿಂದೂ ನಾಗರೀಕತೆ ಅಥವಾ ಹಿಂದೂ ಸಂಸ್ಕೃತಿಯು ಸ್ಥಿರ ಸ್ವರೂಪದ್ದು ಅಥವಾ ಜಡ ಸ್ವರೂಪದ್ದು ಅಥವಾ ನಶಿಸಿ ಹೋಗುವಂಥದ್ದು ಎಂದು, ಯಾರೇ ಆಗಲಿ, ಟೀಕಿಸುವುದನ್ನು ಅದರಲ್ಲೂ ಮುಖ್ಯವಾಗಿ ವಿದೇಶೀಯರ ಯಾವುದೇ ಟೀಕೆಯನ್ನು ನಾವು ಎಂದೂ ಸಹಿಸಿಕೊಳ್ಳಲೇಬಾರದು. ತಲೆ ತಲಾಂತರಗಳಿಂದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಹಾಗೂ ಚೈತನ್ಯ ಸ್ವರೂಪದ ಯಾವುದೋ ಶಕ್ತಿ ನಮ್ಮ ಸಂಸ್ಕೃತಿಯಲ್ಲಿದೆ, ನಮ್ಮ ನಾಗರೀಕತೆಯಲ್ಲಿದೆ. ಭಾರತ ಪರರ ಅಧೀನದಲ್ಲಿದ್ದಾಗಲೂ, ಜನ ಈ ನಾಡಿನಲ್ಲಿ ಹುಟ್ಟಿದ್ದಾರೆ. ನಮ್ಮ ಮಣ್ಣಿನ ಮಕ್ಕಳು, ಹಿಂದೂ ನಾಗರೀಕತೆಯ ಚಿರಂತನ ತತ್ವಗಳಿಗೆ ಹೊಸ ಹಾಗೂ ಆಧುನಿಕ ಪರಿಸ್ಥಿತಿಗಳಿಗೆ ತಕ್ಕಂತೆ ಹೊಸ ಆಯಾಮ ಕೊಡುವ ಶ್ರೇಷ್ಠ ವಿಚಾರಧಾರೆಗಳನ್ನು ಸ್ವೀಕರಿಸಿದ್ದಾರೆ. ಈ ಸಂಹಿತೆಯು ಆ ಆದಿ-ಮೂಲವನ್ನು ಹಾಳು ಮಾಡುತ್ತದೆ. 4ನೇ ಉಪ-ವಿಧಿಯ ಪರಿಣಾಮ ಏನಾಗುವುದೋ ಯೋಚಿಸಿದರೇ ನನಗೆ ನಡುಕ ಬರುತ್ತದೆ. ಹಿಂದೂ ಕೋಡ್‌ನ 4ನೇ ಉಪ-ವಿಧಿಯನ್ನು ನೀವು ಓದಿ. ನೀವು ಬಾಗಿಲನ್ನೇ ಮುಚ್ಚುತ್ತಿದ್ದೀರಿ. ಈ ಸಂಹಿತೆಯ ಪ್ರಧಾನ ಭಾಗದಲ್ಲಿ ಮಾನ್ಯ ಮಾಡಿರುವಂತಹ ವಿಧಾನಗಳ, ಸಂಪ್ರದಾಯಗಳ ಹೊರತು ಬೇರೆಲ್ಲವನ್ನೂ ಇಂದಿನಿಂದ ನಿಷೇಧಿಸಲಾಗುತ್ತದೆ. ಪ್ರಾಚೀನ ಸಿದ್ಧಾಂತಗಳ ಮೇಲೆ ಆಧಾರಿತವಾಗಿರುವ ಈ ಎಲ್ಲ ವಿಧಾನಗಳು, ಸಂಪ್ರದಾಯಗಳೇ ಹಿಂದೂ ಸಮಾಜ ಬೆಳೆಯಲು, ಕಾಲಕಾಲಕ್ಕೆ ಏಳಿಗೆ ಹೊಂದಲು ಅನುವು ಮಾಡಿಕೊಟ್ಟಿವೆ.

ಇಂದು, ಈ ಮಹಾಸಭೆಯು - ನಾವೆಲ್ಲರು ಗೌರವಾನ್ವಿತರು ಪಂಡಿತರು - ನಾವೇ ಭಾರತೀಯ ಧರ್ಮದ ಮತ್ತು ಭಾರತೀಯ ಸಂಸ್ಕೃತಿಯ ಆದ್ಯ ಪ್ರವರ್ತಕರು, ಈ ಸಂಹಿತೆಯಲ್ಲಿ ಏನೇನು ಸೇರಬೇಕೆಂದು ನಾವು ನಿರ್ಧರಿಸುತ್ತೇವೋ, ತತ್ಕಾಲದಲ್ಲಿ ಅದೇ ಅಂತಿಮವಾದುದು. ನ್ಯಾಯಾಧೀಶರು ಹಾಗೂ ನ್ಯಾಯಾಲಯಗಳು ಯಾವುದನ್ನಾಗಲೀ ಪರಾಮರ್ಶಿಸುವುದಕ್ಕೆ ಅವಕಾಶ ಕೊಡುವುದಿಲ್ಲ ಎಂಬುದನ್ನು ತೀರ್ಮಾನಿಸುತ್ತಿದೆ. ಸ್ವಾತಂತ್ರ್ಯ ಬಂದಾದ ನಂತರ,

1951ರಲ್ಲೇ, ಸುಪ್ರೀಂ ಕೋರ್ಟು, ಹಿಂದೂ ಕಾನೂನಿನ ಮೊಕದ್ದಮೆಗಳಲ್ಲಿ, ಮೂಲ ಗ್ರಂಥಗಳ ಅಥವಾ ವ್ಯಾಖ್ಯಾನ ಗ್ರಂಥಗಳ ಭಾಗಗಳನ್ನು ಏಕೆಂದರೆ, ನ್ಯಾಯಿಕ ತೀರ್ಪುಗಳಲ್ಲಿ ಅಥವಾ ಪಠ್ಯ ಪುಸ್ತಕಗಳಲ್ಲಿ ಯಾವುದೇ ಅನುರೂಪದ ವಿಷಯ - ಸಾಮಗ್ರಿ ಸಿಗಲಿಲ್ಲವಾದ್ದರಿಂದ, ಉಲ್ಲೇಖಿಸಿ ತೀರ್ಪು ನೀಡಿರುವುದು ಈ ಸದನಕ್ಕೆ ಗೊತ್ತಿಲ್ಲವೇ ? ತಲೆತಲಾಂತರಗಳಿಂದ ಜನರಿಗೆ ಅಪಾರ ಅವಕಾಶಗಳನ್ನು ತೆರೆದಿಟ್ಟಿರುವ ಹಾಗೂ ಜೀವಂತ ಸೆಲೆಯಾಗಿರುವ ನಿಮ್ಮ ಧರ್ಮದ ಆದಿ - ಮೂಲವನ್ನೇ ನೀವು ಇಂದು ಹೊಸಕಿ ಹಾಕುತ್ತಿದ್ದೀರಿ. ನೀವು ಅದನ್ನು ಪ್ರಗತಿಪರ ನಿಯಮ ಎನ್ನುತ್ತಿದ್ದೀರಿ. ಅದು ಹಿಮ್ಮುಖದ ನಿಯಮ, ಯಾರಿಗೂ ಪ್ರಯೋಜನವಾಗದ ನಿಯಮ ಅದು. ದೇಶ ಒಡೆದು ಸೀಳಾಗಲು ಅದು ಆಸ್ಪದ ಕೊಡುತ್ತದೆ. ಯಾರೋ ಪ್ರಚೋದನೆ ಮಾಡಿದ್ದಾರೆಂದು ನಾನು ಯಾರ ಮೇಲೂ ಆಪಾದನೆ ಮಾಡುತ್ತಿಲ್ಲ. ಅದನ್ನು ಯಾರೇ ಪ್ರಚೋದಿಸುತ್ತಿರಬಹುದು ಅಥವಾ ಸಮರ್ಥಿಸುತ್ತಿರಬಹುದು, ಅವರು ತುಂಬಾ ಪ್ರಚೋದನೆಗೆ ಒಳಗಾಗಿಯೇ ಹಾಗೆ ಮಾಡುತ್ತಿದ್ದಾರೆ. ಹಾಗೆ ಹೇಳಲು ನಾನು ಹಿಂಜರಿಯುವುದಿಲ್ಲ. ಆದರೂ, ನಾನು ಹೇಳಬಯಸುವುದೇನೆಂದರೇ ಈ ನಿಯಮಗಳು ಎಲ್ಲ ಜನರಿಗೂ ಕಡ್ಡಾಯವಾಗುವಂತೆ ಮಾಡಬೇಡಿ. ವಿಚ್ಛೇದನ ಕಡ್ಡಾಯ ಅಲ್ಲ. ಆದರೆ, ಹಿಂದೂ ವಿವಾಹದ ಪವಿತ್ರ ಬಂಧನಗಳನ್ನು ತೊರೆಯುವಂತೆ ಕಡ್ಡಾಯ ಮಾಡುವುದು ತುಂಬಾ ಕೆಟ್ಟದ್ದು. ವಿವಾಹ ವಿಚ್ಛೇದನ ಸಂಭವಿಸುವುದು ತೀರಾ ಬೇರೆಯದೇ ಆದ ಸಂದರ್ಭ. ನೀವು ಸಂಪ್ರದಾಯಗಳನ್ನು ಹಾಗೂ ದೃಢ ನಂಬಿಕೆಗಳನ್ನು ತೀವ್ರವಾಗಿ ಬದಲಾಯಿಸುತ್ತಿದ್ದೀರಿ. ದಕ್ಷಿಣ ಭಾರತ, ಈ ವಿಷಯದಲ್ಲಿ ಪ್ರಗತಿಪರ ನಿಲುವು ತೆಗೆದುಕೊಂಡಿದೆ ಮತ್ತು ನಾವಿಲ್ಲಿ ಚರ್ಚಿಸುತ್ತಿರುವ ಅನೇಕ ಕಾನೂನುಗಳು ಇಂದು ಅಲ್ಲಿ ಈಗಾಗಲೇ ಅಸ್ತಿತ್ವದಲ್ಲಿವೆ ಎಂದು ಕೆಲವರು ಹೇಳಿದ್ದಾರೆ. ದಕ್ಷಿಣ ಭಾರತಕ್ಕೆ ನಾನು ಶುಭ ಹಾರೈಸುತ್ತೇನೆ. ದಕ್ಷಿಣ ಭಾರತವು ಪ್ರಗತಿಯಿಂದ ಪ್ರಗತಿಗೆ, ವಿಚ್ಛೇದನದಿಂದ ವಿಚ್ಛೇದನದತ್ತ ಸಾಗಲಿ. ದಕ್ಷಿಣ ಭಾರತದ ಬಗ್ಗೆ ನನ್ನದೇನೂ ಆಕ್ಷೇಪಣೆ ಇಲ್ಲ. ಆದರೆ, ಬೇಡವೆನ್ನುವ ಇತರರ ಮೇಲೆ ಅದನ್ನೇಕೆ ಹೇರುತ್ತೀರಿ. ನನ್ನ ಬಳಿ ಒಂದು ಪತ್ರ ಇದೆ. ಕೇವಲ ಎರಡು ದಿನಗಳ ಹಿಂದೆ ಅದು ನನಗೆ ಬಂತು. ಅದು ಅಂಚೆ ಪತ್ರ. ಅದನ್ನು ಬರೆದಿರುವವರು ಯಾರೆಂಬುದು ನನಗೆ ಗೊತ್ತಿಲ್ಲ.

ಆ ವ್ಯಕ್ತಿ ಅದರಲ್ಲಿ ಹೀಗೆ ಬರೆದಿದ್ದಾನೆ :

> "ಹೆಣ್ಣುಮಗಳು, ತನ್ನ ಸೋದರ ಮಾವನನ್ನು ಮದುವೆಯಾಗುವುದನ್ನು, ಅದು ನಿಷೇಧಿತ ಶ್ರೇಣಿಯಾದ್ದರಿಂದ, ಅನೂರ್ಜಿತವನ್ನಾಗಿ ಮಾಡುವ ಒಂದು ವಿಧಿ ಹಿಂದೂ ಕಾನೂನು ಕುರಿತ ವಿಧೇಯಕದಲ್ಲಿದೆ. ಈ ಸಂಪ್ರದಾಯ, ಆಂಧ್ರ ಮತ್ತು ತಮಿಳುನಾಡಿನಲ್ಲಿ ತುಂಬಾ ಪ್ರಚಲಿತವಿದೆ. ಬ್ರಾಹ್ಮಣರು ಸಹ ತಮ್ಮ ಹೆಣ್ಣು ಮಕ್ಕಳಿಗೆ, ಹೆಣ್ಣಿನ ಸೋದರ ಮಾವನೇ ತುಂಬಾ ಸರಿಯಾದ ಹಾಗೂ ಸೂಕ್ತವಾದ ವರನೆಂದೇ ಭಾವಿಸಿದ್ದಾರೆ. ಬಹುಷಃ, ವಕೀಲರಿಗೆ

ಮತ್ತು ಇತರರಿಗೆ ನಿಷೇಧವಿರುವುದು ಗೊತ್ತಿಲ್ಲವೆಂದು ಕಾಣುತ್ತದೆ. ನಮ್ಮ ಬಹಳಷ್ಟು ಜನರಿಗೆ ಇದು ಖಂಡಿತಾ ಗೊತ್ತಿಲ್ಲ. ಇಂಥದೊಂದು ವಿಧಿ ಇದೆಯೆಂಬ ತಿಳಿವಳಿಕೆ ಇಲ್ಲದೆ ವಿವಾಹ ಸಮಾರಂಭಗಳು ಜರುಗಿದರೆ ತುಂಬಾ ತೊಂದರೆಗಳು ತಲೆದೋರುತ್ತವೆ........................

ಆ ವ್ಯಕ್ತಿ ನನ್ನನ್ನೇ ಏಕೆ ಆಯ್ಕೆ ಮಾಡಿಕೊಂಡಿದ್ದಾನೆ. ಡಾ॥ ಅಂಬೇಡ್ಕರರಿಗೆ ಏಕೆ ಬರೆಯಲಿಲ್ಲವೋ, ನನಗೆ ಗೊತ್ತಿಲ್ಲ -

"ಆದ್ದರಿಂದ, ನಿಷೇಧಿಸದೆ, ಸಂಪ್ರದಾಯವನ್ನು ಉಳಿಸುವ ಅಥವಾ ಸಂಬಂಧ ಕಡಿದುಕೊಳ್ಳಲು ಕಾಲಮಿತಿ ನಿಗದಿಮಾಡುವ ತಿದ್ದುಪಡಿಯನ್ನು ವಿವಾಹ ಅಧ್ಯಾಯಕ್ಕೂ ಮೊದಲು ಸೇರಿಸುವ ಸೂಚನೆಯೊಂದನ್ನು ತಾವು ಮಂಡಿಸಬೇಕಾಗಿ ಪ್ರಾರ್ಥನೆ".

ಆ ಭೂ-ಭಾಗಗಳಲ್ಲಿ ವಾಸಿಸುತ್ತಿರುವ ಜನರ ಪ್ರಗತಿಪರ ಸ್ವಭಾವದ ಬಗ್ಗೆ ಯಾರು ಮಾತನಾಡುತ್ತಿದ್ದಾರೋ ಅಂಥವರನ್ನು ಉದ್ದೇಶಿಸಿ ಇದನ್ನು ಪ್ರಾಸಂಗಿಕವಾಗಿ ಹೇಳುತ್ತಿದ್ದೇನೆ ನಿಜವಾಗಿಯೂ ಅವರು ತುಂಬಾ ಮುಂದೆ ಹೋಗಿದ್ದಾರೆ.

ಅದು ಒಂದು ದೃಷ್ಟಿಕೋನ ಮಾತ್ರ, ಯಾವುದೇ ರಾಜ್ಯದ ವಿವೇಕವನ್ನು ಅಥವಾ ಅವಿವೇಕವನ್ನು ನಾನು ಪ್ರಶ್ನಿಸುತ್ತಿಲ್ಲ. ಈ ವಿಶಾಲ ದೇಶದಲ್ಲಿ ಲಕ್ಷಾಂತರ, ಕೋಟ್ಯಾಂತರ ಜನರು ಅದನ್ನು ಅನುಸರಿಸುತ್ತಿರಬಹುದು. ಸಹಜವಾಗಿಯೇ, ಸಂಪ್ರದಾಯಗಳು ಒಂದು ನಿರ್ದಿಷ್ಟ ರೀತಿಯಲ್ಲಿ ವಿಕಸನಗೊಂಡಿರಬಹುದು. ನಾನು ಸಂಕ್ಷಿಪ್ತವಾಗಿ ಹೇಳುತ್ತಿದ್ದೇನೆ. ಈ ನಿಯಮವನ್ನು ಎಲ್ಲರಿಗೂ ಅನ್ವಯವಾಗುವಂತೆ ಮಾಡುವಂತಿಲ್ಲ - ಈಗ, ನಾನು ವಿವಾಹ ಮತ್ತು ವಿಚ್ಛೇದನ ಬಗ್ಗೆ ಮಾತ್ರವೇ ಮಾತನಾಡುತ್ತಿದ್ದೇನೆ - ಈ ವಿಷಯವನ್ನು, ಭಾವೀ ವಿವಾಹಸ್ಥರ ತೀರ್ಮಾನಕ್ಕೆ ಬಿಟ್ಟುಬಿಡಿ. ಈ ನಿಯಮಗಳ ವ್ಯಾಪ್ತಿಗೊಳಪಡುತ್ತೇವೆ ಅಥವಾ ಧಾರ್ಮಿಕ ವಿವಾಹದ ಪರಿಣಾಮಗಳಿಗೆ ನಾವು ಒಳಗಾಗುವುದಿಲ್ಲವೆಂಬುದನ್ನು ಅವರೇ ಹೇಳಲಿ. ಅವರ ತೀರ್ಮಾನಕ್ಕೇ ಬಿಡಿ. ಭಾವೀ ವಿವಾಹಸ್ಥರ ಪ್ರಕರಣಗಳು ಅದರ ವ್ಯಾಪ್ತಿಗೆ ಬರುತ್ತವೆ. ನಾವು ಶಾಸನ ರಚನೆ ಮಾಡುತ್ತಿಲ್ಲ. ಸಂಸತ್ತಿನ ಈಗಿನ ಸದಸ್ಯರ ವಿವಾಹ ವಿಘಟನೆಗೆ ಅನುಕೂಲ ಮಾಡಿಕೊಡುವ ಉದ್ದೇಶಕ್ಕೆಂದು ತೋರುತ್ತಿವೆ. ನಾವು ಭವಿಷ್ಯದತ್ತ ನೋಡುತ್ತಿದ್ದೇವೆ. ಮುಂದಿನ ಪೀಳಿಗೆಗೆ ಒಳ್ಳೆಯದನ್ನು ಮಾಡುವ ಬಗ್ಗೆ ನಾವು ಯೋಚಿಸುತ್ತಿದ್ದೇವೆ. ಮುಂದಿನ ಪೀಳಿಗೆ ಶಾಂತಿಯಿಂದ ಸುಖ ಸಮೃದ್ಧಿಯಿಂದ ಬಾಳಲಿ. ಆದರೆ ಈಗಾಗಲೇ ಮದುವೆ ಆಗಿರುವವರಿಗೂ ನೀವು ಅದನ್ನು ಅನ್ವಯಿಸ ಬಯಸಿದರೆ........

ನೀವು ಇನ್ನೊಂದು ವಿಧಿಯನ್ನು ಸೇರಿಸಬಹುದು. ಈಗಾಗಲೇ ವಿವಾಹ ಆಗಿರುವವರಿಗೆ ನೀವು ಅದನ್ನು ಅನ್ವಯಿಸಬಯಸುವುದಾದರೆ, ನಾನು ಒಂದು ಪರಿಹಾರ ಸೂಚಿಸುತ್ತೇನೆ. ನೀವು ಅದನ್ನು ಯಾರಾದರಾಗಲಿ ಅವರ ಇಚ್ಛೆಗೆ ಬಿಟ್ಟುಬಿಡಿ. ಆತ ಈ ಸಂಹಿತೆಯ ವ್ಯಾಪ್ತಿಗೆ ಒಳಪಡ ಬಯಸಿದ್ದಾನೆಯೇ ಎನ್ನುವ ತೀರ್ಮಾನವನ್ನು ಒಂದು ಅಥವಾ ಎರಡು ವರ್ಷಗಳ ಒಳಗೆ ನೋಂದಾಯಿಸಲು ಅವಕಾಶ ಕೊಡಲಾಗುತ್ತದೆ ಎಂದು ಹೇಳಿ, ಇಂದು, ನಿಮಗೆ ಯಾವುದಕ್ಕೆ ಅಧಿಕಾರ ಇಲ್ಲವೋ ಅದನ್ನೇ ಇತರರಿಗಾಗಿ ತೀರ್ಮಾನಿಸ ಹೊರಟಿದ್ದೀರಿ. ಧಾರ್ಮಿಕ ರೀತಿಯ ವಿವಾಹವು ಯಾವುದೇ ಮಾರ್ಪಾಟು ಅಥವಾ ಬದಲಾವಣೆ ಇಲ್ಲದೆಯೇ ಮುಂದುವರಿಯುತ್ತದೆ ಮತ್ತು ಇನ್ನೊಂದು ರೀತಿಯ ವಿವಾಹವು ಅದರ ಪ್ರಯೋಜನ ಪಡೆಯಬಯಸುವ ಜನರಿಗೆ ಸಹ ಮುಕ್ತವಾಗಿರುತ್ತದೆ ಎಂದು ಹೇಳುತ್ತ ನೀವು ಕಾನೂನು ಮಾಡುತ್ತಿದ್ದೀರಿ. ಭವಿಷ್ಯತ್‌ನಲ್ಲಿ ಜನರೇ ಆಯ್ಕೆ ಮಾಡಿಕೊಳ್ಳಲಿ. ಒತ್ತಾಯವೇನಿಲ್ಲ. ಈಗಿನ ಜನರಿಗೆ ನೀವು ಕಾಲಮಿತಿ ನಿಗದಿ ಪಡಿಸಬಹುದು ಅಥವಾ ಪಡಿಸದಿರಬಹುದು. ಈ ಸಂಹಿತೆಯ ನಿಯಮದ ವ್ಯಾಪ್ತಿಗೆ ಒಳಪಡಲು ಯಾರಾದರೂ ಇಚ್ಛಿಸಿದರೆ, ಅಂಥ ವ್ಯಕ್ತಿಗಳು, ರಿಜಿಸ್ಟ್ರಾರ್ ಅಥವಾ ರಿಜಿಸ್ಟ್ರಾರ್ - ಜನರಲ್ ಅಥವಾ ಡೈರೆಕ್ಟರ್ ಜನರಲ್ ಅಥವಾ ಯಾರಾದರಾಗಿರಲಿ ಅವರ ಮುಂದೆ ಒಂದು ಘೋಷಣೆ ಮಾಡಿ ಸಂಹಿತೆಯಲ್ಲಿ ಒದಗಿಸಿರುವ ಪರಿಹಾರವನ್ನು ಕೇಳಬಹುದು. ಹಾಗೆ ಮಾಡಿದರೆ ಅದರಿಂದ ನಿಮ್ಮ ಗಂಟೇನು ಹೋಗುತ್ತದೆ? ಎಂದು ತೀವ್ರವಾಗಿಯೇ ಕೇಳುತ್ತೇನೆ. ದೇಶದ ಐಕ್ಯತೆಯನ್ನು ಒಡೆಯುವುದರಿಂದ ನಿಮಗೆ ಏನು ಲಾಭವಾಗುತ್ತದೆ ? ಲಕ್ಷಾಂತರ ಜನರು ಯಾವುದನ್ನು ಶಾಸ್ತ್ರೋಕ್ತ ಮತ್ತು ಪವಿತ್ರವೆಂದು ಭಾವಿಸಿದ್ದಾರೋ ಆ ಹಿಂದೂ ವಿವಾಹದ ಅವಿಭಾಜ್ಯ ಸ್ವರೂಪವನ್ನು ನೀವು ಹಾಳು ಮಾಡುತ್ತೀರಿ. ಈ ಸದನದ ಅನೇಕರು ಒಪ್ಪಲಾರರು. ವಿವಾಹವು ಎರಡು ಕಡೆಯವರ ವ್ಯವಸ್ಥೆಯೆಂದು, ಅದು ಒಪ್ಪಂದವಲ್ಲದೆ ಬೇರೇನೂ ಅಲ್ಲವೆಂದು ಹೇಳುವ ಜನರನ್ನು ನಾನು ಆಕ್ಷೇಪಿಸುತ್ತಿಲ್ಲ. ಅವರು ಹಾಗೇ ಭಾವಿಸಿಕೊಳ್ಳಲಿ. ಆದರೆ, ಸಾವಿರಾರು ವರ್ಷಗಳಿಂದ ಆಚರಣೆಯಲ್ಲಿರುವ ಈ ಪದ್ಧತಿ ಪವಿತ್ರವಾದುದು, ಅದು ತಮ್ಮ ಆಚಾರ ವಿಚಾರಗಳಲ್ಲಿ ಮತ್ತು ಧರ್ಮದಲ್ಲಿ ಆಳವಾಗಿ ಬೇರೂರಿದೆ ಎಂದು ನಿಜವಾಗಿಯೂ ಪ್ರಾಮಾಣಿಕವಾಗಿ ಹೇಳುವವರೂ ಇದ್ದಾರೆ. ಈ ಸದನದಲ್ಲಿ ಕುಳಿತಿರುವ ನಿಮಗೆ, ಈ ಪವಿತ್ರ ಹಕ್ಕನ್ನು ಒಂದು ಗೀಟು ಹಾಕಿ ತೆಗೆದುಬಿಡಬಯಸಿದ್ದೇವೆ ಎಂದು ಹೇಳುವ ಯಾವ ಅಧಿಕಾರ ಇದೆ ?

ಸರಿಯೋ, ತಪ್ಪೋ, ಹಿಂದೂ ಕೋಡ್ ವಿಧೇಯಕದ ವಿಷಯದಲ್ಲಿ ಈ ದೇಶದಲ್ಲಿ ಭಿನ್ನಾಭಿಪ್ರಾಯ ವ್ಯಕ್ತವಾಗಿದೆ, ನನ್ನನ್ನು ನಂಬಿ. ಹಾಗಾಗಬಾರದೆಂದು ನನ್ನ ಬಯಕೆ. ನಾವು ಹಂತ ಹಂತವಾಗಿ ಮುಂದುವರಿಯಬೇಕು ಮತ್ತು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ತರಬೇಕೆಂದು ಬಯಸುತ್ತನೆ. ಬಹು ಸಂಖ್ಯಾತ ಜನರ ಮನವೊಲಿಸಿಕೊಂಡು,

ಈ ಸದನದ ಮೂಲಕ ಒತ್ತಾಯ ಹೇರದೆ, ಹೊರಗಡೆ ತೀವ್ರ ಪ್ರತಿಭಟನೆಗೆ ಅವಕಾಶ ಕೊಡದೆ, ಅವರ ತರ್ಕ ಹಾಗೂ ದೃಢ ನಂಬಿಕೆಗಳನ್ನು ಗಮನಕ್ಕೆ ತೆಗೆದುಕೊಂಡು ನಾವು ಹಾಗೆ ಮಾಡೋಣ.

ಈ ವಿಷಯವನ್ನು ನಾನು, ತಮ್ಮ ತಮ್ಮದೇ ಆದ ದೃಷ್ಟಿಕೋನವುಳ್ಳ ಅನೇಕ ಜನರೊಂದಿಗೆ ಮತ್ತು ಸಂಪ್ರದಾಯಸ್ಥರಲ್ಲದ ಇತರರೊಂದಿಗೆ ಚರ್ಚಿಸಿದ್ದೇನೆ. ದೇಶದಲ್ಲಿ ಈ ವಿಷಯದ ಬಗ್ಗೆ ಏಕೋ, ಏನೋ ಇಂದು ಭಿನ್ನಾಭಿಪ್ರಾಯ ವ್ಯಕ್ತವಾಗಿದೆ. ಈ ವಿಷಯದಲ್ಲಿ ಯಾವ ಮಾರ್ಗ ಅನುಸರಿಸಬೇಕು ? ನಾನು ಮೊದಲೇ ಹೇಳಿದಂತೆ, ಇದು ಪತ್ರಿಕಾ ಕಾನೂನಲ್ಲ, ಯಾವುದೋ ಏನೋ ಅಪಾಯ ತಲೆದೋರುತ್ತಿದೆ. ನೀವು, ಹೇಗೋ ಪತ್ರಿಕಾ ಕಾನೂನನ್ನು ಅಂಗೀಕರಿಸಲೇಬೇಕು, ಜಾರಿಗೆ ತರಲೇಬೇಕು ಎಂದು ಭಾವಿಸಿದ ಹಾಗಲ್ಲ, ಇದು ರಾಜ್ಯಾಂಗದ ತಿದ್ದುಪಡಿಯಲ್ಲ, ಇದು ರಾಜಕೀಯ ವಿಷಯ ಅಲ್ಲ, ರಾಜಕೀಯ ವಿಷಯಗಳಲ್ಲಿ ನಾವು ಭಿನ್ನಾಭಿಪ್ರಾಯ ತಾಳಬಹುದು. ಆದರೆ, ನಮ್ಮ ಈ ಮಹಾನ್ ದೇಶಕ್ಕೆ ಹೆಚ್ಚು ಏಳಿಗೆಯನ್ನು ತಂದುಕೊಡುವ ತಮ್ಮ ನಾಗರೀಕತೆಯನ್ನು ಹೆಚ್ಚು ಪ್ರಗತಿ ಪರವನ್ನಾಗಿ ಮಾಡುವ ಸುಧಾರಣೆಗಳನ್ನು ತರುವ ಅಗತ್ಯದ ಬಗ್ಗೆ ಮೂಲಭೂತ ಏಕಾಭಿಪ್ರಾಯ ಇರಬೇಕಾಗುತ್ತದೆ. ನಮ್ಮ ಧೋರಣೆಗೆ ಅದೇ ತಳಹದಿಯಾಗಿರಬೇಕಾಗುತ್ತದೆ. ಯಾರು ಪ್ರಚಲಿತ ಆಚರಣೆಗಳನ್ನು ಅನುಸರಿಸುತ್ತಿದ್ದಾರೋ, ಯಾರು ಈಗಿನ ಕಾನೂನುಗಳ ನಿಯಮಗಳನ್ನು ಅನುಸರಿಸುತ್ತಿದ್ದಾರೋ ಅವರೆಲ್ಲಾ ಭ್ರಷ್ಟರೇನಲ್ಲ, ಪ್ರಗತಿ, ಏಳಿಗೆ ಎನ್ನುತ್ತ ಕಲ್ಪನಾ ಲೋಕದಲ್ಲಿ ವಿಹರಿಸುತ್ತಿರುವ, ಈ ವಿಧೇಯಕವನ್ನು ಸಮರ್ಥಿಸುತ್ತಿರುವವರಲ್ಲಿ ಅನೇಕರು, ತುಂಬಿ ತುಳುಕಿದ ಉತ್ಸಾಹದಿಂದ, ವಿಷಯದ ಬಗ್ಗೆ ತಾವೇನಂದುಕೊಂಡಿದ್ದಾರೋ ಅದೇ ಕೊನೇ ಮಾತು, ತಾವೇ ಪ್ರಗತಿಯುವಕ್ತಾರರು, ಬೇರೆಯುವರೆಲ್ಲಾ ಭ್ರಷ್ಟರೆಂದುಕೊಂಡಿರುವುದು ನಿಜಕ್ಕೂ ದುರಂತ, ತೀರಾ ದುರದೃಷ್ಟಕರ. ಸಮಾಜದಲ್ಲಿ ತೀರಾ ಹೊಲಸಾದ, ಅನೈತಿಕವಾದ, ಹಿನ್ನಡೆಸುವಂಥದ್ದು ಏನೋ ಆಗುತ್ತಿದೆಯೆಂಬುದನ್ನು ತೋರಿಸದ ಹೊರತು, ಪ್ರಸ್ತುತ ವಿಚಾರಧಾರೆಗಳಲ್ಲಿ ನಂಬಿಕೆ ಉಳ್ಳಂತಹ ಜನರ ಅಭಿಪ್ರಾಯಗಳಿಗೆ ನಾವು ಗಮನ ಕೊಡಬೇಕೇಗುತ್ತದೆ. ಅಂಥ ಹುಳುಕುಗಳನ್ನು ಎತ್ತಿ ತೋರಿದರೆ, ನಾನೂ ಸಹ ಡಾ॥ ಅಂಬೇಡ್ಕರರ ಜತೆ ಹಾಗೂ ಸುಧಾರಣೆಗಳನ್ನು ಬಯಸುವ ಇತರರ ಜತೆ ದನಿಗೂಡಿಸುತ್ತೇನೆ. ಆದರೆ, ಕೇವಲ ಭಿನ್ನಾಭಿಪ್ರಾಯವಾಗಿದ್ದರೆ, ಕೇವಲ ಭಿನ್ನ ದೃಷ್ಟಿಕೋನ ಆಗಿದ್ದರೆ, ನಿಮ್ಮ ಅಭಿಪ್ರಾಯಗಳಿಗೆ ಸಹಮತ ವ್ಯಕ್ತಪಡಿಸುವವರಿಗಾಗಿ ಮಾತ್ರವೇ ನೀವು ಅದನ್ನೆಲ್ಲಾ ಮಾಡಬಯಸುವಿರಿ ಎಂದಾದರೆ. ನಿಮ್ಮ ಅಭಿಪ್ರಾಯಗಳನ್ನು ಒಪ್ಪದ ಇತರ ಲಕ್ಷಾಂತರ ಜನರ ಮೇಲೆ ನಿಮ್ಮ ಅಭಿಪ್ರಾಯಗಳನ್ನು ಏಕೆ ಹೇರುತ್ತೀರಿ ? ಇದೇ, ನಾನು, ಕಾನೂನು ಮಂತ್ರಿಗಳ ಮತ್ತು ಸರ್ಕಾರದ ಮುಂದೆ ಆಗ್ರಹಪೂರ್ವಕವಾಗಿ ಮುಂದಿಡುತ್ತಿರುವ ಅಭಿಪ್ರಾಯ. ಯಾರು ಆದರಲ್ಲಿ ನಂಬಿಕೆ ಉಳ್ಳವರಾಗಿದ್ದಾರೋ ಅವರಿಗೆ ಸಂಬಂಧಿಸಿದಂತೆ,

ಸಂಹಿತೆಯಲ್ಲಿನ ನಿಯಮಗಳನ್ನು ಕೈಬಿಡಿ ಎಂದು ನಾನು ನಿಮಗೊಂದು ಸೂತ್ರ ಕೊಟ್ಟರೆ, ನೀವು ನನ್ನನ್ನು ಗೇಲಿ ಮಾಡಬಹುದು. ದೇವರೇ ನಿಮ್ಮನ್ನು ರಕ್ಷಿಸಬೇಕು; ಆಯಿತು, ಮುನ್ನುಗ್ಗಿ, ನೀವು ಇಲ್ಲಿ ಯಾವುದನ್ನು ಬೋಧಿಸುತ್ತಿದ್ದೀರೋ ಆ ವಿಚಾರಗಳಲ್ಲಿ ನಂಬಿಕೆ ಉಳ್ಳವರಿಗಾಗಿ ನೀವೇನು ಮಾಡಬೇಕೆಂದಿದ್ದಿರೋ ಅದನ್ನೆಲ್ಲಾ ಮಾಡಿ. ಆದರೆ, ಹಳೆಯ ಸಂಪ್ರದಾಯಗಳನ್ನು ಯಾರು ಯಾರ ಪೂರ್ವಜರು ಅನುಸರಿಸುತ್ತಾ ಬಂದಿದ್ದಾರೋ ಮತ್ತು ಯಾರು ಈ ವಿಧೇಯಕವನ್ನು ಮಂಡಿಸುತ್ತಿದ್ದಾರೋ ಅವರಿಗಿಂತಲೂ ದೇಶಭಕ್ತಿಯಲ್ಲಿ ಕಡಿಮೆ ಏನಲ್ಲದವರ ಮೇಲೆ ನಿಮ್ಮ ಅಭಿಪ್ರಾಯಗಳನ್ನು ಏಕೆ ಹೇರುತ್ತಿದ್ದೀರಿ ?

ಇನ್ನು ವಿವಾಹ ವಿಚ್ಛೇದನ, ಯಾವ ಯಾವ ದೇಶಗಳಲ್ಲಿ ವಿವಾಹ ವಿಚ್ಛೇದನ ವ್ಯವಸ್ಥೆ ಪ್ರಚಲಿತವಿದೆಯೋ ಅಲ್ಲೆಲ್ಲಾ ವಿಚ್ಛೇದನ ಕಾನೂನುಗಳು ಎಲ್ಲ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಿವೆಯೇ ?

ಇತ್ತೀಚಿನ ಕೆಲವೊಂದು ಸಮಾಜ ಶಾಸ್ತ್ರ ಪುಸ್ತಕಗಳನ್ನು ನಾನು ಓದುತ್ತಿದ್ದೇನೆ. ಇದು ಮಾನವನ ಒಂದು ಜಟಿಲ ಸಮಸ್ಯೆ. ಜನರು ಹತಾಶರಾಗಿದ್ದರೆ. ಈ ಸಮಸ್ಯೆಗಳಿಗೆ, ಪ್ರಪಂಚಕ್ಕೆ ಪರಿಹಾರ ಸಿಕ್ಕಿಲ್ಲ. ಯಾರಲ್ಲಿ ವಿಚ್ಛೇದನ ವ್ಯವಸ್ಥೆ ಇದೆಯೋ, ಅಲ್ಲಿ ವಿಚ್ಛೇದನ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತಿದೆ. ಅವರು ಶಾಂತಿಯಿಂದಿದ್ದಾರೆಯೇ ? ಅವರಿಗೆ ನೆಮ್ಮದಿ ಸಿಕ್ಕಿದೆಯೇ ?

ಬದಲಿಗೆ ಹೊಸ ಸಮಸ್ಯೆಗಳು ಹುಟ್ಟಿಕೊಂಡಿವೆ. ಮನೋ - ವಿಶ್ಲೇಷಣೆ ಮೇಲಿನ ಕೆಲವೊಂದು ಇತ್ತೀಚಿನ ಪುಸ್ತಕಗಳನ್ನು ಓದಿ. ಗಂಡು - ಹೆಣ್ಣಿನಲ್ಲಿ ಸುಮಧುರ ಹೊಂದಾಣಿಕೆ ಇಲ್ಲದಿರುವುದರಿಂದ ಪಾಶ್ಚಿಮಾತ್ಯ ದೇಶಗಳಲ್ಲಿ ಏನೇನು ಕೆಡುಕುಗಳಾಗುತ್ತಿವೆ ಎಂಬುದನ್ನು ಆ ಪುಸ್ತಕಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇವೆಲ್ಲಾ ಸಂಕೀರ್ಣ ಸಮಸ್ಯೆಗಳು, ನೀವುಗಳು ಇದನ್ನು ಅಳವಡಿಸಿ ಕೊಳ್ಳದೇ ಹೋದರೆ, ನೀವು ಹಿಂದುಳಿಯುತ್ತೀರಿ ಎಂದು ಪ್ರಪಂಚದ ಯಾವುದೋ ಭಾಗದ ಒಂದು ಜನ ಹೇಳಿದ ಮಾತ್ರಕ್ಕೇ, ಪಶ್ಚಿಮದ ಆ ಏನನ್ನೋ ಕುರುಡರಂತೆ ಏಕೆ ಅನುಸರಿಸ ಹೊರಟಿದ್ದೀರಿ ? ಈ ದೇಶದಲ್ಲಿ ಅಷ್ಟೊಂದು ಮುಂದುವರಿದ ಜನರಿದ್ದರೆ, ಇದೇ ವಿಚಾರಧಾರೆಯಲ್ಲಿ ನಂಬಿಕೆ ಉಳ್ಳವರಾಗಿದ್ದರೆ, ಅಂಥವರಿಗೆ ತುಂಬಾ ಉದ್ದದ ಹಗ್ಗ ಕೊಡಿ, ನೇಣು ಹಾಕಿಕೊಳ್ಳಲಿ. ಬೇರೆ ಬೇರೆ ಮಾರ್ಗಗಳಿಂದ ತಮ್ಮ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡು ಕೊಳ್ಳುವ ಇತರರ ವಿಷಯಗಳಲ್ಲಿ ಕೈಹಾಕಬೇಡಿ.

ಒಬ್ಬನೇ ಗಂಡ - ಒಬ್ಬಳೇ ಹೆಂಡತಿ ಪದ್ಧತಿ ಬಗ್ಗೆ ಹೇಳುವುದಾದರೆ, ಅದನ್ನು ಭಾರತದ ಎಲ್ಲ ನಾಗರೀಕರಿಗೆ ಅನ್ವಯವಾಗುವಂತೆ ಮಾಡಿ. ನಾನು ಅದನ್ನು ಸಮರ್ಥಿಸುತ್ತೇನೆ. ಒಬ್ಬನೇ ಗಂಡ ಒಬ್ಬಳೇ ಹೆಂಡತಿ ಪದ್ಧತಿಯು ಆಗ ಹಿಂದೂಗಳಿಗೆ ಒಳ್ಳೆಯದು, ಇತರರಿಗೆ ಅದು ಒಳ್ಳೆಯದಲ್ಲ ಎಂಬುದಲ್ಲಿ ಒಂದೇ ಸಾಮಾಜಿಕ ಸಿದ್ಧಾಂತಕ್ಕೆ ಅಂಟಿಕೊಳ್ಳಿ.

ಒಂದು ಸಾಮಾಜಿಕ ವ್ಯವಸ್ಥೆಯಾಗಿ, ಒಬ್ಬನೇ ಗಂಡ - ಒಬ್ಬಳೇ ಹೆಂಡತಿ ಪದ್ದತಿಯು ಭಾರತಕ್ಕೆ ಬೇಕೇಬೇಕು ಎನ್ನುವುದರಲ್ಲಿ ನಿಮಗೆ ನಂಬಿಕೆ ಇದ್ದರೆ, ಅದನ್ನು ಹಿಂದೂ ದೃಷ್ಟಿಕೋನದಿಂದ ನೋಡುವ ಪ್ರಯತ್ನ ಮಾಡಬೇಡಿ; ಮಾನವ ದೃಷ್ಟಿಕೋನದಿಂದ ನೋಡಿ, ಅದನ್ನು ಎಲ್ಲರಿಗೂ ಅನ್ವಯವಾಗುವಂತೆ ಮಾಡಿ. ಈ ವಿಷಯದಲ್ಲಾದರೂ, ನಮ್ಮದು ಜಾತ್ಯಾತೀತ ರಾಷ್ಟ್ರವೆಂಬುದನ್ನು ತೋರಿಸಿ. ಈ ಸಾಹಸ ಕಾರ್ಯಕ್ಕೆ ಧೈರ್ಯದಿಂದ ಕೈಹಾಕಿ, ಒಬ್ಬನೇ ಗಂಡ - ಒಬ್ಬಳೇ ಹೆಂಡತಿ ಪದ್ಧತಿಯನ್ನು ಭಾರತದ ಎಲ್ಲ ನಾಗರೀಕರಿಗೂ ಅನ್ವಯ ಮಾಡಲಾಗುತ್ತಿದೆ ಎಂದು ಹೇಳಿ. ನೀವು ಹಾಗೆ ಮಾಡಲು ಆಗದಿದ್ದರೆ, ಒಂದು ವರ್ಗಕ್ಕೆ ಮಾತ್ರವೇ ಹಾಗೆ ಮಾಡಬೇಡಿ. ಇಲ್ಲಿ ತಮ್ಮ ಮುಂದೆ ಅಂಕಿ ಅಂಶಗಳು ಇವೆ. ಅಂಕಿ ಅಂಶಗಳನ್ನು, ಅವು ನಿಜವಿರಬಹುದು ಅಥವಾ ಸಿದ್ಧಪಡಿಸಿದವಾಗಿರಬಹುದು, ನಂಬಿಬಿಡುತ್ತೇವೆ. ಕೆಲವೊಂದು ಮಾಯಿತಿ ಪಡೆಯಲು ನಾನು ಪ್ರಯತ್ನಿಸುತ್ತಲೇ ಇದ್ದೇನೆ. ಭಾರತದಲ್ಲಿ ಎಷ್ಟು ಜನರು ಎರಡನೇ ಮದುವೆ ಮಾಡಿಕೊಂಡಿದ್ದಾರೆಂದು ನಾನು ತಿಳಿದುಕೊಳ್ಳಬಯಸಿದ್ದೆ, ನನಗೆ ಇನ್ನೂ ಸಿಕ್ಕಿಲ್ಲ ..............

ಇನ್ನು, ಮೊದಲನೆಯ ಹೆಂಡತಿ ಬದುಕಿದ್ದಾಗಲೇ ಎರಡನೇ ಹೆಂಡತಿಯನ್ನು ಮದುವೆಯಾಗುವ ವಿಚಾರ. ಸಂಖ್ಯೆ ಅಷ್ಟೇನಿಲ್ಲ. ಇದು ಸಮಸ್ಯೆಯೇ ಅಲ್ಲ, ಪ್ರೌಢ ಅಭಿಪ್ರಾಯಗಳಿಂದಾಗಿ, ಈಗಾಗಲೇ ಸಮಾಜ ತನ್ನಲ್ಲಿ ಹೊಂದಾಣಿಕೆ ಮಾಡಿಕೊಂಡಿದೆ. ಹಣಕಾಸು ಪರಿಸ್ಥಿತಿಗಳು, ಸಾರ್ವಜನಿಕರಿಂದ ಬೈಗುಳ ಮುಂತಾದ ಕಾರಣಗಳಿಂದ ಈ ಪದ್ಧತಿ ನಶಿಸಿಹೋಗಿದೆ. ನಾವು, ಈ ಮಹಾನ್ ಸುಧಾರಣೆಯನ್ನು ತರುತ್ತಿದ್ದೇವೆ, ಅದಕ್ಕಾಗಿ ಶಾಸನರಚಿಸುತ್ತಿದ್ದೇವೆಂದು ಇದನ್ನು ಆಡಂಬರದಿಂದ ಏಕೆ ಮೆರೆಸುತ್ತಿದ್ದೀರಿ ? ನೀವು ಅದನ್ನು ಒಂದು ತತ್ವ ಎಂದು ಅಂಗೀಕರಿಸುವುದಾದರೆ, ಅದನ್ನು ನಾನು ಹೇಳಿದಂತೆ, ಈಗಿಂದೀಗಲೇ ಇಡೀ ಭಾರತಕ್ಕೆ ಅನ್ವಯವಾಗುವಂತೆ ಮಾಡಿ.

ಇನ್ನು ಹಿಂದೂ ಕೋಡ್ ವಿಧೇಯಕ, ಯಾವ ತೀರ್ಮಾನ ಆಗುತ್ತದೋ ನನಗೆ ಗೊತ್ತಿಲ್ಲ. ವಿಧೇಯಕದ ಉಳಿದ ಭಾಗಗಳ ಬಗ್ಗೆ ಚರ್ಚೆ ಆಗುವ ಸಾಧ್ಯತೆ ಇಲ್ಲ, ಸಮಯ ಸಾಲದು ಎನ್ನುವ ಇಂತಿತವನ್ನು ಪ್ರಧಾನ ಮಂತ್ರಿಗಳು ಕೊಟ್ಟಿದ್ದಾರೆ. ನಾನೊಂದು ಸಲಹೆ ಕೊಡಬಯಸುತ್ತೇನೆ. ಹಿಂದೂ ಕೋಡ್ ಈಗ ಹೇಗಿದೆಯೋ ಅದನ್ನೇ ಇಡಿಯಾಗಿ ಅಂಗೀಕರಿಸಿ; ಆಯ್ಕೆ ಸ್ವಾತಂತ್ರ್ಯ ಕೊಡಿ. ಯಾರು ಇಚ್ಛಿಸುತ್ತಾರೋ, ಅವರು ಅಳವಡಿಸಿಕೊಳ್ಳಲಿ. ಅಪ್ಪಟ ಸಂಪ್ರದಾಯವಾದದ ವಕ್ತಾರರೊಂದಿಗೆ ಸಹ ನಾನು ಮಾತನಾಡಿದ್ದೇನೆ. ಅವರೊಂದಿಗೆ ವಾಗ್ವಾದ ಮಾಡಿದ್ದೇನೆ. ಅವರಲ್ಲಿ ಯಾರು ಅನೇಕರು ಇಂಥದೊಂದು ವಿಧೇಯಕ ಅಂಗೀಕಾರವಾಗುವುದನ್ನು ವಿರೋಧಿಸಿದರೋ ಅವರೇ ಇನ್ನೊಮ್ಮೆ ಸ್ವತಃ ಆಲೋಚನೆ ಮಾಡಿದಾಗ, ಇತರರಿಗೆ ಆ ಅವಕಾಶ ಇರಬೇಕಾಗುತ್ತದೆ, ಭವಿಷ್ಯತ್ತಿನ ದೃಷ್ಟಿಯಿಂದ ಸರಿ

ಎನ್ನುವ ತಿಳುವಳಿಕೆ ಅವರಿಗೆ ಉಂಟಾಗುತ್ತದೆ. ತಿಳುವಳಿಕೆ ಬಂದರೆ ಅದೊಂದು ಅತ್ಯುತ್ತಮ ಬೆಳವಣಿಗೆ ಎಂದೆನಿಸಿಕೊಳ್ಳುತ್ತದೆ. ಈ ಸಂಹಿತೆಗೆ ಎಷ್ಟೋ ವಿರೋಧ ವಿರಬಹುದಾದರೂ, ಇದು, ಡಾ|| ಅಂಬೇಡ್ಕರರ ಹಾಗೂ ಅವರೊಂದಿಗೆ ಕೆಲಸ ಮಾಡಿದವರ, ನಂಬಲಿಕ್ಕೇ ಆಗದಂತಹ, ಅದ್ಭುತ ಕಾರ್ಯವೆಂಬುದನ್ನು ನಾನು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ, ಇದು ತುಂಬಾ ಜಟಿಲವಾದ ವಿಷಯ. ಈ ವಿಷಯದಲ್ಲಿ ಯಾರೇ ಎಷ್ಟೇ ಪಾರಂಗತರಿರಬಹುದು, ಡಾ|| ಅಂಬೇಡ್ಕರ್‌ರವರು ವಿಷಯದ ಆಳಕ್ಕಿಳಿದು ಕಸರತ್ತು ಮಾಡಿದ್ದಾರೆ ಎಂಬುದನ್ನು ಸಹ ನಾನು ಒಪ್ಪಿಕೊಳ್ಳುತ್ತೇನೆ. ಅದಕ್ಕಾಗಿ, ಸಂಸತ್ತು ಅನುಗ್ರಹಿಸಬಹುದಾದ ಗೌರವ ಪದವಿಯನ್ನು ಒಪ್ಪಿಕೊಳ್ಳಲು ಅವರು ಸಿದ್ಧರಿದ್ದರೆ, ನಾವು ಆ ಪದವಿಯನ್ನು ಕೊಡಲು ಸಿದ್ಧರಿದ್ದೇವೆ. ಆದರೆ, ಅದು, ಅದನ್ನು ವಿರೋಧಿಸುತ್ತಿರುವ ಲಕ್ಷಾಂತರ ಹಿಂದೂಗಳ ಕುತ್ತಿಗೆ ಹಿಸುಕುವ ನಿಯಮವಾಗುತ್ತಿರುವುದನ್ನು ನೋಡಿದರೆ, ನೀವು ಭಾರತದ ಜನರಿಗೆ ಉಪಕಾರ ಮಾಡುತ್ತಿಲ್ಲವೆಂದು ನಾನು ಹೇಳಲೇಬೇಕಾಗಿದೆ. ಈ ಕೊನೆಯ ಗಳಿಗೆಯಲ್ಲೂ ನೀವು ಒಂದು ಮಾರ್ಗ ಅನುಸರಿಸಬಹುದು. ಅದೇನೆಂದರೆ, ನಮ್ಮನಮ್ಮಲ್ಲೇ ಜಗಳ ಬೇಡ; ಈ ಮೂಲಭೂತ ವಿಷಯದಲ್ಲಿ ಭಿನ್ನಾಭಿಪ್ರಾಯ ಇದೆಯೆಂಬುದನ್ನು ನಾವು ಒಪ್ಪಿಕೊಳ್ಳೋಣ. ಈ ಕ್ಷಣವೇ ಸಂಭವಿಸುವ ಸಮಾಜಘಾತಕ ಅಥವಾ ಹಿಂದೂ ಸಮಾಜದ ಜೀವಾಳವನ್ನೇ ತಿಂದು ಹಾಕುವ ಕೆಲವೊಂದು ವಿಷಯಗಳಿರುವುದನ್ನು ನೀವು ಎತ್ತಿ ತೋರಿಸಲು ಸಿದ್ಧರಿದ್ದರೆ, ಅಂಥವೇನಾದರೂ ಇದ್ದರೆ, ಅಂಥ ನಿಯಮಗಳನ್ನು ಕಡ್ಡಾಯ ಮಾಡುವುದಕ್ಕೆ ನಾವು ಒಪ್ಪೋಣ. ಅಂಥವೇನೂ ಇಲ್ಲದಿದ್ದರೆ, ನೀವು ಸಿದ್ಧಪಡಿಸಿರುವ ಈ ಹೊಸ ಮಹಾನ್ ರಚನೆ ಏನಿದೆ ಅದನ್ನು ಕೆಲವಾರು ವರ್ಷಗಳ ವರೆಗೆ ಹಾಗೆಯೋ ಇಡಿ, ಹಿಂದೂ ಅಥವಾ ಹಿಂದೂ ಅಲ್ಲದವರು ಯಾರೇ ಆಗಲಿ, ಯಾರೇ ಭಾರತೀಯ ನಾಗರೀಕ, ಇದನ್ನು ಒಪ್ಪಿಕೊಳ್ಳಬಯಸಿದರೆ, ಹಾಗೆಂದು ಘೋಷಣೆ ಬರೆದುಕೊಡಬೇಕೆಂದು ಮತ್ತು ಹಾಗೆ ಆಯ್ದುಕೊಂಡವರಿಗೆ ಮಾತ್ರವೇ, ವಿವಾಹ ಅಥವಾ ವಿಚ್ಛೇದನ ಅಥವಾ ಆಸ್ತಿಪಾಸ್ತಿ, ಅದೇನೇ ಇರಲಿ, ನಿಯಮಗಳು ಅನ್ವಯವಾಗುತ್ತದೆಂದು ಹೇಳಿ. ಹಾಗೆ ಮಾಡಿದರೆ, ಹೊಸಯುಗಕ್ಕೆ ನಾಂದಿಯಾಗುತ್ತದೆ. ಅಂತಿಮವಾಗಿ ನಿರ್ಧರಿಸುವವರು ಯಾರು ? ನಿಮ್ಮ ಚುನಾವಣೆ ಕಾಲ ಹತ್ತಿರ ಬರುತ್ತಿದೆ. ನೀವು ಜನರ ಮುಂದೆ ನಿಲ್ಲುತ್ತೀರಿ. ಪ್ರಧಾನ ಮಂತ್ರಿಗಳೇ ಹೇಳಿದ್ದಾರೆ: ಸಂಪೂರ್ಣ ಜಯದ ಗಾಳಿ ಬೀಸುತ್ತದೆ, ಎಲ್ಲ ವಿರೋಧಿಗಳನ್ನು ನುಚ್ಚು ನೂರು ಮಾಡುತ್ತದೆ ಹಾಗೂ..........

ನಿಜ, ಸುಂಟರಗಾಳಿ ಬರಲಿದೆ. ಹಿಂದೂ ಕೋಡ್ ವಿಧೇಯಕ ಕುರಿತಂತೆ ಸಹ ಸುಂಟರಗಾಳಿ ಬೀಸಲಿ. ಅವರು ಜನರ ಬಳಿಗೆ ಹೋಗಿ, ಅದನ್ನು ಒತ್ತಾಯದಿಂದ ಅವರ ಮೇಲೆ ಹೇರುತ್ತಿಲ್ಲ ಎಂದು ಹೇಳಲಿ. "ನಾವು ನಿಮಗೆ ಆಯ್ಕೆ ಅವಕಾಶ ಕೊಟ್ಟಿದ್ದೇವೆ. ಇದೇ, ನಾವು ನಿಮಗಾಗಿ ನಿರ್ಮಿಸಿರುವ ಸ್ವರ್ಗ. ಈ ಸ್ವರ್ಗಕ್ಕೆ ಬನ್ನಿ, ಮೋಕ್ಷ ಹೊಂದಿರಿ" ಎಂದು ಅವರು ಹೇಳಲಿ. ಹೋಗಿ, ಜನರಿಗೆ ವಿವರಿಸಿ. ಹೌದಲ್ಲ, ಇದೇ ನಿಜವಾದ ಸ್ವರ್ಗ,

ದೆಹಲಿಯ ಲಾಡು ಅಲ್ಲ ಎಂದು ಅವರಿಗನ್ನಿಸಿದರೆ, ಅವರು ಬಂದೇ ಬರುತ್ತಾರೆ, ಬಿಚ್ಚು ಮನಸ್ಸಿನಿಂದಲೇ ಬರುತ್ತಾರೆ. ಮೋಕ್ಷ ಹೊಂದುತ್ತಾರೆ. ಸಾಕಷ್ಟು ಕಾಲಾವಕಾಶ ಇದೆ. ಎಷ್ಟೇ ಆಗಲಿ, ಹಿಂದೂ ನಾಗರೀಕತೆ ಹಲವಾರು ಅಕ್ರಮಣಗಳ, ಸಾಂಸ್ಕೃತಿಕ, ರಾಜಕೀಯ ಹಾಗೂ ಆರ್ಥಿಕ ಅತಿಕ್ರಮಣಗಳ ಹೊಡೆತಕ್ಕೆ ಸಿಕ್ಕಿದರೂ, ಸಾವಿರಾರು ವರ್ಷಗಳಿಂದ ಉಳಿದುಕೊಂಡು ಬಂದಿದೆ. ಎಲ್ಲದರಿಂದಲೂ ಪಾರಾಗಿದ್ದೇವೆ. ನಾವೀಗ ಸ್ವತಂತ್ರ ರಾಷ್ಟ್ರವಾಗಿದ್ದೇವೆ. ನಾವು ಚೆನ್ನಾಗಿ ಬದುಕಿ ಬಾಳಬೇಕಾಗಿದೆ. ಹಿಂದೆ ಏನೆಲ್ಲವನ್ನು ಸಾಧಿಸಿದ್ದೇವೆಯೋ ಅದಕ್ಕಿಂತಲೂ ಭವ್ಯವಾದ ಭವಿಷ್ಯತ್ತನ್ನು ರೂಪಿಸಿಕೊಳ್ಳಬೇಕಾಗಿದೆ. ಆದರೆ, ಬಿನ್ನ ಭಿನ್ನ ಅಭಿಪ್ರಾಯಗಳು, ಅಭಿರುಚಿಗಳು ಹಾಗೂ ವಿಚಾರಗಳು ಇರುವಂಥ ಈ ವಿಶಾಲ ದೇಶದಲ್ಲಿ ನೀವು ಈ ರೀತಿಯ ಸಾಮಾಜಿಕ ಸುಧಾರಣೆಗಳನ್ನು ತರುವುದಾದರೆ ನಿಧಾನವಾಗಿ ಅವುಗಳನ್ನು ತರುವುದೊಂದೇ ನಿಮಗೆ ಉಳಿದಿರುವ ಮಾರ್ಗ, ನಿಜವಾದವುಗಳೆಂದು ನೀವು ಯಾವುದನ್ನು ಭಾವಿಸಿದ್ದೀರೋ ಆ ತತ್ವಗಳನ್ನು ಕೈಬಿಡಿ ಎಂದು ನಾನು ಕೇಳುತ್ತಿಲ್ಲ. ಸದ್ಯಕ್ಕೆ ಕೈಬಿಡಿ ಎಂದು ನಾನು ಕೇಳುತ್ತಿಲ್ಲ. ದಯಮಾಡಿ ಜನರ ಬಳಿಗೆ ಹೋಗಿ, ಜನರಿಗೆ ಮನವರಿಕೆ ಮಾಡಿಕೊಡಿ. ಪ್ರಪಂಚದ ಯಾವುದೇ ಭಾಗದಲ್ಲಿ ಈಗ ಪ್ರಚಲಿತವಿರುವುದಕ್ಕಿಂತ ಯಾವುದೇ ರೀತಿಯಲ್ಲೂ ಕೀಳಿಲ್ಲದ ಸೂತ್ರಗಳನ್ನು, ನ್ಯಾಯ ಸೂತ್ರಗಳನ್ನು ಹಿಂದೂ ಜನರು ಅನುಸರಿಸುತ್ತಿದ್ದಾರೆ. ಜನರಿಗೆ ಆಯ್ಕೆ ಮಾಡಿಕೊಳ್ಳುವ ಅವಕಾಶ ಕೊಡಿ. ಈ ಸದನಕ್ಕೆ ಸರ್ಕಾರಕ್ಕೆ ಇದೇ ನನ್ನ ಮನವಿ. ನನ್ನ ಮನವಿಯನ್ನು ಗಮನಕ್ಕೆ ತೆಗೆದುಕೊಳ್ಳಲಾಗುತ್ತದೆ ಎಂಬ ನಂಬಿಕೆ ನನಗಿದೆ.

## ಭಾಷಾವಾರು ಪ್ರಾಂತ್ಯಗಳು *

ಭಾರತ ಒಕ್ಕೂಟದ ಪ್ರಾಂತ್ಯಗಳ ಗಡಿಗಳ ಮರುವಿಂಗಡನೆ ಬಗ್ಗೆ ಮಾತನಾಡುವಾಗ, ಯಾರೇ ಆಗಲಿ, ಸಮಸ್ಯೆಯನ್ನು ಯಾವುದೇ ರಾಜಕೀಯ ಪಕ್ಷದ ದೃಷ್ಟಿಕೋನದ ಬೆಳಕಿನಲ್ಲಿ ನೋಡಬಾರದು. ರಾಜ್ಯಾಂಗದ 3ನೇ ವಿಧಿಯ ಅನ್ವಯ, ಈ ಸದನಕ್ಕೆ, ಮಾತ್ರವೇ ಈ ವಿಷಯವನ್ನು ತೀರ್ಮಾನಿಸುವ ಅಧಿಕಾರ ಇದೆ. ಸಮಸ್ಯೆಯು ಮುಳ್ಳಿನ ಹಾಸಿಗೆಯೆಂದು ನಾವು ಹೇಳಿದರೆ, ಅದರಿಂದ ಏನೂ ಪ್ರಯೋಜನವಿಲ್ಲ. ಮುಳ್ಳಿನ ಹಾಸಿಗೆಯೆಂಬುದರಲ್ಲಿ ಅನುಮಾನವಿಲ್ಲ, ಆದರೆ, ಸಮಸ್ಯೆಯನ್ನು ಬಗೆಹರಿಸಲೇ ಬೇಕಲ್ಲ. ಸಂಬಂಧ ಪಟ್ಟವರೆಲ್ಲರೂ, ಸರಿ ಹಾಗೂ ನ್ಯಾಯಸಮ್ಮತ್ರರೆಂದು ಭಾವಿಸುವಂಥ ರೀತಿಯಲ್ಲಿ ಬಗೆಹರಿಸಬೇಕಾಗಿದೆ. ಕೆಲವೊಂದು ಪ್ರದೇಶಗಳಲ್ಲಿ ಕೆಲವೊಂದು ವರ್ಗದವರು ಅಥವಾ ಇತರರು ಈ ಸಮಸ್ಯೆಯನ್ನು ಹಾಗೂ ಭಾರತ ಒಕ್ಕೂಟದ ಪ್ರಾಂತ್ಯಗಳ ಗಡಿಗಳ ಮರು - ಪರಿಶೀಲನೆ ಆಗಬೇಕೆಂದು ವ್ಯಕ್ತವಾಗಿರುವ ರಾಶಿಗಟ್ಟಲೆ ಅಭಿಪ್ರಾಯವನ್ನು ರಾಜಕೀಯ ಪ್ರಯೋಜನಕ್ಕಾಗಿ ಬಳಸಿಕೊಳ್ಳುತ್ತಿರಬಹುದು. ಆದರೆ, ಈ ಸಮಸ್ಯೆಯನ್ನು ತೀವ್ರವಾಗಿ ಪರಿಶೀಲಿಸಬೇಕೆಂಬ ನೈಜ ಬೇಡಿಕೆ ದೇಶದ ಹಲವಾರು ಭಾಗಗಳಲ್ಲಿ - ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ - ಇದ್ದೇ ಇದೆ.

ನಾನು ಇತಿಹಾಸಕ್ಕೆ ಹೋಗಬಯಸುವುದಿಲ್ಲ, ಕಾಂಗ್ರೆಸ್ ವರ್ಷ ವರ್ಷವೂ ಅನೇಕ ಆಶ್ವಾಸನೆಗಳನ್ನು ನೀಡುತ್ತಲೇ ಇದೆ. ನಿಜ ಹೇಳಬೇಕೆಂದರೆ, ಅದು, ತಾನು ಅಧಿಕಾರಕ್ಕೆ ಬಂದ ಕೂಡಲೇ, ತನ್ನ ಮೊದಲ ಆದ್ಯತೆಗಳಲ್ಲಿ ಒಂದಾದ, ಭಾಷೆ ಆಧಾರದ ಮೇಲೆ ಭಾರತದ ಪ್ರಾಂತ್ಯಗಳನ್ನು ಪುನರ್ ರಚಿಸುವ ವಿಷಯವನ್ನು ಪರಿಶೀಲಿಸುವುದಾಗಿ ಘೋಷಿಸಿತ್ತು. ಪಂಡಿತ್ ನೆಹರೂ, ಸರ್ದಾರ್ ಪಟೇಲ್ ಹಾಗೂ ಪಟ್ಟಾಭಿ ಸೀತಾರಾಮಯ್ಯನವರು ಸಹಿ ಮಾಡಿರುವ ವರದಿ ನನ್ನ ಮುಂದಿದೆ. ಕಾಂಗ್ರೆಸ್ ಪಕ್ಷವು ಈ ಎಲ್ಲ ಆಶ್ವಾಸನೆಗಳನ್ನು ಕೊಟ್ಟಿದ್ದರೂ, ಮುಖ್ಯವಾಗಿ 1947 ಆಗಸ್ಟ್ ತಿಂಗಳಲ್ಲಿ ಏನಾಯಿತೋ ಅದಾದ ನಂತರದ ಹೊಸ ವಿದ್ಯಮಾನಗಳ ದೃಷ್ಟಿಯಿಂದ - ಸ್ವಾತಂತ್ರ್ಯ ಮತ್ತು ಭಾರತದ ವಿಭಜನೆಯನ್ನು ಉಲ್ಲೇಖಿಸಲಾಗಿದೆ - ಈ ವಿಷಯವನ್ನು ಪುನರ್ ಪರಿಶೀಲಿಸಬೇಕಾಗಿ ದೆಯೆಂಬುದಕ್ಕೆ ಅವರು ಒತ್ತು ಕೊಟ್ಟಿದ್ದಾರೆ. ವಾಕ್ಯ ಭಾಗಗಳು ಹೀಗಿವೆ.

"ಏಳನೆಯದಾಗಿ - ಭಾರತದಲ್ಲಿರುವ ಅಲ್ಪ ಸಂಖ್ಯಾತರಿಗೆ ರಕ್ಷಣೆ ನೀಡುವ ಪ್ರಯತ್ನದಲ್ಲಿ ಒಪ್ಪಂದವು, ಭಾರತದಲ್ಲಿರುವ ಮುಸ್ಲಿಂ ಅಲ್ಪ ಸಂಖ್ಯಾತರ ಸಮಸ್ಯೆಗೆ ಮತ್ತೆ ಬಾಗಿಲು ತೆರೆದಿದೆ, ಪಾಕಿಸ್ತಾನವನ್ನು ಹುಟ್ಟು ಹಾಕಿದಂತಹ ವಿಚ್ಛಿದ್ರಕಾರಿ ಶಕ್ತಿಗಳು ಮತ್ತೆ ತಲೆ ಎತ್ತುವಂತೆ ಮಾಡಿದೆ. ಈ

* ಲೋಕಸಭಾ ಚರ್ಚೆಗಳು, 7 ಜುಲೈ 1952 ಕಾಲಂ 3317-332

ತತ್ವವನ್ನು, ತರ್ಕಬದ್ಧವೆಂದು ಪರಿಗಣಿಸಿಬಿಟ್ಟರೆ, ನಮಗೆ ಹೊಸ ಸಮಸ್ಯೆಗಳನ್ನು ತಂದೊಡ್ಡುತ್ತದೆ, ಕಟ್ಟುನಿಟ್ಟಾಗಿ ಹೇಳುವುದಾದರೆ, ಅದು ನಮ್ಮ ರಾಜ್ಯಾಂಗಕ್ಕೇ ವಿರುದ್ಧವಾದುದು".

ನಾನುಪರ್ಯಾಯ ಮಾರ್ಗಗಳನ್ನು ಚರ್ಚಿಸಲು ಇದು ಸಮಯವೂ ಅಲ್ಲ. ಸಂದರ್ಭವೂ ಅಲ್ಲ, ಸರ್ಕಾರವು ಈಗ ಅನುಸರಿಸುತ್ತಿರುವ ನೀತಿಯ ಪರಿಣಾಮಗಳು ಗೊತ್ತಾಗುವವರೆಗೂ ಇದನ್ನು ತಡೆಯಬೇಕಾಗುತ್ತದೆ. ಆ ಒಪ್ಪಂದವನ್ನು ಅಂಗೀಕರಿಸಿದವರ ಉದ್ದೇಶಗಳೇನೆಂಬುದನ್ನು ನಾನು ಪ್ರಶ್ನಿಸುತ್ತಿಲ್ಲ. ಒಪ್ಪಂದವನ್ನು ಏಕಪಕ್ಷೀಯವಾಗಿ ಅನುಸರಿಸಬಾರದೆಂದೇ ನನ್ನ ಅನಿಸಿಕೆ. ಒಪ್ಪಂದ ಸಫಲವಾದರೆ, ನನಗೆ ಅದಕ್ಕಿಂತಲೂ ಸಂತೋಷ ಇನ್ನೊಂದಿಲ್ಲ. ಒಂದು ವೇಳೆ ಅದು ವಿಫಲವಾದರೆ, ನಿಜವಾಗಿಯೂ ಅದೊಂದು ಹಾನಿಕಾರಕ ಮತ್ತು ದುರಂತದ ಪ್ರಯೋಗವಾದಂತಾಗುತ್ತದೆ. ಆ ಒಪ್ಪಂದದಲ್ಲಿ ಭರವಸೆ ಉಳ್ಳವರನ್ನು, ದಯಮಾಡಿ, ಪೂರ್ವ ಬಂಗಾಳಕ್ಕೆ ಹೋಗಿ - ಒಬ್ಬರೇ ಅಲ್ಲ, ಹೆಂಡಂದಿರು, ಅಕ್ಕ ತಂಗಿಯರು, ಹೆಣ್ಣು ಮಕ್ಕಳನ್ನು ಜೊತೆ ಕರೆದುಕೊಂಡು ಹೋಗಿ - ಪೂರ್ವ ಬಂಗಾಳದಲ್ಲಿರುವ ನತದೃಷ್ಟ ಹಿಂದೂಗಳ ಜೊತೆಗಿದ್ದು, ಅವರುಗಳು ಏನೇನು ಬವಣೆ ಪಡುತ್ತಿದ್ದಾರೆಂಬುದನ್ನು ಕಣ್ಣಾರೆ ಕಾಣುವ ಜವಾಬ್ದಾರಿಯನ್ನು ಹೊರಬೇಕೆಂದು ವಿನಯ ಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ಅವರು ಇಟ್ಟುಕೊಂಡಿರುವ ಭರವಸೆ ಸರಿಯೇ, ಅಲ್ಲವೇ ಎಂಬುದಕ್ಕೆ ಅದೇ ನಿಜವಾದ ಸತ್ವ ಪರೀಕ್ಷೆ. ಇತಿಹಾಸದಲ್ಲಿ ಸರಿಸಮನಾದುದು ಇನ್ನೊಂದಿಲ್ಲದ ಈ ಉಪದ್ರವದ ನಿವಾರಣೆಗೆ ಸರ್ಕಾರವು ಅನುಸರಿಸುತ್ತಿರುವ ಧೋರಣೆ ನನಗೆ ಹಿಡಿಸುವುದಿಲ್ಲವಾದರೂ ಈ ಹೊತ್ತಿನ ಪರಮ ಅಗತ್ಯವೆಂದರೆ ಭಾರತದಲ್ಲಿ ಶಾಂತಿಪಾಲನೆ ಹಾಗೂ ಭದ್ರತೆಯೆಂಬುದನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆಂಬ ಭರವಸೆಯನ್ನು ನಾನು ಈ ಸದನಕ್ಕೆ ನೀಡುತ್ತೇನೆ. ತೃಪ್ತಿಪಡಿಸಲು ಹೊರಡುವುದರಿಂದ ಆಗುವ ವಿನಾಶಕಾರಿ ಪರಿಣಾಮಗಳನ್ನು ತಪ್ಪಿಸಲು ಮತ್ತು ದಮನಕಾರಿ ನೀತಿಯಿಂದಾಗುವ ಕೆಟ್ಟ ಪರಿಣಾಮಗಳನ್ನು ತಪ್ಪಿಸಲು ಹಾಗೂ ನಮ್ಮ ನಾಡಿನಲ್ಲಿ ಅರಾಜಕತೆ ಮತ್ತು ಗೊಂದಲ ಹುಟ್ಟಿಸಲು ಯಾವ ಉತ್ತೇಜನವನ್ನೂ ಕೊಡದಿರಲು ಈ ಸರ್ಕಾರವು ಸರಿಯಾಗಿ, ದೃಢವಾಗಿ ಮತ್ತು ಸಕಾಲಿಕವಾಗಿ ಕಾರ್ಯ ಪ್ರವೃತ್ತವಾಗಬೇಕೆಂದು ಆಗ್ರಹ ಪೂರ್ವಕವಾಗಿ ಒತ್ತಾಯಿಸಬೇಕಾಗಿದೆ. ಇನ್ನೊಂದು ಅವಕಾಶ ಬೇಕೆಂಬ - ಇದೇ ಕೊನೆಯ ಅವಕಾಶ ಎಂದು ನಾವೆಲ್ಲರೂ ತಿಳಿದುಕೊಳ್ಳೋಣ ತವಕ ಸರ್ಕಾರಕ್ಕೆ ಇದ್ದರೆ, ಸರ್ಕಾರ ಧಾರಾಳವಾಗಿ ತೆಗೆದುಕೊಳ್ಳಲಿ. ಆದರೆ, ಸರ್ಕಾರದ ನೀತಿಯನ್ನು ಟೀಕಿಸುವವರನ್ನು ಸುಮ್ಮನಿರಿಸಬೇಡಿ ಅಥವಾ ಬಾಯಿ ಕಟ್ಟಬೇಡಿ. ನಮ್ಮ ದುರಾದೃಷ್ಟವೆಂದರೆ, ಒಪ್ಪಂದಕ್ಕೆ ಭಾಗಿಯಾಗಿದ್ದ ಪಕ್ಷವೇ, ತನ್ನ ವಾಗ್ದಾನಗಳನ್ನು ಮತ್ತು ಆಶ್ವಾಸನೆಗಳನ್ನು ವ್ಯವಸ್ಥಿತವಾಗಿ ಉಲ್ಲಂಘಿಸಿದೆ. ಸಮಸ್ಯೆ ಬಗೆಹರಿಸುವುದಕ್ಕೆ ತನಗೆ ಸಾಮರ್ಥ್ಯ ಇದೆಯೆಂಬುದನ್ನು ಕಾರ್ಯತಃ

ಮಾಡಿ ತೋರಿಸುವ ತನಕ ನಮಗೆ ನಂಬಿಕೆ ಬರುವುದೇ ಇಲ್ಲ. ಈ ನಮ್ಮ ಎಚ್ಚರಿಕೆಯನ್ನು ಸರ್ಕಾರ ಅಹಿತಕರ ಎಂದು ಭಾವಿಸಬಾರದು. ಇದರಿಂದ, ಸರ್ಕಾರವು ಇನ್ನಷ್ಟು ಶ್ರದ್ಧೆಯಿಂದ ಮತ್ತು ಜಾಗರೂಕತೆಯಿಂದ ಕಾರ್ಯ ಪ್ರವೃತ್ತವಾಗುವುದು ಸಾಧ್ಯವಾಗುತ್ತದೆ ಮತ್ತು

> "ನಮ್ಮ ಎಲ್ಲ ಚಿಂತನೆಗಳನ್ನು ಮತ್ತು ನಮ್ಮ ಚಟುವಟಿಕೆಗಳನ್ನು ಭಾರತದಲ್ಲಿ ಉದ್ಭವವಾಗಿರುವ ಹೊಸ ಪರಿಸ್ಥಿತಿಗಳಿಗೆ ಮತ್ತು ಇಂದಿನ ಸಮಸ್ಯೆಗಳಿಗೆ ಸರಿಹೊಂದಿಸಿ ಕೊಳ್ಳಬೇಕಾಗುತ್ತದೆ. ಇಂದಿನದನ್ನು ನಿನ್ನೆಯದರ ಹಿನ್ನೆಲೆಯಲ್ಲಿ ಆಲೋಚಿಸುವುದಕ್ಕಿಂತಲೂ ಅಥವಾ ಇಂದಿನ ಸಮಸ್ಯೆಗಳನ್ನು ನಿನ್ನೆಯದರ ಹಿನ್ನೆಲೆಯಲ್ಲಿ ಪರಿಹರಿಸಬಯಸುವುದಕ್ಕಿಂತಲೂ ದೊಡ್ಡ ತಪ್ಪು ಇನ್ನಾವುದೂ ಇರಲಾರದು".

ಆದ್ದರಿಂದ, ಇಂದಿನ ಸಂದರ್ಭದಲ್ಲಿ ಭಾಷಾವಾರು ಪ್ರಾಂತ್ಯಗಳ ಸಮಸ್ಯೆಯನ್ನು ನಾವು ನೋಡಬೇಕಾದುದು ಅತ್ಯಗತ್ಯ. ಕಳೆದ ವರ್ಷಗಳಲ್ಲಿ ಏನೇ ಆಗಿರಲಿ, ಕೇವಲ ಆ ಸಂದರ್ಭವನ್ನಷ್ಟೇ ನೋಡದೆ, ಇಂದಿನ ಸಂದರ್ಭವನ್ನು ಗಮನಕ್ಕೆ ತೆಗೆದುಕೊಂಡು ಈ ವಿಷಯವನ್ನು ಪರಿಶೀಲಿಸಬೇಕೆಂದು ನಾನು ಪ್ರಧಾನ ಮಂತ್ರಿಗಳಿಗೆ ವಿನಯಪೂರ್ವಕ ಒತ್ತಾಯ ಮಾಡುತ್ತೇನೆ. ಇತಿಹಾಸದಿಂದ ನಾವು ಉದಾಹರಣೆಗಳನ್ನು ಪಡೆಯಬಹುದಾದರೂ, ದೇಶದ ನಾನಾ ಭಾಗಗಳಲ್ಲಿ ಉದ್ಭವಿಸಿರುವ ಗುರುತರ ಪರಿಸ್ಥಿತಿಯನ್ನು ನಾವು ಗಮನಿಸಲೇಬೇಕು ಮತ್ತು ಮುಖ್ಯವಾಗಿ, ಭಾಷೆಗಳ ಆಧಾರದ ಮೇಲೆ ಭಾರತವನ್ನು ಹೋಳು ಮಾಡಬೇಕೇ, ಬೇಡವೇ ಎಂಬುದನ್ನು ಕೂಡಲೇ ಇತ್ಯರ್ಥ ಮಾಡಬೇಕಿದೆ. ನನ್ನ ಮಟ್ಟಿಗೆ ಹೇಳುವುದಾದರೆ, ಭಾರತವನ್ನು ಹೋಳು ಮಾಡುವುದಕ್ಕೆ ಭಾಷೆಗಳು ಮಾತ್ರವೇ ಆಧಾರವಾಗಬಾರದೆಂದು ನಾನು ಯಾವಾಗಲೂ ಹೇಳುತ್ತಲೇ ಇದ್ದೇನೆ. ನೀವು, ಆಡಳಿತ ದಕ್ಷತೆ, ಭದ್ರತೆ, ಆರ್ಥಿಕ ಉನ್ನತಿ ಮತ್ತು ದೇಶದ ಏಕತೆಯಂಥ ಇತರ ಮಹತ್ವದ ಅಂಶಗಳನ್ನು ಪರಿಗಣಿಸಲೇ ಬೇಕಾಗುತ್ತದೆ. ಇವು ಯಾರೇ ಪ್ರಜ್ಞಾವಂತರು ಕಡೆಗಣಿಸಲಾಗದಂಥ ಮಹತ್ವದ ಅಂಶಗಳು. ಆದರೂ, ಭಾರತವು ಅನೇಕ ಪ್ರಾಂತ್ಯಗಳಾಗಿ ಹೋಳಾಗಿದೆ. ಪ್ರಾಂತ್ಯಗಳಿರಲೇಬೇಕೆಂಬ ಅಗತ್ಯವಿಲ್ಲ. ಜಿಲ್ಲೆಗಳಿದ್ದರೆ ಸಾಕು ಎಂಬುದೇ ಉದ್ದೇಶವಾಗಿದ್ದರೆ, ಯಾವುದೇ ಭಾಷಾ ವಿವಾದದ ಪ್ರಶ್ನೆಯೇ ಇರುವುದಿಲ್ಲ. ಅಂಥ ಪ್ರಸ್ತಾಪವನ್ನು ನಾನು ಒಪ್ಪಲು ಸಿದ್ಧನಿದ್ದೇನೆ. ಆದರೆ, ನೀವು ಪ್ರಾಂತ್ಯಗಳಿರಲೇಬೇಕಾಗುತ್ತದೆ ಎಂದು ಹೇಳಿದರೆ, ಆಗ, ಈ ಪ್ರಾಂತ್ಯಗಳನ್ನು ರೂಪಿಸಲು ಕೆಲವೊಂದು ಮೂಲಭೂತ ಪರಿಗಣನೆಗಳು ಇರಲೇಬೇಕಾಗುತ್ತದೆ ಮತ್ತು ಹಾಗೆ ರೂಪಿಸುವಾಗ ಭಾಷೆ ಸಹ ಒಂದು ಮಹತ್ವದ, ಅತಿ ಮಹತ್ವದ ಪರಿಗಣನೆಯಾಗುತ್ತದೆ. ಈ ವಿಷಯದಲ್ಲಿ ಪಂಜಾಬ್, ಮುಂಬಯಿ, ಗುಜರಾತ್, ಮಹಾರಾಷ್ಟ್ರ, ಆಂಧ್ರ, ಮೈಸೂರು,

ಕರ್ನಾಟಕ, ಒರಿಸ್ಸಾ ಮುಂತಾದ ದೇಶದ ಬೇರೆ ಬೇರೆ ಭಾಗಗಳಲ್ಲಿ ಉದ್ಭವಿಸಿರುವ ಹಲವಾರು ಅಂಶಗಳನ್ನು ನನಗೆ ಸಮಯ ಇಲ್ಲ. ನನಗೆ ಕೊಟ್ಟಿರುವ ಸಮಯದೊಳಗೇ, ನಾನು ನನ್ನ ಪ್ರಾಂತ್ಯವಾದ ಪಶ್ಚಿಮ ಬಂಗಾಳದ ಬಗ್ಗೆ ಹೇಳಬಯಸುತ್ತೇನೆ.

ನಾನು ಸ್ವಲ್ಪ ಮುಂಚೆ ಹೇಳಿದ, ಪಂಡಿತ್ ಜವಹರಲಾಲ್ ನೆಹರೂ ಹಾಗೂ ಇತರರು ಕಳುಹಿಸಿದ ವರದಿಯಲ್ಲಿ, ಅವರು ಉತ್ತರ ಭಾರತದ ಬೇಡಿಕೆಗಳನ್ನು ತಳ್ಳಿಹಾಕಿದ್ದಾರೆ. 10ನೇ ಪುಟದಲ್ಲಿ ಸದಸ್ಯರುಗಳು ಹೇಳುತ್ತಾರೆ:

> "ಬೇಡಿಕೆಯಲ್ಲಿ ಹೇಳಿರುವಂತೆ, ಉತ್ತರ ಭಾರತದ ಭಾಗಗಳಲ್ಲಿನ ಪ್ರಾಂತೀಯ ಗಡಿಗಳಲ್ಲಿ ಚಿಕ್ಕಪುಟ್ಟ ಹೊಂದಾಣಿಕೆಯೆಂದು ಯಾವುದನ್ನು ಕರೆಯಬಹುದಾಗಿದೆಯೋ ಅದರಲ್ಲಿ ನಾವು ಕೈಹಾಕುವುದಿಲ್ಲ."
>
> "ನಮ್ಮ ಮುಂದಿಟ್ಟ ಈ ಬೇಡಿಕೆ ಬಗ್ಗೆ ಅದಷ್ಟೇ ನಮ್ಮ ಅಭಿಪ್ರಾಯವಲ್ಲ, ಅಂಥ ಯಾವ ವಿಷಯವನ್ನೂ ಸದ್ಯ ಎತ್ತಬಾರದೆಂಬುದು ಸಹ ನಮ್ಮ ಧೃಡವಾದ ಅಭಿಪ್ರಾಯ. ಅದರರ್ಥ, ಪ್ರಾಂತೀಯ ಗಡಿಗಳ ಹೊಂದಾಣಿಕೆಯ ಬೇಡಿಕೆಗಳು ಅಸಮರ್ಥನೀಯ ಅಥವಾ ಹುರುಳಿಲ್ಲದವು ಅಂತಲ್ಲ".

ಈ ವಿಷಯವನ್ನು ಈಗ ಎತ್ತಲು ಅವರು ಸಿದ್ಧರಿಲ್ಲ. ಸ್ವತಂತ್ರ ಭಾರತದ ಸಂಸತ್ತಿನ ಮುಂದೆ, ಪಶ್ಚಿಮ ಬಂಗಾಳದ ವಿಷಯವನ್ನು ನಾನು ಆಗ್ರಹಪೂರ್ವಕವಾಗಿಯೇ ಮಂಡಿಸ ಬಯಸುತ್ತೇನೆ. ವಿವಾದಾತ್ಮಕ ಆಧಾರದ ಮೇಲೆ ಅದನ್ನು ನಾನು ಮಂಡಿಸಬಯಸುವುದಿಲ್ಲ. ಈ ಸದನದಲ್ಲಿ ಇಂದು ಬಂಗಾಳ ಮತ್ತು ಬಿಹಾರ ಕಚ್ಚಾಡುವುದಕ್ಕೆ ಅಸ್ಪದ ಕೊಡುವ ವಿಷಯಗಳನ್ನು ತಾನು ಎತ್ತ ಬಯಸುವುದಿಲ್ಲ. ಆದರೆ, ಇಂದಿನ ದೃಷ್ಟಿಕೋನದಿಂದ ಸಮಸ್ಯೆಯನ್ನು ನೋಡಿ. ಈ ವರದಿಯಲ್ಲಿ ಪಂಡಿತ್ ನೆಹರೂ ಹೇಳಿದ ಮಾತುಗಳನ್ನು ನಾನು ಹೇಳುತ್ತಿದ್ದೇನೆ. ನಿಮಗೇ ಗೊತ್ತಿರುವಂತೆ, ಇದು ತುಂಬಾ ಇಕ್ಕಟ್ಟಿಗೆ ಸಿಲುಕಿರುವ ಪ್ರಾಂತ್ಯ ಭಾರತದ ಸ್ವಾತಂತ್ರ್ಯಕ್ಕಾಗಿ ವಿಭಜನಗೊಂಡ ಪ್ರಾಂತ್ಯ ಅದು.

ಇಂದಿನ ಬಂಗಾಳ, ಮುಂಚೆ ಇದ್ದ ಬಂಗಾಳದ ಮೂರನೇ ಒದರಷ್ಟಿದೆ. ಬಂಗಾಳದ ಗಡಿಗಳ ಪುನರ್ ಹೊಂದಾಣಿಕೆ ಮಾಡುವ ವಿಷಯವನ್ನು ನಾವು ಎತ್ತುವಾಗ, ಸಹಜವಾಗಿಯೇ, ಬಿಹಾರದ ಕೆಲವು ಭಾಗಗಳನ್ನು ಬಂಗಾಳಕ್ಕೆ ಸೇರಿಸುವ ವಿಷಯವನ್ನು ಎತ್ತುತ್ತೇವೆ. ಸ್ವಲ್ಪವೇ ಸ್ವಲ್ಪಹೊತ್ತು, ಇತಿಹಾಸಕ್ಕೆ ಉಲ್ಲೇಖ ಮಾಡಿದರೆ, ಮಾನ್‌ಭೂಮ್ ಜಿಲ್ಲೆ, ಸಿಂಗಭೂಮ್‌ನ ಭಾಗಗಳು, ಸಂತಾಲ ಪರಗಣಗಳು ಮತ್ತು ಪುರ್ನಿಯಾದ ಸಣ್ಣ ಭಾಗಗಳನ್ನು ಹೇಳಬಹುದು. 1905ರಲ್ಲಿ ಬಂಗಾಳದ ವಿಭಜನೆ ಮಾಡಲಾಯಿತು. ಆಗಿನಿಂದಲೇ ಭಾರತದ ಸ್ವಾತಂತ್ರ್ಯ ಚಳುವಳಿ ಪ್ರಾರಂಭವಾಯಿತೆನ್ನುವುದು ಸದನಕ್ಕೆ ಗೊತ್ತಿದೆ. 1911ರಲ್ಲಿ ವಿಭಜನೆಯನ್ನು

ರದ್ದುಗೊಳಿಸಿದಾಗ, ಮರು ವಿಂಗಡಣೆ ಆಗಬೇಕೆಂದು ಮತ್ತು ಬಂಗಾಳದ ಗಡಿಗಳನ್ನು ಮುಖ್ಯವಾಗಿ ನಾನು ಈಗ ಹೇಳಿದ ಜಿಲ್ಲೆಗಳಿಗೆ ಸಂಬಂಧಪಟ್ಟಂತೆ ಹೊಂದಾಣಿಕೆ ಮಾಡಬೇಕೆಂದು ನಿರ್ದೇಶನ ನೀಡಲಾಗಿತ್ತು. ವಾಸ್ತವವಾಗಿ 1911ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ, ಬಂಗಾಳಿ ಮಾತನಾಡುವ ಈ ಪ್ರದೇಶಗಳನ್ನು ಸಾಧ್ಯವಾದಷ್ಟು ಬೇಗನೆ ಬಂಗಾಳಕ್ಕೆ ಸೇರಿಸಬೇಕೆನ್ನುವ ನಿರ್ಣಯವೊಂದನ್ನು ಅಂಗೀಕರಿಸಲಾಗಿತ್ತು. ಡಾ॥ ಸಚ್ಚಿದಾನಂದ ಸಿನ್ಹರಿಗಿಂತಲೂ ಬಿಹಾರದ ಕಟ್ಟಾ ಅಭಿಮಾನಿ ಇನ್ನೊಬ್ಬರಿರಲಾರರು. ಡಾ॥ ಸಚ್ಚಿದಾನಂದ ಸಿನ್ಹರ ನೇತೃತ್ವದಲ್ಲಿ ಜನರು 1912ರಲ್ಲಿ ಒಂದು ಹೇಳಿಕೆ ಇತ್ತಿದ್ದಾರೆ. ಬಂಗಾಳಕ್ಕೆ ಈ ಪ್ರದೇಶಗಳನ್ನು ಸೇರಿಸುವುದು ಸಂಪೂರ್ಣವಾಗಿ ಸಮರ್ಥನೀಯ ಮತ್ತು ಕೂಡಲೇ ಕ್ರಮ ತೆಗೆದುಕೊಳ್ಳಬೇಕೆಂದು ಹೇಳಿದ್ದರು. ಹಾಗೆ ಮಾಡಲಿಲ್ಲ ? ಏಕೆ ಸೇರಿಸಲಿಲ್ಲ ? ಅಧಿಕೃತ ದಾಖಲೆಗಳನ್ನು ಈಗ ಪ್ರಕಟಿಸಲಾಗಿದೆ. 1905ರಲ್ಲಿ ಬಂಗಾಳದ ವಿಭಜನೆಯ ಹಿಂದಿರುವ ಘಟನೆಗಳು ಯಾವ ಯಾವುವು ? ಬ್ರಿಟಿಷ್ ಸೆಕ್ರೆಟರಿ ಆಫ್ ಸ್ಟೇಟ್‌ಗೆ ಲಾರ್ಡ್ ಹಾರ್ಡಿಂಜ್‌ಗೆ ಕಳುಹಿಸಿದ್ದ ರಹಸ್ಯ ಪತ್ರದಲ್ಲಿ ಬಂಗಾಳವನ್ನು ಹದ್ದುಬಸ್ತಿನಲ್ಲಿಡ್ಡಲು 1905ರಲ್ಲಿ ಬಂಗಾಳವನ್ನು ವಿಭಜಿಸಬೇಕಾಯಿತೆಂದು ಹೇಳಲಾಗಿದೆ. ಆಡಳಿತಾತ್ಮಕ ಕಾರಣಗಳಿಗಾಗಿ ಅಥವಾ ಆ ಭಾಗಗಳ ಜನರ ಅನುಕೂಲಕ್ಕಾಗಿ ಅಥವಾ ಇಡೀ ಭಾರತದ ಅನುಕೂಲಕ್ಕಾಗಿ ವಿಭಜನೆ ಮಾಡಲಿಲ್ಲ. ಆ ತರುವಾಯ, ಭಾಷಾವಾರು ಪ್ರಾಂತ್ಯಗಳ ರಚನೆಗೆ ಸಮರ್ಥನೆ ಇರುವುದನ್ನು ಕಂಡುಕೊಂಡು ಭಾರತ ರಾಷ್ಟ್ರೀಯ ಕಾಂಗ್ರೆಸ್ ಅನೇಕ ನಿರ್ಣಯಗಳನ್ನು ಅಂಗೀಕರಿಸಿರುವುದನ್ನು ನಾವು ನೋಡಿದ್ದೇವೆ. ಬಿಹಾರದಲ್ಲಿರುವ ಈ ಬಂಗಾಳಿ ಮಾತನಾಡುವ ಪ್ರದೇಶಗಳು ತನಗೆ ಸೇರಬೇಕೆಂಬ ಬಂಗಾಳದ ಬೇಡಿಕೆಯನ್ನು ಸಹ ಒಪ್ಪಿಕೊಳ್ಳಲಾಗಿದೆ. ವಾಸ್ತವವಾಗಿ, 1937ರ ಡಿಸೆಂಬರ್ ಕೊನೆಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸಭೆಯಲ್ಲಿ, ಇಲ್ಲಿ ಈಗಿರುವವರಲ್ಲಿ ಅನೇಕರು ಭಾಗವಹಿಸಿದ್ದರು, ಸ್ವತಃ ಪ್ರಧಾನ ಮಂತ್ರಿಗಳೇ ಭಾಗವಹಿಸಿದ್ದರು. ಆ ಸಭೆಯಲ್ಲಿ ಭಾಷೆಗಳ ಆಧಾರದ ಮೇಲೆ ಭಾರತೀಯ ಪ್ರಾಂತ್ಯಗಳನ್ನು ಪುನರ್ ರಚಿಸುವ ವಿಷಯವನ್ನು ಅಂಗೀಕರಿಸಲಾಯಿತು. ನಿರ್ಣಯದ ಕೊನೆಯ ಭಾಗದಲ್ಲಿ, ಬಿಹಾರದ ಆ ಭಾಗಗಳನ್ನು ಬಂಗಾಳಕ್ಕೆ ಸೇರಿಸಲು ಶೀಘ್ರ ಕ್ರಮ ತೆಗೆದುಕೊಳ್ಳುವಂತೆ ಬಿಹಾರದ ಕಾಂಗ್ರೆಸ್ ಮಂತ್ರಿ ಮಂಡಲವನ್ನು ಕೋರಿಕೊಳ್ಳಬೇಕೆಂದು ಹೇಳಲಾಗಿತ್ತು. ಅದು, 1937 ಡಿಸೆಂಬರ್ ಕೊನೆ ಕೊನೆಯಲ್ಲಿ ಭಾರತದಲ್ಲಿ ಬೇರೇ ಬೇರೇ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರದಲ್ಲಿದ್ದ ಕಾಲ.

ಈಗ, ಇಂದು ನಾನು ಈ ವಿಷಯವನ್ನು ಎತ್ತಿದ್ದೇನೆ. ಯಾವ ಕಾರಣಕ್ಕಾಗಿ ? ಅದು ನಮಗೆ ಭಾವೋದ್ರೇಕದ ವಿಷಯ ಅಲ್ಲ. ಅದು ನಮ್ಮ ಅಸ್ತಿತ್ವದ ವಿಷಯ. ಬಂಗಾಳದ ಸಾವು ಬದುಕಿನ ವಿಷಯ. ಅದು ಹಿಂದೆ ಎಷ್ಟಿತ್ತೋ, ಈಗ ಅದರ ಮೂರನೇ ಒಂದು ಭಾಗಕ್ಕೆ ಕುಗ್ಗಿದೆ. 1951ರ ಜನಗಣತಿಯನ್ನು ನೋಡಿ. ಜನಸಾಂದ್ರತೆ 1941ರಲ್ಲಿದ್ದ 755

ರಿಂದ 805ಕ್ಕೆ ಹೆಚ್ಚಿದೆ. ಈಗ, 805 ರಷ್ಟಿದೆ. ಅದು ಅಷ್ಟೇ ಇದ್ದಿದ್ದರೆ, ಆ ಮಾತು ಬೇರೆ. 90 ಲಕ್ಷ ಹಿಂದೂಗಳು ಪೂರ್ವ ಬಂಗಾಳದಲ್ಲಿ ವಾಸಿಸುತ್ತಿರುವುದು ನಿಮಗೆ ಗೊತ್ತಿದೆ. ಅವರ ಭವಿಷ್ಯವೇನು ? ಯಾರೂ ಹೇಳಲಾರರು. ಪ್ರಧಾನ ಮಂತ್ರಿಗಳು ಕೆಲವೊಮ್ಮೆ ಸ್ವತಃ ಮರುಳಾಗುವ ಹೇಳಿಕೆ ಕೊಡುತ್ತಿರುತ್ತಾರೆ. ಮೊನ್ನೆ ತಾನೆ. ಅವರು, ಇಲ್ಲಿಗೆ ಬರುತ್ತಿರುವ ಜನಗಳು ಬಿಕ್ಷುಕರೆಂದು ಹೇಳಿದರು. ಹಠಾತ್ತಾಗಿ, ಸಾವಿರಾರು ಭಿಕ್ಷುಕರನ್ನು ಪೂರ್ವ ಬಂಗಾಳದಿಂದ ಹೊರದೂಡಲಾಗುತ್ತಿದೆ. ಅವರೆಲ್ಲರೂ ಭಿಕ್ಷುಕರೇನಲ್ಲ. ಆ ರಾಜ್ಯವು ಉದ್ದೇಶಪೂರ್ವಕವಾಗಿ ಅವರನ್ನು ಹೊರದೂಡುತ್ತಿದೆ. ಅಲ್ಲಿ ವಾಸ ಮಾಡಲು ಬಿಡುತ್ತಿಲ್ಲ. ಒಂದು ವೇಳೆ ಹತ್ತು, ಹದಿನೈದು ಅಥವಾ ಮೂವತ್ತು ಲಕ್ಷ ಜನ ಅಲ್ಲಿಂದ ಬಂದರೆ, ಅವರಿಗೆ ಜಾಗ ಎಲ್ಲಿದೆ ? ಅವರನ್ನು ಪಶ್ಚಿಮ ಬಂಗಾಳ ಇಟ್ಟುಕೊಳ್ಳುತ್ತದೆಯೇ ? ಇದೇ ಈ ಸದನ ಬಗೆಹರಿಸಬೇಕಾದ ಸಮಸ್ಯೆ ಇದು. ಪಶ್ಚಿಮ ಬಂಗಾಳ ಒಂದರ ಸಮಸ್ಯೆ ಅಲ್ಲ. ಭಾರತದ ಸಮಸ್ಯೆ. ಅವರನ್ನು ಕೆಲವೊಂದು ಪ್ರಾಂತ್ಯಗಳಿಗೆ ಕಳುಹಿಸಬಹುದು ಎಂಬ ಸಲಹೆ ಬಂದಿದೆ. ಅದು ಕಾರ್ಯ ಸಾಧ್ಯ ಅಲ್ಲ, ನೀವು ಕೆಲವು ಸಾವಿರ ಜನರನ್ನು ಇತರ ಪ್ರಾಂತ್ಯಗಳಿಗೆ ಕಳುಹಿಸಬಹುದು. ಆದರೆ, ಅವರು ಬಂಗಾಳದ ಮಕ್ಕಳಾಗಿ ಬಾಳಬೇಕಲ್ಲವೇ. ನಾನು ಮುಂದಿಟ್ಟಿರುವುದು ಪ್ರಾಂತೀಯ ಬೇಡಿಕೆ ಅಲ್ಲ. ನಾನು ಪ್ರಾರಂಭದಲ್ಲೇ ಹೇಳಿದಂತೆ, ಪ್ರಾಂತ್ಯಗಳೇ ಇರುವುದಿಲ್ಲವೆನ್ನುವುದು ಸಂಸತ್ತಿನ ತೀರ್ಮಾನವಾದರೆ, ಒಳ್ಳೆಯದೇ, ಆದರೆ, ಹೆಚ್ಚು ಕಮ್ಮಿ ಭಾಷೆಗಳ ಆಧಾರದ ಮೇಲೆ ಪ್ರಾಂತ್ಯಗಲಿರಬೇಕೆಂಬುದು ನಿಮ್ಮ ಉದ್ದೇಶವಾಗಿದ್ದರೆ, ಆಗ, ತಮ್ಮದ್ದೇ ಆದ ಸಂಪ್ರದಾಯಗಳು ಹಾಗೂ ಮನೋಭಾವನೆಗಳಿಗೆ ಅನುಸಾರವಾಗಿ ಒಂದು ಪ್ರದೇಶವನ್ನು ರೂಪಿಸಿಕೊಳ್ಳಲು ಮತ್ತು ರಾಷ್ಟ್ರೀಯ ಶಕ್ತಿ ಸಾಮರ್ಥ್ಯ ಹಾಗೂ ಭಾರತದ ಐಕಮತ್ಯವನ್ನು ವೃದ್ಧಿಸಲು ಆ ನಿರ್ದಿಷ್ಟ ವರ್ಗಗಳ ಜನರಿಗೆ ನೀವು ಒಂದು ಪ್ರದೇಶವನ್ನು ಕೊಡಲೇಬೇಕಾಗುತ್ತದೆ. ಬಲಿಷ್ಠ ಕೇಂದ್ರ ಸರ್ಕಾರ ಇರಬೇಕೆಂಬುದಕ್ಕೆ ನಾನು ಬದ್ಧನಾಗಿದ್ದೇನೆ. ಪ್ರಾಂತ್ಯಗಳಿಗೆ ಅಧಿಕಾರ ವಿಕೇಂದ್ರೀಕರಣ ಮಾಡಬಹುದಾದರೂ, ನನಗಿಂತ ಮೊದಲು ಮಾತನಾಡಿದವರು ಹೇಳಿದಂತೆ, ಭಾರತವು ಸಣ್ಣ ಸಣ್ಣ ಪ್ರಾಂತ್ಯಗಳಾಗಿ ವಿಂಗಡನೆಯಾಗುವುದಕ್ಕೆ ಆಸ್ಪದವಾಗುವಂತೆ ಪ್ರಾಂತ್ಯಗಳಿಗೆ ಅಧಿಕಾರ ಕೊಡಬೇಕೆಂದು ನಾನು ಹೇಳುತ್ತಿಲ್ಲ. ಖಂಡಿತವಾಗಿಯೂ ಅದಲ್ಲ. ಯಾವುದು ನಮ್ಮ ಜನ್ಮಸಿದ್ಧ ಹಕ್ಕೋ ಅದು ನಮಗೆ ಸಿಗುತ್ತಿದೆ, ನಮ್ಮ ತಾಯ್ನಾಡಿನ ಸುಭದ್ರತೆಗೆ ನಮ್ಮ ಶಕ್ತಿ ಮೀರಿ ನಾನೇನು ಕೊಡಬಹುದೋ ಅದನ್ನು ಕೊಡುವ ಸದವಕಾಶ ನಮಗೆ ಸಿಗುತ್ತಿದೆ ಎನ್ನುವ ಸಂತೃಪ್ತಿ, ಸಮಾಧಾನ ಪ್ರತಿಯೊಂದು ವರ್ಗದ ಜನರಲ್ಲಿ ಮೂಡಲಿ.

ಹಿಂದಿ ಆಡುಭಾಷೆಯಾಗಿರಬಹುದು, ನಾವೆಲ್ಲರೂ ಅದನ್ನು ಕಲಿಯಬೇಕು. ಆದರೆ, ಕೊನೆಯಲ್ಲಿ ಮಾತನಾಡಿದ ಸನ್ಮಾನ್ಯ ಸದಸ್ಯರು, ಹಿಂದಿಯನ್ನು ಭಾರತದ ರಾಷ್ಟ್ರೀಯ ಭಾಷೆಯಾಗಿ

ಅಂಗೀಕರಿಸಿರುವುದರಿಂದ ಇಂದು ದೇಶದಲ್ಲಿ ಯಾವ ಅಡ್ಡಿ ಅಡಚಣೆಯೂ ಇಲ್ಲವೆಂದು ಹೇಳಿದ್ದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಪ್ರಾಂತೀಯ ಭಾಷೆಗಳನ್ನು ಕಡೆಗಣಿಸಿ ಹಿಂದಿ ಭಾಷೆ ಬೆಳೆಯಲಾಗದೆಂದು ರಾಜ್ಯಾಂಗವೇ ಹೇಳಿದೆ. ಈ ಭವ್ಯ ಭಾರತೀಯ ಭಾಷೆಗಳು ಭಾರತೀಯ ಸಂಸ್ಕೃತಿಗೆ, ಉತ್ಕರ್ಷಕ್ಕೆ ತಮ್ಮದೇ ಆದ ಕೊಡಗೆ ನೀಡಿವೆ. ಅವುಗಳಲ್ಲಿ ಕೆಲವು ವಿಶ್ವ ಸಂಸ್ಕೃತಿಗೆ, ನಾಗರೀಕತೆಗೆ, ಕಡಿಮೆಯೇನಲ್ಲದ ಕೊಡುಗೆ ಇತ್ತಿವೆ. ಆ ನಮ್ಮ ಪ್ರಾಂತೀಯ ಭಾಷೆಗಳು ಸ್ವತಂತ್ರ ಭಾರತದ ಮುಖ ಕಮಲದಿಂದ ಕಾಣೆಯಾಗುವ ದಿನ ಭಾರತಕ್ಕೆ ನಿಜಕ್ಕೂ ಘೋರ ದಿನ. ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಏಕೆ ಅಂಗೀಕರಿಸಲಾಯಿತೆಂಬುದನ್ನು ಯಾರೂ ಪ್ರಶ್ನಿಸುತ್ತಿಲ್ಲ. ಆದರೆ, ನೀವು ಹಿಂದಿ ಒಂದನ್ನೇ ಭಾರತದಲ್ಲಿ ಇಟ್ಟುಕೊಳ್ಳುವಂತಿಲ್ಲ ತಮ್ಮದೇ ಆದ ಭವ್ಯ ಪರಂಪರೆಗಳು ಹಾಗೂ ಸಂಸ್ಕೃತಿಗೆ ಅನುಸಾರವಾಗಿ ಏಳಿಗೆ ಹೊಂದಬೇಕಾದ ಹಲವಾರು ಘಟಕಗಳು ಮತ್ತು ಪ್ರಾಂತ್ಯಗಳು ಭಾರತದಲ್ಲಿ ಇನ್ನೂ ಇವೆ. ಈಗ ನಾವಿಲ್ಲಿ ಕೇಳುವುದೇನೆಂದರೆ, ನಾವು ಬಂಗಾಳದ ಭವಿಷ್ಯವನ್ನು ಹೇಗೆ ಬಗೆಹರಿಸಲಿದ್ದೇವೆ ? ಅಕ್ಕಪಕ್ಕದ ಪ್ರಾಂತ್ಯಗಳಲ್ಲಿ ಬಹುತೇಕ ಬಂಗಾಳಿ ಮಾತನಾಡುವ ಜನರಿರುವ ಸ್ವಲ್ಪ ಭಾಗಗಳನ್ನು ನೀವು ನಮಗೆ ಕೊಡಲೇಬೇಕು. ಅಕ್ಕಪಕ್ಕದ ಪ್ರಾಂತ್ಯಗಳನ್ನು ದುರ್ಬಲಗೊಳಿಸುವಂತಹ ಪ್ರದೇಶಗಳನ್ನು ನಮಗೆ ಕೊಡಲೇಬೇಕೆಂದು ನಾನು ಸಲಹೆ ಮಾಡುತ್ತಿಲ್ಲ. ಈ ಘಳಿಗೆಯಲ್ಲೂ ಹೇಳುತ್ತಿಲ್ಲ, ಯಾವುದು ಬಂಗಾಳಕ್ಕೆ ಸೇರಿದರೆ ಆ ಅಕ್ಕಪಕ್ಕದ ಪ್ರಾಂತ್ಯಗಳು ದುರ್ಬಲವಾಗುವುವೋ ಅಥವಾ ಅಸಮರ್ಥವಾಗುವುವೋ ಇಲ್ಲವೋ ಅಂಥ ಯಾವುದನ್ನೂ ಆ ಪ್ರಾಂತ್ಯಗಳಿಂದ ಅನ್ಯಾಯದಿಂದ ನಾನು ಕಿತ್ತುಕೊಳ್ಳ ಬಯಸಿಲ್ಲ. ನಾನು ಆ ಸಲಹೆ ಮಾಡುತ್ತಿಲ್ಲ. ಅಸ್ಸಾಂ ಮತ್ತು ಬಿಹಾರ ಎರಡರಲ್ಲೂ ಕೆಲವೊಂದು ನಿರ್ದಿಷ್ಟ ಪ್ರದೇಶಗಳಿವೆ. ಆ ಎರಡು ಪ್ರಾಂತ್ಯಗಳಿಗೆ ಬಾಧಕವಾಗದಂತೆ ಆ ಪ್ರದೇಶಗಳನ್ನು ಬಂಗಾಳಕ್ಕೆ ಸೇರಿಸಬಹುದು. ಇದನ್ನು, ಕಾಂಗ್ರೆಸ್ ಹಲವು ಬಾರಿ ಒಪ್ಪಿದೆ. ತ್ರಿಪುರ ಸಹ ನ್ಯಾಯವಾಗಿ ಬಂಗಾಳಕ್ಕೆ ಸೇರಬೇಕು.

ಕಳೆದ ಜನಗಣತಿ ವರದಿಯಲ್ಲಿನ ಲೆಕ್ಕಾಚಾರವನ್ನು ನೀವು ನೋಡಿದರೆ, ವಿಭಜನೆ ನಂತರ, ಭಾರತದ ಬಹುತೇಕ ಎಲ್ಲ ಪ್ರಾಂತ್ಯಗಳಿಗೂ ಲಾಭ ಆಗಿದೆಯೆಂಬುದು ನಿಮಗೆ ಗೊತ್ತಾಗುತ್ತದೆ. ಏಕೆಂದರೆ, ಪ್ರಾಂತ್ಯಗಳಿಗೆ ಅನೇಕ ಹೊಸ ರಾಜ್ಯ ಮುಂತಾದವನ್ನು ಸೇರಿಸಲಾಗಿದೆ. ಹಾಗಾಗಿ, ಆ ಬಹುತೇಕ ಪ್ರದೇಶಗಳಲ್ಲಿ ಜನಸಾಂದ್ರತೆ ಪ್ರಮಾಣ ಇಳಿದಿದೆ. ಅವರಿಗೆ ವಿಸ್ತಾರವಾದ ಜಾಗ ಸಿಕ್ಕಿದೆ. ಅವರಿಗೆ ಒಳ್ಳೆಯದಾಗಲಿ ಎಂದು ನಾನು ಹಾರೈಸುತ್ತೇನೆ. ಆದರೆ, ಬೇರೇ ಕಡೆ ಕೆಲವೊಂದು ಹೊಂದಾಣಿಕೆ ಆಗಬೇಕಿದೆ, ಪರಸ್ಪರ ಜಗಳದಿಂದಲ್ಲ, ಒಂದು ಕಡೆ ಕುಳಿತು ಪರಿಹಾರ ಕಂಡುಕೊಳ್ಳಬೇಕಾಗಿದೆ. ಯಾರು ಪ್ರಾರಂಭಿಸಬೇಕು? ಮೂರನೇ ಪಕ್ಷವೊಂದು ಕಾರ್ಯ ಪ್ರವೃತ್ತವಾಗಬೇಕಾಗುತ್ತದೆ. ಮೊದಲು ಏಕಾಭಿಪ್ರಾಯ ಮೂಡಲಿ, ನಂತರ ನಾವೇನು ಮಾಡಬಹುದೆಂಬುದನ್ನು ಆಲೋಚಿಸುತ್ತೇವೆಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಆ ಸಾಧ್ಯತೆ ಇಲ್ಲ. ಪ್ರಧಾನ ಮಂತ್ರಿಯವರನ್ನು ಬಿಟ್ಟರೆ ಬೇರಾರಿಂದಲೂ ಆ ಕಾರ್ಯ ಆಗದು. ಅವರೇ ಸರಿ. ಏಕೆಂದರೆ, ಎಲ್ಲರ ಮತ್ತು ಭಾರತದ ಹಿತದೃಷ್ಟಿಯಿಂದ ಅವರು ಆ ಕಾರ್ಯ ಮಾಡಬಲ್ಲರು. ವಿವಾದಗಳನ್ನು ಹುಟ್ಟು ಹಾಕುವ

ಬದಲು ಬಗೆಹರಿಸಿಕೊಳ್ಳಿ ಎಂದು ಅವರು, ಸಂಬಂಧಪಟ್ಟವರಿಗೆ ಕರೆ ಕೊಡಬೇಕು. ಅಂಕಿ ಅಂಶಗಳಿವೆ. ಪ್ರತಿಯೊಬ್ಬರೂ ತಮ್ಮ ತಮ್ಮ ವಾದವನ್ನು ಮಂಡಿಸಲಿ. ರಾಷ್ಟ್ರದ ಹಿತದೃಷ್ಟಿಯಿಂದ ಈ ಕಾರ್ಯ ಆಗುತ್ತಿದೆಯೆಂದು ಎಲ್ಲರೂ ಸಮಾಧಾನಪಟ್ಟುಕೊಳ್ಳಲಿ, ಆ ಮೂಲಕ ಪ್ರತಿಯೊಂದು ಘಟಕವು ಬಲಿಷ್ಠವಾಗಲಿ.

ಇಂದು, ಪಶ್ಚಿಮ ಬಂಗಾಳ ಊನಗೊಂಡಿದ್ದರೂ, ಬಂಗಾಳದ ಮೇಲ್ಭಾಗವನ್ನು ಕೆಳ ಭಾಗದಿಂದ ಪ್ರತ್ಯೇಕಿಸಲಾಗುತ್ತಿದೆ. ರ್‍ಯಾಡ್ ಕ್ಲಿಫ್ ತೀರ್ಪನ್ನು ಅಭಿನಂದಿಸಬೇಕು. ಆದರೆ, ಈಗಲೂ ಪಶ್ಚಿಮ ಬಂಗಾಳದ ಕೊಡುಗೆ ಏನು ? ವರಮಾನ ತೆರಿಗೆ ಆದಾಯದ ಬಗ್ಗೆ ಹೇಳುವುದಾದರೆ, ಈಗಲೂ, ಭಾರತದ ಒಟ್ಟು ವರಮಾನ ತೆರಿಗೆ ಆದಾಯದ ಸುಮಾರು ಶೇ. 35ರಷ್ಟು ಪಶ್ಚಿಮ ಬಂಗಾಳದಿಂದಲೇ ಬರುತ್ತಿದೆ. ಅದಕ್ಕೆ ಪ್ರತಿಯಾಗಿ ಪಶ್ಚಿಮ ಬಂಗಾಳಕ್ಕೆ ಸುಮಾರು ಶೇ. 12 1/2 ಯಷ್ಟು ಪಾಲು ಬರುತ್ತಿದೆ. ಸೀಮಾಸುಂಕದ ಆದಾಯವನ್ನು ನೋಡೋಣ. ಭಾರತದ ಒಟ್ಟು ಸೀಮಾಸುಂಕದ ಆದಾಯದ ಸುಮಾರು ಶೇ. 40 ರಷ್ಟು ಊನಗೊಂಡ ಈ ಪಶ್ಚಿಮ ಬಂಗಾಳ ಪ್ರಾಂತ್ಯದಿಂದಲೇ ಬರುತ್ತಿದೆ. ಭಾರೀ ಕೈಗಾರಿಕೆಗಳನ್ನು ನೋಡೋಣ. ಈಗಲೂ ಭಾರತದ ಸುಮಾರು ಶೇ. 70 ರಷ್ಟು ಭಾರಿ ಕೈಗಾರಿಕೆಗಳು, ಊನಗೊಂಡ ಪಶ್ಚಿಮ ಬಂಗಾಳದಲ್ಲಿ ಕಿಕ್ಕಿರಿದ ಜನಸಾಂದ್ರತೆಯುಳ್ಳ ಸಣ್ಣ ಪ್ರದೇಶಗಳಲ್ಲಿವೆ. ಭಾರತದ ಸಮುದ್ರ ಆಧಾರಿತ ವ್ಯಾಪಾರ, ವಾಣಿಜ್ಯವನ್ನು ನೋಡೋಣ. ಈಗಲೂ, ಭಾರತದ ಶೇ. 40 ರಷ್ಟು ಸಮುದ್ರ ಆಧಾರಿತ ವ್ಯಾಪಾರ ವಾಣಿಜ್ಯ ಊನಗೊಂಡ ಪಶ್ಚಿಮ ಬಂಗಾಳದ ಹಿಡಿತದಲ್ಲೇ ಇದೆ. ಸೆಣಬು ಕೈಗಾರಿಕೆಗಳು, ಇತರೆ ಕೈಗಾರಿಕೆಗಳು, ನಿಮಗೆ ಡಾಲರುಗಳನ್ನು ಗಳಿಸಿಕೊಡುವ ಕೈಗಾರಿಕೆಗಳು, ಕಲ್ಲಿದ್ದಲು ಕೈಗಾರಿಕೆಗಳು ಎಲ್ಲವು ಸಣ್ಣ ಪ್ರದೇಶಗಳಲ್ಲೇ ಇವೆ. ಇಂದು, ಆ ಪ್ರಾಂತ್ಯ ಜನರಿಂದ ತುಂಬಿ ತುಳುಕಿದ್ದು ಹೇಗೆ ? ಕಳೆದ ಜನಗಣತಿ ವರದಿಯನ್ನು ನೋಡೋಣ. ಪಶ್ಚಿಮ ಬಂಗಾಳದ ಜನರಲ್ಲಿ ಸುಮಾರು ಶೇ. 20 ಜನ ಭಾರತದ ಬೇರೆ ಬೇರೆ ಭಾಗಗಳಿಂದ ಬಂದವರು. ಆ ದೃಷ್ಟಿಯಿಂದ ನೋಡಿದರೆ ಅದು ಕಾಸ್ಮೊಪಾಲಿಟನ್ ಪ್ರಾಂತ್ಯ. ನಾನು ಹುಟ್ಟಿದ ಆ ಪ್ರಾಂತ್ಯ ಅವರುಗಳನ್ನು ಆದರದಿಂದ ನೋಡಿಕೊಳ್ಳುತ್ತಿರುವುದಕ್ಕೆ ನಾನು ಹೆಮ್ಮೆಪಡುತ್ತೇನೆ. ಇನ್ನು ಶಿಕ್ಷಣ ಕ್ಷೇತ್ರ. ನನ್ನ ಪ್ರಾಂತ್ಯದಲ್ಲಿ ಯಾರೇ ನೆಲೆಸಿರಲಿ, ಅವರು ಅವರವರ ಮಾತೃಭಾಷೆಯಲ್ಲೇ ಶಿಕ್ಷಣ ಪಡೆಯುವ ಸಂಪೂರ್ಣ ಸ್ವಾತಂತ್ರ್ಯ ಹಾಗೂ ಅವಕಾಶವನ್ನು ಕೊಟ್ಟಿರುವ ಪ್ರಾಂತ್ಯಗಳಲ್ಲಿ ನನ್ನ ಪ್ರಾಂತ್ಯವೇ ಮೊದಲನೆಯದು ಗುಜರಾತಿ ಶಾಲೆಗಳಿವೆ, ಖಾಲ್ಸಾ ಶಾಲೆಗಳಿವೆ, ಹಿಂದಿ ಶಾಲೆಗಳಿವೆ. ನನ್ನ ಪ್ರಾಂತ್ಯದಲ್ಲಿ ನೆಲೆಸಿರುವ ಬಂಗಾಳೇತರ ಜನರಿಗೆ ನಾವು ಬಂಗಾಳಿ ಭಾಷೆಯನ್ನು ಹೇರಿಲ್ಲ. ಇವ ಬಂಗಾಳಿ, ಅವ ಬಂಗಾಳಿ ಅಲ್ಲ ಎನ್ನುವ ಭಾವನೆ ಹುಟ್ಟುವುದು ನನಗೆ ಬೇಕಿಲ್ಲ. ಕೆಲವೊಂದು ಪ್ರದೇಶಗಳಲ್ಲಿ ಗಾಳಿ ಸುದ್ದಿ ಇರಬಹುದು. ಆದರೆ, ಹತಾಶೆ ಉಂಟಾಗಿರುವುದು ಮತ್ತು ಅಂಥದ್ದನ್ನು ನಿಭಾಯಿಸಲು ಆಡಳಿತ ಅಸಮರ್ಥವಾಗಿರುವುದು ಆಗಾಗ ಅಂಥ ಗಾಳಿ ಸುದ್ದಿಗೆ ಕಾರಣ ಇರಬಹುದು. ಪಶ್ಚಿಮ ಬಂಗಾಳ ಉಳಿಯುವುದೇ

ಅಥವಾ ಇಲ್ಲವೇ ? ನಾನು ಸದನಕ್ಕೆ ಈ ಪ್ರಮುಖ ಪ್ರಶ್ನೆಯನ್ನು ಹಾಕುತ್ತಿದ್ದೇನೆ. ಪಕ್ಷದ ವ್ಯಕ್ತಿಯಾಗಲ್ಲ, ಯಾರಿಂದಲೋ ಯಾವುದೋ ಭಾಗವನ್ನು ಕಿತ್ತುಕೊಳ್ಳುವ ಉದ್ದೇಶಕ್ಕಾಗಲ್ಲ. ಬದುಕಲು ಜಾಗ ಕೊಡಿ. ನಮ್ಮ ಮನೋಧರ್ಮಕ್ಕೆ ಅನುಗುಣವಾಗಿ ಮತ್ತು ನಮಗೆ ಸರಿಕಂಡ ರೀತಿಯಲ್ಲಿ ನಾವು ಅಭಿವೃದ್ಧಿ ಹೊಂದುವುದಕ್ಕೆ ಹಾಗೂ ಭಾರತದ ಸರ್ವಾಂಗೀಣ ಪ್ರಗತಿಯಲ್ಲಿ ನಾವೂ ಪಾಲ್ಗೊಳ್ಳಲು ಕೆಲವೊಂದು ಪ್ರದೇಶ ಕೊಡಿ.

ಇನ್ನು ಪೂರ್ವ ಬಂಗಾಳದ ವಿಷಯ, ವಿಭಜನೆಗೆ ಯಾವುದು ಆಧಾರವಾಗಿತ್ತೋ ಅದು ಈಗಿಲ್ಲವೆಂದು ನಾನು ಪ್ರಧಾನ ಮಂತ್ರಿಗಳಿಗೆ ಪದೇ ಪದೇ ಹೇಳಿದ್ದೇನೆ. ಎರಡು ಪ್ರಂತ್ಯಗಳಲ್ಲಿ ಮುಸ್ಲಿಮರು, ಹಿಂದೂಗಳು ಇದ್ದರೆ ಎನ್ನುವುದೇ ವಿಭಜನೆಗೆ ಆಧಾರವಾಗಿತ್ತು. ಭಾರತ ಅವಿವೇಕದಿಂದ ವರ್ತಿಸಿತು. ಮೇಲಿಂದ ಮೇಲೆ ಒಪ್ಪಂದಗಳಾದವು. ಅವೆಲ್ಲಾ ಏಕ ಪಕ್ಷೀಯ ಒನ್-ವೇ ಟ್ರಾಫಿಕ್ ಅಷ್ಟೇ. ಪೂರ್ವ ಬಂಗಾಳವು ಭಾರತಕ್ಕೆ, ಅಷ್ಟೇ ಭಾಗವನ್ನಾದರೂ ಕೊಡಬೇಕೆಂದು ನೀವು ಕೇಳಬಹುದಿತ್ತು. ಭಾರತಕ್ಕೆ ಪೂರ್ವ ಬಂಗಾಳದ ಮೂರನೇ ಒಂದು ಭಾಗವನ್ನು ಕೊಡಬೇಕೆಂದು ನೀವು ಒತ್ತಾಯಿಸಬಹುದಿತ್ತು. ನಮ್ಮದು ಪ್ರೀತಿ ಹಾಗೂ ಶಾಂತಿಯ ಧೋರಣೆ, ನೀತಿಯೆಂದು ತೋರುತ್ತದೆ. ಪಾಕಿಸ್ತಾನದ ಬಗ್ಗೆ ನಿಮ್ಮದು ಅದೇ ಧೋರಣೆ ಆಗಿರಲಿ. ಆದರೆ ಕೊನೇ ಪಕ್ಷ, ನಮ್ಮ ದೇಶಕ್ಕೆ ಸಂಬಂಧಪಟ್ಟಂತಾದರೂ ನೀವು ಸಮಸ್ಯೆಯನ್ನು ಬಗೆಹರಿಸಿ. ನಾನು ಪ್ರಧಾನ ಮಂತ್ರಿಗಳಿಗೆ ನನ್ನ ಮನವಿ ಯೇನೆಂದರೆ. ಈ ಸಮಸ್ಯೆಯನ್ನು ಅವರು ತಳ್ಳಿ ಹಾಕಬಾರದು. ಜಗಳ ಮಾಡುವ ಉದ್ದೇಶದಿಂದ ವಿವಾದಗಳನ್ನೆತ್ತುವ ಬಯಕೆ ನಮಗಿಲ್ಲ. ಭಾಷೆ ದೃಷ್ಟಿಯಿಂದ ನೋಡಿದರೆ, ಆಡಳಿತಾತ್ಮಕ ದೃಷ್ಟಿಯಿಂದ ನೋಡಿದರೆ ಪಶ್ಚಿಮ ಬಂಗಾಳಕ್ಕೆ ಇನ್ನೂ ಸ್ವಲ್ಪ ಭಾಗಗಳು ಸೇರಬೇಕೆಂಬ ಬಿಗಿ ನಿಲುವನ್ನು ನಾವು ತಾಳಬಹುದು. ಈ ಪ್ರಾಂತ್ಯದ ಮೇಲೆ ಬೀಳುತ್ತಿರುವ ಭಾರೀ ಒತ್ತಡವನ್ನು ಆ ಮೂಲಕ ಕೆಲವೊಂದು ರೀತಿಯಿಂದ ತಡೆಯಬಹುದು. ಭಾರತದ ಏಳಿಗೆ ದೃಷ್ಟಿಯಿಂದಲೂ ಅದು ಸಮರ್ಥನೀಯವೇ.

ಸನ್ಮಾನ್ಯ ಪುನರ್ ವಸತಿ ಮಂತ್ರಿಗಳು ಸ್ವಲ್ಪ ಹೊತ್ತಿನ ಹಿಂದೆ ಬಂಗಾಳಿಗಳನ್ನು ಭಾರತದ ಬೇರೆ ಭಾಗಗಳಿಗೆ ಕಳುಹಿಸಬಹುದೆಂದು ಹೇಳಿದರು. ಆದರೆ, ಇದು ಅವರನ್ನು ಹೊರಗಡೆಗೆ ಕಳುಹಿಸುವ ವಿಷಯ ಅಲ್ಲ. ಇದು, ಅವರ ಕಾನೂನುಬದ್ಧ ಹಕ್ಕಿನ ವಿಷಯ. ಇದು, ಅವರ ಪೌರತ್ವದ ಹಕ್ಕಿನ ವಿಷಯ, ಪ್ರಾತಿನಿಧ್ಯದ ಹಕ್ಕಿನ ವಿಷಯ. ಇಂದು, ನೀವು, 20 ಲಕ್ಷ ಅಥವಾ 30 ಲಕ್ಷ ಜನರನ್ನು ಭಾರತದ ಬೇರೆ ಭಾಗಗಳಿಗೆ ಕಳುಹಿಸುತ್ತಿರೆಂದುಕೊಳ್ಳೋಣ. ಬೇರೆ ಭಾಷೆಯನ್ನುಳ್ಳ, ಜೀವನದ ರೀತಿಯೇ ಬೇರೆ ಇರುವ, ಭಾರತದ ಯಾವ ಭಾಗಗಳ ಜನರು ಬಂಗಾಳಿಗಳನ್ನು ಒಳ ಸೇರಿಸುತ್ತಾರೋ, ನಾಕಾಣೆ, ಭಾರತದ ಸಂಸತ್ತಿನಲ್ಲಿ ಅವರ ಪ್ರಾತಿನಿಧ್ಯದ ವಿಷಯ ಒಳಗೊಂಡಿದೆ. ಸೇವೆ, ವ್ಯಾಪಾರ, ವಾಣಿಜ್ಯ ಮುಂತಾದ ವಿಷಯಗಳಿವೆ. ಇವೆಲ್ಲ ವಿಷಯಗಳನ್ನು ನೀವು ಹಗುರವಾಗಿ ತೆಗೆದುಕೊಳ್ಳುವಂತಿಲ್ಲ. ಪರಿಸ್ಥಿತಿ ಹದಗೆಡುವುದಕ್ಕೂ ಮುಂಚೆ, ಈ ಸಮಸ್ಯೆಯನ್ನು - ಬಂಗಾಳದ್ದು ಒಂದೇ ಅಲ್ಲ. ಬೇರೆಯವರ

ಸಮಸ್ಯೆಗಳನ್ನು ಸಹ - ಬಗೆಹರಿಸಬೇಕೆಂದು ನಾನು ಈ ಸದನವನ್ನು ಪ್ರಾರ್ಥಿಸುತ್ತೇನೆ. ಕಣ್ಣುಮುಚ್ಚಿ ಭ್ರಾಂತಿ ನೀತಿಯನ್ನು ಅನುಸರಿಸುವುದರಿಂದ ಮತ್ತು ಎಲ್ಲವೂ ಸರಿಯಾಗಿ ನಡೆದುಕೊಂಡುಹೋಗುತ್ತಿದೆ ಎಂದು ಭಾವಿಸುವುದರಿಂದ ಏನೂ ಪ್ರಯೋಜನೆ ವಿಲ್ಲ. ಯಾವುದೇ ಪರಿಗಣನೆ ಮೇಲೆ ನಾನು ಭಾರತದ ಒಳ - ಗಡಿಗಳನ್ನು ಪುನರ್ ವಿಂಗಡನೆ ಮಾಡುವುದಿಲ್ಲ, ಇದೇ ಸರ್ಕಾರದ ನೀತಿ ಎಂದು ಹೇಳುವುದಾದರೆ, ಹೇಳಿ, ಹಾಗೆಂದು ಘೋಷಿಸಿ, ಪರಿಣಾಮಗಳನ್ನು ಎದುರಿಸಿ. ಏನಾಗುತ್ತಿದೆ ಎನ್ನುವುದು ಜನರಿಗೆ ಗೊತ್ತಾಗುತ್ತದೆ. ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಸರ್ಕಾರವೇ ತೊಂದರೆಗಳನ್ನು ಮೇಲೆ ಎಳೆದು ಕೊಂಡಂತಾಗುತ್ತದೆ. ಕಳೆದ 35 ವರ್ಷಗಳಿಂದ ಕಾಂಗ್ರೆಸ್ ಏನು ಹೇಳುತ್ತಾ ಬಂದಿದೆಯೋ ಅದಕ್ಕನುಸಾರವಾಗಿ ಪುನರ್ ವಿಂಗಡನೆ ಮಾಡುತ್ತೇವೆಂದು ನೀವು ಹೇಳುವುದಾದರೆ, ಸಂಬಂಧ ಪಟ್ಟ ಪಕ್ಷಗಳೇ ವಿಷಯವನ್ನು ಇತ್ಯರ್ಥ ಮಾಡಲು ಬಿಡಬೇಡಿ. ವಿಷಯವನ್ನು ನೀವೇ ಕೈಗೆತ್ತಿಕೊಳ್ಳಿ. ಪಂಡಿತ್ ಜವಹರಲಾಲ್ ನೆಹರೂರವರಿಗೆ ಇದೇ ನನ್ನ ಪ್ರಾರ್ಥನೆ. ಈ ವಿಷಯವನ್ನು ಅವರೇ ಕೈಗೆತ್ತಿಕೊಂಡು ಆಯೋಗವನ್ನು ನೇಮಿಸಲಿ, ಸಲಹೆಗಾರರನ್ನು ನೇಮಿಸಲಿ, ಅಥವಾ ಸಂಬಂಧಪಟ್ಟ ಪಕ್ಷಗಳ ಧುರೀಣರನ್ನು ಔಪಚಾರಿಕ ಸಮ್ಮೇಳನಕ್ಕೆ ಕರೆಯಲಿ. ಎಲ್ಲರಿಗೂ ಪರಸ್ಪರ ಒಪ್ಪಿಗೆಯಾಗುವಂಥ ಒಂದು ತೀರ್ಮಾನಕ್ಕೆ ಬರುವುದಕ್ಕೆ ಆಸ್ಪದವಾಗುವಂಥ ರೀತಿಯಲ್ಲಿ ವಿಷಯಗಳ ಹೊಂದಾಣಿಕೆಗೆ ಪ್ರಯತ್ನ ಮಾಡಲಿ. ಯಾವ ತೀರ್ಮಾನಕ್ಕೆ ಬಂದರೂ, ಅದನ್ನು ಸಂಪೂರ್ಣವಾಗಿ ಎಲ್ಲರೂ ಒಪ್ಪಿಕೊಳ್ಳಲಾರರು ಎಂಬುದು ನನಗೆ ಗೊತ್ತಿದೆ. ಯಾವುದೇ ತೀರ್ಮಾನವನ್ನು ವಿರೋಧಿಸುವ ಜನ ವರ್ಗ ಇದ್ದೇ ಇರುತ್ತದೆ. ಆ ಸಂಗತಿಯೂ ನನಗೆ ಗೊತ್ತು. ನ್ಯಾಯೋಚಿತವಾಗಿ ಈ ಮೂಲಭೂತ ಸಮಸ್ಯೆಯನ್ನು ನಾವು ಒಮ್ಮೆ ಬಗೆಹರಿಸಿದೆವೆಂದರೆ ಹಾಗೂ ಅದನ್ನು ಬಹು ಜನರು ಒಪ್ಪಿದರೆ. ಅಂಥ ವಿರೋಧವನ್ನು ನಾವು ಎದುರಿಸಬಹುದು. ಇದು, ಕೆಲವೊಂದು ಅಂಶಗಳನ್ನು ಕಾಂಗ್ರೆಸ್ ನವರು ಕೆಲವೊಂದು ಅಂಶಗಳನ್ನು ಕಾಂಗ್ರೆಸ್ಸೇತರರು ಚರ್ಚಿಸುವ ವಿಷಯ ಅಲ್ಲ. ಇದು ಮೊದಲ ಆದ್ಯತೆಯ ರಾಷ್ಟ್ರೀಯ ವಿಷಯ. ರಾಷ್ಟ್ರೀಯ ಆಧಾರದ ಮೇಲೆ ಇತ್ಯರ್ಥ ಮಾಡಬೇಕು. ಪಕ್ಷದ ಆಧಾರದ ಮೇಲಲ್ಲ, ಇದು ಆಳುವ ಪಕ್ಷ ಅಥವಾ ವಿರೋಧಪಕ್ಷ ಅಲ್ಲೊಂದು ಇಲ್ಲೊಂದು ಅಂಶ ಹೇಳುವ ವಿಷಯ ಅಲ್ಲ. ಈ ವಿಷಯವನ್ನು ನಾವು ತುಂಬಾ ಎಚ್ಚರಿಕೆಯಿಂದ, ಜಾಗರೂಕತೆಯಿಂದ ಪ್ರಾಂತ್ಯಗಳ ಅಗತ್ಯತೆಗಳು ಹಾಗೂ ಇಡೀ ಭಾರತದ ಭದ್ರತೆ ದೃಷ್ಟಿಯಿಂದ ಪರಿಶೀಲಿಸಬೇಕಾಗಿದೆ. ಜವಾಬ್ದಾರಿಯುತ ಪ್ರತಿನಿಧಿಗಳಾದ ನಮಗೆ ಈ ಸಾಧನೆ ಮಾಡುವ ಸಾಮರ್ಥ್ಯ ಇದೆ. ನಮ್ಮ ತಾಯ್ನಾಡಿದ ಲಕ್ಷಾಂತರ ಜನರ ಶಾಂತಿ ಹಾಗೂ ಏಳಿಗೆಯಲ್ಲಿ ಅಡ್ಡಗಾಲು ಹಾಕಿರುವ ಈ ಸಮಸ್ಯೆಯನ್ನು ನಾವು ಬಗೆಹರಿಸುತ್ತೇವೆಂಬ ದೃಢ ನಂಬಿಕೆ ನನಗಿದೆ.

## * ಕಾಶ್ಮೀರ ವಿವಾದ

ಕಾಶ್ಮೀರ ವಿಷಯ ತುಂಬಾ ಜಟಿಲವಾದದ್ದೆಂದು ಮತ್ತು ನಮ್ಮ ನಮ್ಮ ಅಭಿಪ್ರಾಯಗಳೇನೇ ಇರಲಿ, ನಮ್ಮಲ್ಲಿ ಪ್ರತಿಯೊಬ್ಬರೂ ಈ ಸಮಸ್ಯೆಯನ್ನು ರಚನಾತ್ಮಕ ನೆಲಗಟ್ಟಿನಿಂದ ನೋಡಬೇಕೆಂದು ಪ್ರಧಾನ ಮಂತ್ರಿಗಳು ಹೇಳಿರುವುದನ್ನು ನಾನು ಒಪ್ಪುತ್ತೇನೆ. ಪ್ರಧಾನ ಮಂತ್ರಿಗಳ ನಿಲುವಳಿ ಸೂಚನೆ ಮೇಲೆ ಈ ಸದನದ ಮುಂದೆ ಮಂಡಿಸಿದ ಸಲಹೆಯನ್ನು ಒಪ್ಪಿಕೊಂಡಿದ್ದಾದರೆ. ನಾವು ಒಂದು ಹೊಸ ಸ್ವರ್ಗವನ್ನೇ, ಭೂಲೋಕವನ್ನೇ ಸೃಷ್ಟಿಸಿದಂತಾಗುತ್ತದೆ ಎನ್ನುವ ಅಭಿಪ್ರಾಯದಲ್ಲಿ ನಾನು ಭಾಗಿಯಾಗಲಾರೆ. ಈ ವಿಷಯವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದು, ಕಾಶ್ಮೀರಕ್ಕೆ ಸಂಬಂಧಪಟ್ಟಂತೆ ಉದ್ಭವಿಸಿರುವ ಅಂತರ ರಾಷ್ಟ್ರೀಯ ಬಿಕ್ಕಟ್ಟು. ಇನ್ನೊಂದು, ಕಾಶ್ಮೀರದ ಭಾವೀ ರಾಜ್ಯಾಂಗಕ್ಕೆ ಸಂಬಂಧಿಸಿದಂತೆ ನಮ್ಮ ಮತ್ತು ಕಾಶ್ಮೀರದ ನಡುವೆ ಆಗಬೇಕಾಗಿರುವ ಇತ್ಯರ್ಥ.

ಕಾಶ್ಮೀರ ವಿವಾದವನ್ನು ವಿಶ್ವಸಂಸ್ಥೆಗೆ ಉಲ್ಲೇಖಿಸಬೇಕೆಂಬ ತೀರ್ಮಾನ ತೆಗೆದುಕೊಂಡಾಗ, ಅದಕ್ಕೆ ನಾನೂ ಭಾಗಿಯಾಗಿದ್ದೆ ಎಂದು ಹೇಳಲಾಗಿದೆ. ಆ ಸಂಗತಿ ನಿಜ. ಅಂಥ ತೀರ್ಮಾನಕ್ಕೆ ಕಾರಣವಾದ ಅಸಾಧಾರಣ ಸನ್ನಿವೇಶಗಳನ್ನು ಹಾಗೂ ಆ ಸಂದರ್ಭದಲ್ಲಿ ಭಾರತ ಸರ್ಕಾರಕ್ಕಿದ್ದ ಭಾರೀ ನಿರೀಕ್ಷೆಗಳನ್ನು ಬಹಿರಂಗಪಡಿಸುವ ಹಕ್ಕು ನನಗಿಲ್ಲ. ಬಹಿರಂಗಪಡಿಸಲು ಇಚ್ಛಿಸುವುದೂ ಇಲ್ಲ. ಆದರೆ, ನಾವು ನೀರೀಕ್ಷಿಸಿದ್ದ ಒಳ್ಳೆಯ ಪ್ರತಿಕ್ರಿಯೆ ಸಿಗಲಿಲ್ಲ ಎಂಬುದು ಸಾಮಾನ್ಯವಾಗಿ ಗೊತ್ತಿರುವ ಸಂಗತಿ. ವಿಲೀನದ ವಿಷಯದ ಬಗ್ಗೆ ನಾವೇನೂ ವಿಶ್ವ ಸಂಸ್ಥೆಗೆ ಹೋಗಲಿಲ್ಲ. ಏಕೆಂದರೆ, ವಿಲೀನ, ಒಂದು ಮುಗಿದು ಹೋದ ಸತ್ಯಾಂಶ. ಪಾಕಿಸ್ತಾನ ಸರ್ಕಾರದ ಪ್ರಚೋದನೆಯಿಂದ ಅಲ್ಲಿ ಕೆಲವರು ದುರಾಕ್ರಮಣ ಮಾಡುತ್ತಿರುವುದಕ್ಕೆ ಸಂಬಂಧಪಟ್ಟಂತೆ ವಿಶ್ವಸಂಸ್ಥೆಯಿಂದ ಶೀಘ್ರ ತೀರ್ಮಾನ ಪಡೆಯುವ ಉದ್ದೇಶಕ್ಕಾಗಿ ನಾವು ಹೋಗಿದ್ದೆವು ದಾಳಿಕೋರರು, ಯಾರೋ ಇನ್ನೊಬ್ಬರ ಪ್ರಚೋದನೆಯಿಂದ ಅಲ್ಲಿ ದಾಳಿ ಮಾಡಿದ್ದರು. ಕಾಶ್ಮೀರ ವಿಷಯವನ್ನು ಯಾವ ರೀತಿಯಿಂದಲಾದರೂ ನಾವು ವಿಶ್ವಸಂಸ್ಥೆಯಿಂದ ಹಿಂತೆಗೆದುಕೊಳ್ಳಲೇಬೇಕು. ವಿಶ್ವ ಸಂಸ್ಥೆಗೆ ಹೋದ ಅವಿವೇಕ ನಮಗೆ ಗೊತ್ತಾಗಿದೆ ಎಂದು ನಾವು ಅವರಿಗೆ ಗೌರವಪೂರ್ವವಾಗಿಯೇ ಹೇಳೋಣ. ನಮ್ಮದೇ ಆದ ಪ್ರಯತ್ನಗಳ ಮೂಲಕ ಈ ವಿಷಯವನ್ನು ಇತ್ಯರ್ಥ ಮಾಡಿಕೊಳ್ಳೋಣ. ವಿಶ್ವಸಂಸ್ಥೆಯಿಂದಲೇ ಭಾರತ ಹೊರಬರಬೇಕೆಂದು ನಾನು ಸಲಹೆ ಮಾಡುತ್ತಿಲ್ಲ. ಕಾಶ್ಮೀರದ ಸುಮಾರು ಮೂರನೇ ಒಂದರಷ್ಟು ಭಾಗ ವೈರಿಯ ಹಿಡಿತದಲ್ಲಿದೆ ಎನ್ನುವ ವಿವಾದ ಇದ್ದೇ ಇದೆ. ಹೌದೆಂದು, ಪ್ರಧಾನ ಮಂತ್ರಿಗಳೂ ಈ ದಿನ ಹೇಳಿದ್ದಾರೆ. ಅದು ರಾಷ್ಟ್ರೀಯ ಅವಮಾನದ ಸಂಗತಿ. ಕಾಶ್ಮೀರ ಭಾರತದ ಭಾಗ ಎಂದು ನಾವು ಹೇಳುತ್ತೇವೆ. ಅದು ನಿಜವೂ ಹೌದು. ಆದರೆ, ಭಾರತದ

---

ಲೋಕಸಭಾ ಚರ್ಚೆಗಳು, 7 ಆಗಸ್ಟ್ 195 ಕಾಲಂಗಳು 5885-5899

ಒಂದು ಭಾಗ ಇಂದು ವೈರಿಯ ವಶದಲ್ಲಿದೆ, ನಾವು ಅಸಹಾಯಕರಾಗಿದ್ದೇವೆ. ನಾವು ಶಾಂತಿಪ್ರಿಯರು, ನಿಜ. ಆದರೆ, ಎಷ್ಟರ ಮಟ್ಟಿಗೆ ಶಾಂತಿಪ್ರಿಯರು ? ನಮ್ಮದೇ ರಾಜ್ಯದ ಒಂದು ಭಾಗ ವೈರಿಯ ವಶದಲ್ಲಿ ಬಿಡುವಷ್ಟರ ಮಟ್ಟಿಗೆ ನಾವು ಶಾಂತಿಪ್ರಿಯರೇ ? ಅಷ್ಟರ ಹೊರತು ಹೆಚ್ಚಿಗೆ ಇಲ್ಲ ಎಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಕಾಶ್ಮೀರದ ಯಾವುದೇ ಭಾಗಕ್ಕೆ ಬಾಳಿಕೋರರು ನುಸುಳಿದರೆ, ಪಾಕಿಸ್ತಾನ ಮತ್ತು ಕಾಶ್ಮೀರ ನಡುವೆ ಅಲ್ಲ. ಭಾರತ ಮತ್ತು ಪಾಕಿಸ್ತಾನದ ನಡುವೆ ಯುದ್ಧದ ಬೆದರಿಕೆ ಉಂಟಾಗುವುದೆಂದು ಪ್ರಧಾನಮಂತ್ರಿಗಳು ಹೇಳುತ್ತಾರೆ.

ನಾವು ಆ ಭಾಗವನ್ನು ಹಿಂದಕ್ಕೆ ಪಡೆಯುವ ಸಾಧ್ಯತೆ ಏನಾದರೂ ಇದೆಯೇ ? ವಿಶ್ವ ಸಂಸ್ಥೆಯ ಪ್ರಯತ್ನಗಳಿಂದ ಅದು ನಮಗೆ ಸಿಕ್ಕುವುದಿಲ್ಲ. ಪಾಕಿಸ್ತಾನದೊಂದಿಗೆ ಶಾಂತಿ, ಸಂಧಾನದ ಮಾರ್ಗಗಳಿಂದ ನಮಗೆ ಅದು ಸಿಕ್ಕುವುದಿಲ್ಲ. ಎಂದರೆ, ನಾವು ಬಲಪ್ರಯೋಗ ಮಾಡದಿದ್ದರೆ, ನಾವು ಕಳೆದುಕೊಳ್ಳುತ್ತೇವೆ. ಪ್ರಧಾನ ಮಂತ್ರಿಗಳು ಅದಕ್ಕೆ ಒಪ್ಪುತ್ತಿಲ್ಲ. ಸತ್ಯಾಂಶಗಳನ್ನು ತಿಳಿದುಕೊಳ್ಳೋಣ - ನಾವು ಅದನ್ನು ಕಳೆದುಕೊಳ್ಳಲು ಸಿದ್ಧರಿದ್ದೇವೆಯೇ ?

ನಾವೇ ವಿಧಿಸಿಕೊಂಡ ವಾಗ್ದಾನಗಳಿಗೆ ನಾವು ಬದ್ಧರಾಗಿದ್ದೇವೆಂಬ ಕೆಲವೊಂದು ವಿಧಿ ರಾಜ್ಯಾಂಗದಲ್ಲಿದೆಯೆಂದು ಹೇಳಲಾಗಿದೆ. ವಾಗ್ದಾನಗಳು ? ನಾವು ಬೇಕಾದಷ್ಟು ವಾಗ್ದಾನ ಕೊಟ್ಟುಬಿಟ್ಟುದ್ದೇವೆ. ಹೈದರಾಬಾದ್‌ಗೆ ವಾಗ್ದಾನ ಕೊಟ್ಟಿದ್ದೇವೆ. ಹೈದರಾಬಾದ್‌ಗೆ, ರಾಜ್ಯಾಂಗ ಸಭೆ ರಚಿಸುತ್ತೇವೆಂದು ನಾವು ವಾಗ್ದಾನ ನೀಡಿಲ್ಲವೇ ? ಹೈದರಾಬಾದ್ ಭವಿಷ್ಯವನ್ನು ಹೈದರಾಬಾದ್ ಶಾಸನ ಸಭೆಯೇ ನಿರ್ಧರಿಸುತ್ತದೆಂದು ನಾವು ಇನ್ನೊಂದು ವಾಗ್ದಾನ ನೀಡಿದ್ದೆವು. ಆದರೆ, ಹೈದರಾಬಾದ್, ಈಗಾಗಲೇ ಭಾರತ ಒಕ್ಕೂಟದ ಒಂದು ಭಾಗ ಅಲ್ಲವೇನು ? ಇಂದು, ಬೇರೆ ಬೇರೆ ವಿಧಾನದಿಂದ ವಿಲೀನಗೊಳ್ಳುತ್ತಿರುವ ರಾಜ ಮಹಾರಾಜರುಗಳಿಗೆ ನಾವು ವಾಗ್ದಾನ ನೀಡಿದ್ದೇವೆ. ಸ್ವಾತಂತ್ರ್ಯ ಬಂದಾಗ ಮೇಲೆ ನಾವು ಆ ವಾಗ್ದಾನ ನೀಡಿದ್ದೆವು. ಕಾಶ್ಮೀರ ಭಾರತದಲ್ಲಿ ವಿಲೀನವಾಗದಿದ್ದರೂ ಪರವಾಗಿಲ್ಲ. ಆದರೆ, ಕಾಶ್ಮೀರದ ಮೇಲೆ ದಾಳಿಕೋರರು ದಾಳಿ ಮಾಡಿದರೆ, ಮಾನವೀಯತೆ ದೃಷ್ಟಿಯಿಂದ ಭಾರತದ ಸೇನೆ ಕಾಶ್ಮೀರಕ್ಕೆ ಹೋಗುತ್ತದೆ ಮತ್ತು ಅಲ್ಲಿ ಯಾತನೆಗೊಳಗಾದವರನ್ನು, ಹಿಂಸೆಗೊಳಗಾದವರನ್ನು ರಕ್ಷಿಸುತ್ತದೆಂದು ಪ್ರಧಾನ ಮಂತ್ರಿಗಳು ಹಿಂದೊಂದು ದಿನ ಹೇಳಿದ್ದರು. ನಾನು ಹೆಮ್ಮೆ ಪಟ್ಟಿದ್ದೆ. ಆದರೆ, ನಾನು, ಆ ನಮ್ಮ 90 ಲಕ್ಷ ಸಹೋದರ, ಸಹೋದರಿಯರ - ಸ್ವಾತಂತ್ರ್ಯ ಲಭಿಸಲು ಕೊಂಚ ಮಟ್ಟಿಗೆ ಅವರೂ ತ್ಯಾಗ ಮಾಡಿದ್ದಾರೆ - ಪ್ರಾಣ ಹಾಗೂ ಮಾನ ಉಳಿಸುವ ಉದ್ದೇಶಕ್ಕಾಗಿ ಅದೇ ರೀತಿಯ ಹೇಳಿಕೆ ಇತ್ತರೆ ಅಥವಾ ಬಗೆಯ ಸಲಹೆ ಮಾಡಿದರೆ, ಇವನು ಕೋಮುವಾದಿ, ಇವನು ಪ್ರಗತಿ ವಿರೋಧಿ, ರಣ - ದಾಹದವನ್ನು ಎಂಬ ಹಣೆಪಟ್ಟಿ ಬಂದು ಬಿಡುತ್ತದೆ.

ವಾಗ್ದಾನಗಳು? ವಾಗ್ದಾನಗಳನ್ನು ನೀಡಲಾಗಿದೆ, ನಿಜ. ವಾಗ್ದಾನಗಳನ್ನು ಗೌರವಿಸಬೇಕು. ವಾಗ್ದಾನಗಳ ಪಾಲನೆಯಾಗಬೇಕು ಎಂಬ ತವಕ ಸಹ ನನಗಿದೆ. ವಾಗ್ದಾನಗಳ ಸ್ವರೂಪ ಎಂಥದ್ದು ? ಕಾಶ್ಮೀರಕ್ಕೆ ನಾವು ಯಾವುದೇ ಹೊಸ ವಾಗ್ದಾನ ಕೊಟ್ಟಿರಲಿಲ್ಲ. ಆ ಬಗ್ಗೆ ನಾವು ಸ್ಪಷ್ಟವಾಗಿ ತಿಳಿದುಕೊಳ್ಳೋಣ.

ಬ್ರಿಟಿಷರು ಭಾರತದಿಂದ ದೂರ ಸರಿದಾಗ ನಾವು ಒಪ್ಪಿಕೊಂಡಿದ್ದ ವ್ಯವಸ್ಥೆ ಯಾವುದು? ಭಾರತೀಯನ ಭಾರತ, ಭಾರತ ಮತ್ತು ಪಾಕಿಸ್ತಾನವಾಗಿ ಹೋಳಾಯಿತು. ರಾಜ ಸಂಸ್ಥಾನಗಳೂ ಇದ್ದವು. ಆ ಐದು ನೂರು ರಾಜರುಗಳಲ್ಲಿ ಪ್ರತಿಯೊಬ್ಬರಿಗೂ ತಾತ್ವಿಕ ಸ್ವಾತಂತ್ರ್ಯ ಸಿಕ್ಕಿತ್ತು. ಮೂರು ವಿಷಯಗಳಿಗೆ ಸಂಬಂಧಪಟ್ಟಂತೆ ಮಾತ್ರವೇ ಅವರುಗಳು ಭಾರತದೊಂದಿಗೆ ವಿಲೀನ ಆಗಬೇಕಿತ್ತು. ಉಳಿದವನ್ನು ಒಪ್ಪಿಸುವುದು ಅಥವಾ ಬಿಡುವುದು ಅವರಿಗೇ ಸೇರಿತ್ತು. ಬ್ರಿಟಿಷ್ ಸರ್ಕಾರದ ಈ ಸಲಹೆಯನ್ನು ನಾವು ಒಪ್ಪಿಕೊಂಡಿದ್ದೆವು. 498 ರಾಜ್ಯ ಸಂಸ್ಥಾನಗಳು ಆ ಮೂರು ವಿಷಯಗಳಿಗೆ ಸಂಬಂಧಪಟ್ಟಂತೆ ಮಾತ್ರವೇ 1947ರ ಆಗಸ್ಟ್ 14ರಂದು ಭಾರತದೊಂದಿಗೆ ವಿಲೀನಗೊಂಡವು. ಆದರು, ಅದು ವಿಲೀನ, ಸಂಪೂರ್ಣ ವಿಲೀನ, ಆ ತರುವಾಯ, ಎಲ್ಲ ಸಂಸ್ಥಾನಗಳು, ಎಲ್ಲ ವಿಷಯಗಳನ್ನು ಒಪ್ಪಿಸಿದವು. ಕ್ರಮೇಣ, ಅವೆಲ್ಲವೂ ಭಾರತದ ರಾಜ್ಯಾಂಗದಲ್ಲಿ ಸೇರಿಹೋದವು. ಕಾಶ್ಮೀರಕ್ಕೆ ಸಂಬಂಧಪಟ್ಟಂತೆ ಏನೋ ಒಂದು ವಾಗ್ದಾನ ನೀಡಬೇಕೆಂದು ಅಕ್ಷರಶಃ ನಾವೇನು ಆಲೋಚನೆ ಮಾಡುತ್ತಿದ್ದೇವೆಯೋ ಒಂದು ವೇಳೆ, ಅದನ್ನೇ, ಈ ಸಂಸ್ಥಾನಗಳೂ ಕೇಳಿದ್ದರೆ, ನಾವು ಒಪ್ಪುತಿದ್ದೇವೇ ? ನಾವು ಒಪ್ಪುತ್ತಿರಲಿಲ್ಲ. ಏಕೆಂದರೆ, ಅದು, ಭಾರತವನ್ನು ನಿರ್ನಾಮ ಮಾಡುತ್ತಿತ್ತು. ಆ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಬೇರೆಯದೇ ಆದ ದೃಷ್ಟಿಕೋನ ಇತ್ತು. ಭಾರತದ ಹಿತದೃಷ್ಟಿಯಿಂದ, ಅವರುಗಳ ಹಿತದೃಷ್ಟಿಯಿಂದ, ಪರಸ್ಪರ ಏಳಿಗೆಯ ಹಿತದೃಷ್ಟಿಯಿಂದ, ನಾವು ಸಿದ್ಧಪಡಿಸುತ್ತಿರುವ ರಾಜ್ಯಾಂಗವನ್ನು ಅವರುಗಳು ಒಪ್ಪಿಕೊಳ್ಳುವುದೇ ಕ್ಷೇಮವೆಂಬ ಭಾವನೆಯನ್ನು ಅವರುಗಳಲ್ಲಿ ಮೂಡಿಸಲಾಗಿತ್ತು. ರಾಷ್ಟ್ರೀಯ ಮುಖ್ಯವಾಹಿನಿಗೆ ಅವರುಗಳನ್ನು ತರಲು ರಾಜ್ಯಾಂಗದಲ್ಲಿ ವ್ಯಾಪಕ ಅವಕಾಶ ಕಲ್ಪಿಸಲಾಗಿತ್ತು. ಬಲಾತ್ಕಾರ ಇರಲಿಲ್ಲ. ಒತ್ತಾಯ ಇರಲಿಲ್ಲ. ಈ ರಾಜ್ಯಾಂಗದಿಂದ ಅವರುಗಳು ಏನನ್ನು ಬಯಸಿದ್ದರೋ ಅದನ್ನು ಅವರು ಪಡೆಯುತ್ತಾರೆಂಬ ನಂಬಿಕೆಯನ್ನು ಅವರಲ್ಲಿ ಮೂಡಿಸಲಾಗಿತ್ತು.

ಈ ರಾಜ್ಯಾಂಗಕ್ಕೆ ಶೇಕ್ ಅಬ್ದುಲ್ಲಾರವರು ಭಾಗಿಯಾಗಿರಲಿಲ್ಲವೇ ? ಎಂದು ನಾನು ಕೇಳುತ್ತಿದ್ದೇನೆ. ಅವರೂ, ರಾಜ್ಯಾಂಗ ಸಭೆಯ ಸದಸ್ಯರಾಗಿದ್ದರು. ಆದರೆ, ವಿಶೇಷ ಸ್ಥಾನಮಾನ ಕೇಳುತ್ತಿದ್ದಾರೆ. 497 ಸಂಸ್ಥಾನಗಳೂ ಸೇರಿದಂತೆ, ಭಾರತದ ಮಿಕ್ಕಭಾಗಕ್ಕೆ ಸಂಬಂಧಪಟ್ಟಂತೆ ಈ ರಾಜ್ಯಾಂಗವನ್ನು ಅವರು ಒಪ್ಪಿರಲಿಲ್ಲವೇ ? ಅದು, ಎಲ್ಲರಿಗೂ ಒಪ್ಪಿಗೆಯಾಗಿರುವಾಗ, ಅದು, ಕಾಶ್ಮೀರ ಅವರಿಗೆ ಏಕೆ ಒಳ್ಳೆಯದಾಗಿ ಕಾಣುತ್ತಿಲ್ಲ. ರಾಜ್ಯಾಂಗದ ಆ ವಿಧಿಗೆ ನಮ್ಮ

ಗಮನ ಸೆಳೆಯಲಾಗಿದೆ. ಬಿಹಾರದ ಸದಸ್ಯರಿಗೆ, ಒತ್ತಾಯ ಹೇರಲಾಗುತ್ತಿದೆ. ಜಮ್ಮು ಮತ್ತು ಕಾಶ್ಮೀರದ ತಲೆಗೆ ಪಿಸ್ತೂಲು ಇಟ್ಟು ನಮ್ಮ ಷರತ್ತುಗಳನ್ನು ಒಪ್ಪಿಕೊಳ್ಳಲೇಬೇಕೆಂದು ನಾವು ಹೇಳುತ್ತಿದ್ದೇವೆಂದು ಹೇಳಿದ್ದಾರೆ. ನಾನು ಆ ರೀತಿ ಏನನ್ನೂ ಹೇಳಿಲ್ಲ. ನಾವು ಹಾಗೆ ಹೇಳಲಿಕ್ಕೆ ಆಗುತ್ತದೆಯೇ? ನಾವು ರಾಜ್ಯಾಂಗದಲ್ಲಿ ಯಾವ ವಿಧಿ ಸೇರಿಸಿದ್ದೇವೆ? 373ನೇ ವಿಧಿ. ಅದನ್ನೂ ಓದಿ, ಮತ್ತು ಶ್ರೀ ಗೋಪಿವಲ್ಲಭ ಅಯ್ಯಂಗಾರರು ಆ ವಿಶೇಷ ವಿಧಿಯನ್ನು ಅಂಗೀಕಾರಕ್ಕಾಗಿ ಮಂಡಿಸಿದಾಗ ಮಾಡಿದ ಬಾಷಣವನ್ನು ಓದಿ. ಆಗಿನ ವಸ್ತು ಸ್ಥಿತಿ ಏನಿತ್ತು? ಎಲ್ಲ ರಾಜ್ಯಗಳೂ ಮುಂದೆ ಬಂದಿದ್ದವು. ವಿಶೇಷ ಕಾರಣಗಳಿಂದಾಗಿ, ಕಾಶ್ಮೀರ ಬಂದಿರಲಿಲ್ಲ. ಅವು ಯಾವುವೆಂದರೆ, ಮೊದಲನೆಯದು ವಿಷಯ ಭದ್ರತಾ ಮಂಡಲಿಯ ಮುಂದಿತ್ತು. ಎರಡನೆಯದು ಕದನ ಆಗುತ್ತಿತ್ತು. ಮೂರನೆಯದು, ಕಾಶ್ಮೀರದ ಒಂದು ಭಾಗ, ವೈರಿಯ ವಶದಲ್ಲಿತ್ತು. ಕೊನೆಯದು, ರಾಜ್ಯಾಂಗ ಸಭೆಯನ್ನು ರಚಿಸಲಾಗುವುದು ಮತ್ತು, ಜನಮತಗಣನೆ ಮೂಲಕ ಕಾಶ್ಮೀರದ ಜನರ ಇಚ್ಛೆಯನ್ನು ತಿಳಿದುಕೊಳ್ಳಲಾಗುವುದೆಂಬ ಆಶ್ವಾಶನೆ ನೀಡಲಾಗಿತ್ತು. ಆ ವಾಸ್ತವಾಂಶಗಳು ಇನ್ನೂ ಇತ್ಯರ್ಥವಾಗಿರಲಿಲ್ಲ, ಆದ್ದರಿಂದಲೇ, ಶಾಶ್ವತ ತೀರ್ಮಾನ ಆಗಿರಲಿಲ್ಲ. ಅದೊಂದು ತತ್ಕಾಲೀನ ವಿಧಿ.

ಬೇರೇ ರಾಜ್ಯಗಳಂತೆಯೇ ಜಮ್ಮು ಮತ್ತು ಕಾಶ್ಮೀರವೂ ಭಾರತದಲ್ಲಿ ವಿಲೀನ ಗೊಳ್ಳುತ್ತದೆ ಮತ್ತು ರಾಜ್ಯಂಗದ ವಿಧಿಗಳನ್ನು ಒಪ್ಪಿಕೊಳ್ಳುತ್ತದೆಂಬ ನಂಬಿಕೆ ತನಗೆ ಮತ್ತು ಕಾಶ್ಮೀರ ಸರ್ಕಾರಕ್ಕೆ ಇದೆಯೆಂದು ಅವರು ಅತ್ಯಂತ ಸ್ಪಷ್ಟವಾಗಿ ಹೇಳಿದ್ದಾರೆ. ಅದು ನಮ್ಮ ಕಡೆಯಿಂದ ಒತ್ತಾಯದ ವಿಷಯ ಅಲ್ಲ. ಜಮ್ಮು ಮತ್ತು ಕಾಶ್ಮೀರದ ರಾಜ್ಯಾಂಗ ಸಭೆ ಏನೇನು ಕೇಳುತ್ತದೋ ಅದನ್ನೆಲ್ಲಾ ಭಾರತ ಕೊಡುತ್ತದೆ ಎಂದು ಭಾರತದ ರಾಜ್ಯಾಂಗ ಹೇಳಿಲ್ಲ. ವಿಧಿಯಲ್ಲಿಹಾಗೆಂದು ಹೇಳಿಲ್ಲ, ವಿಧಿಯಲ್ಲಿ ಹೇಳಿರುವುದೇನೆಂದರೆ - ಒಪ್ಪಿಗೆ, ಸಹಮತ.

ಇಂದು ಕೆಲವೊಂದು ಸಲಹೆಗಳನ್ನು ಮಾಡಲಾಗಿದೆ. ನಮ್ಮಲ್ಲಿ ಕೆಲವರು ಅವುಗಳನ್ನು ಇಷ್ಟಪಡುವುದಿಲ್ಲ. ನಾವೇನು ಮಾಡಬೇಕು ? ನಾವು ಮಾತನಾಡಿದರೆ, ಪ್ರಗತಿ ವಿರೋಧಿಗಳಾಗಿ ಬಿಡುತ್ತೇವೆ. ಕೋಮುವಾದಿಗಳಾಗಿ ಬಿಡುತ್ತೇವೆ, ಶತ್ರುಗಳಾಗಿ ಬಿಡುತ್ತೇವೆ. ನಾವು ಸುಮ್ಮನಿದ್ದರೆ, ಒಂದು ವರ್ಷವಾದ ಮೇಲೆ ಏನಾದರೂ ಅನಾಹುತಗಳು ತಲೆದೋರಿದರೆ, ಆಗ ನೀವು ಭಾಗಿಯಾಗಿದ್ದಿರಿ, ಸುಮ್ಮನಿದ್ದಿರಿ, ಏನನ್ನು ಹೇಳದೆ ಏಕೆ ಬಾಯಿ ಮುಚ್ಚಿಕೊಂಡಿದ್ದಿರಿ ಎನ್ನುವ ಆರೋಪ ಬರುತ್ತದೆ.

ಕಾಶ್ಮೀರದ ವಿಷಯದಲ್ಲಿ ಒಂದು ಗೌರವಯುತವಾದ, ಶಾಂತಿಯುತವಾದ ಇತ್ಯರ್ಥ ಆಗಬೇಕೆಂಬ ಕಾತುರ ಯಾರ್‍ಯಾರಿಗೆ ಎಷ್ಟೆಷ್ಟಿದೆಯೋ ಅದಕ್ಕಿಂತಲೂ ಹೆಚ್ಚಿನ ಕಾತುರ ನನಗಿದೆ. ಕಾಶ್ಮೀರದ ನೆಲದಲ್ಲಿ ಒಂದು ಭಾರೀ ಪ್ರಯೋಗ ಆಗುತ್ತಿರುವುದು ನನಗೆ ಗೊತ್ತಿದೆ. ವಿಭಜನೆ ಯಿಂದ ಯಾರಿಗೂ ಪ್ರಯೋಜನ ಆಗಿಲ್ಲ. ನೋವು, ನಷ್ಟದಿಂದ ವ್ಯಥೆಪಡುತ್ತಿರುವ

ಪ್ರದೇಶದಿಂದ ನಾನು ಬಂದಿದ್ದೇನೆ. ಅಲ್ಲಿ ಅವಿನ್ನೂ ನಿಂತಿಲ್ಲ. ವಿಭಜನೆಯಿಂದಾದ ಘೋರ ಪರಿಣಾಮಗಳನ್ನು, ಆ ಸಮಸ್ಯೆಯನ್ನು ಸಕುಂಚಿತ, ಕೋಮುವಾದದ ಮತ್ತು ಮತೀಯ ದೃಷ್ಟಿಯಿಂದ ನೋಡಿದ ಪರಿಣಾಮವಾಗಿ ಆಗುತ್ತಿರುವ ಅಲ್ಲೋಲಕಲ್ಲೋಲಗಳನ್ನು ನಾವು ಪ್ರತಿ ದಿನವೂ, ಪ್ರತಿ ಗಂಟೆಯೂ ಅನುಭವಿಸುತ್ತಿದ್ದೇವೆ. ಶೇಕ್ ಅಬ್ದುಲ್ಲಾರ ನೀತಿ ವಿರುದ್ಧ, ನಾವು ಈವರೆಗೂ ಒಂದೇ ಒಂದು ಸೊಲ್ಲೆತ್ತಿಲ್ಲ, ಏಕೆ ? ನಾನು ಮಾತನಾಡಬಹುದಿತ್ತು. ಎರಡೂವರೆ ವರ್ಷಗಳ ಹಿಂದೆ ಈ ಸರ್ಕಾರದಿಂದ ನಾನು ಹೊರಬಂದೆ. ಸಾರ್ವಜನಿಕವಾಗಿ ನಾನು ಮಾತನಾಡಿದಾಗಲೆಲ್ಲ. ನಾನು ಕೆಲವೊಮ್ಮೆ ಕಾಶ್ಮೀರ ಸರ್ಕಾರದ ನೀತಿಯನ್ನು ಬೆಂಬಲಿಸಿದ್ದೇನೆ. ಅದೊಂದು ಮಹಾ ಪ್ರಯೋಗವೆಂದು ನಾನು ಹೇಳಿದ್ದೇನೆ. ಪ್ರಯೋಗ ನಡೆಯುತ್ತಿದೆ. ನಾವು ಸುಮ್ಮನಿರಬೇಕು ಮತ್ತು ಪ್ರಯೋಗ ಯಶಸ್ವಿಯಾಗುವಂತೆ ಮಾಡಬೇಕು. ಭಾರತ ಕೇವಲ ಮಿಥ್ಯೆಯಲ್ಲ, ನಿತ್ಯಸತ್ಯ, ಈ ದೇಶದಲ್ಲಿ ಹಿಂದೂಗಳು, ಮುಸ್ಲಿಮರು, ಕ್ರಿಶ್ಚಿಯನ್ನರು ಇದ್ದಾರೆ ಮತ್ತು ಪ್ರತಿಯೊಬ್ಬರೂ ಯಾವ ಭಯವೂ ಇಲ್ಲದೆ ಸಮಾನ ಹಕ್ಕುಗಳಿಂದ ಇಲ್ಲಿ ಬಾಳಿ ಬದುಕಬಲ್ಲರು ಎಂಬುದನ್ನು ನಾವು ತೋರಿಸಬೇಕಾಗಿದೆ. ಅದೇ ನಾವು ರಚಿಸಿರುವ ರಾಜ್ಯಾಂಗ. ಅದನ್ನು ಕಟ್ಟುನಿಟ್ಟಾಗಿ, ನಿಷ್ಠುರವಾಗಿ ಕಾರ್ಯರೂಪಕ್ಕೆ ತರಲು ನಾವು ಉದ್ದೇಶಿಸಿದ್ದೇವೆ. ಅಲೊಂದು, ಇಲ್ಲೊಂದು ಪ್ರತಿಕೂಲ ಬೇಡಿಕೆಗಳಿರಬಹುದು. ಗಮನ ಕೊಡಬಾರದು. ನೀತಿಯ ಕೆಲವು ವಿಷಯಗಳ ಮೇಲೆ ದಾಳಿ ಮಾಡುವುದರ ಹಿನ್ನೆಲೆಯಲ್ಲಿ ಕೆಲವೊಂದು ಸಂಕುಚಿತ, ಮತೀಯ ಹಾಗೂ ಕೋಮು ಪ್ರೇರಣೆ ಇದ್ದೇ ಇರುತ್ತದೆ. ಇತಿಹಾಸ ಎಲ್ಲಿ ಮರುಕಳಿಸುವುದೋ ಎಂಬ ಭಯವಾಗುತ್ತಿದೆ. ನೀವೇನು ಮಾಡಹೊರಟಿದ್ದೀರೋ ಅದು ಭಾರತ ಸೀಳು, ಸೀಳಾಗಿ ಒಡೆದುಹೋಗುವುದಕ್ಕೆ, ಬಲಿಷ್ಠ ಅಖಂಡ ಭಾರತವಾಗುವುದು ಯಾರಿಗೆ ಇಷ್ಟವಿಲ್ಲವೋ ಅಂಥವರ ಕೈಗಳು ಬಲವಾಗುವುದಕ್ಕೆ, ಭಾರತ ಒಂದು ದೇಶವೇ ಅಲ್ಲ, ಅದೊಂದು, ಬೇರೆ ಬೇರೆ ಜನಾಂಗಗಳ ಕೂಡವೆಂದು ಭಾವಿಸುವವರ ಕೈಮೇಲಾಗುವುದಕ್ಕೆ ಆಸ್ಪದ ಕೊಡುತ್ತದೆಯೋ ಎಂಬ ಭಯವಾಗುತ್ತಿದೆ. ಅದೇ ಅಪಾಯ.

ಇನ್ನು, ಶೇಕ್ ಅಬ್ದುಲ್ಲಾರವರು ಏನನ್ನು ಕೇಳಿದ್ದಾರೆ ? ರಾಜ್ಯಾಂಗದಲ್ಲಿ ಕೆಲವೊಂದು ಬದಲಾವಣೆ ಮಾಡಬೇಕೆಂದು ಕೇಳಿದ್ದಾರೆ. ಅವರು ಕೇಳಿರುವ ಒಂದೊಂದನ್ನೂ ಶಾಂತವಾಗಿ ಎಚ್ಚರಿಕೆಯಿಂದ, ತಲೆ ಬಿಸಿ ಮಾಡಿಕೊಳ್ಳದೆ, ಆವೇಶಕ್ಕೊಳಗಾಗದೆ ಪರಿಶೀಲಿಸೋಣ ಹಾಗೂ ಅವರನ್ನು ಮತ್ತು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳೋಣ. ಈ ವಿಷಯಗಳಿಗೆ ನಾವು ಅವಕಾಶ ಕೊಟ್ಟರೆ, ನಾವು ಭಾರತಕ್ಕೆ ನೋವುಂಟು ಮಾಡಿದಂತಾಗುತ್ತದೆಯೇ ? ಕಾಶ್ಮೀರವನ್ನು ಬಲಪಡಿಸಿದಂತಾಗುತ್ತದೆಯೇ ? ಇದೇ ನನ್ನ ದೃಷ್ಟಿಕೋನ. ನಾನು ಯಾವುದನ್ನೂ ಸಾರಾಸಾರ ವಿಚಾರ ಮಾಡದೆ ಏನನ್ನಾದರು ಹೇಳಿದರೆ ರಾಜ್ಯಾಂಗವನ್ನು ಉಲ್ಲಂಘಿಸಿದಂತಾಗುತ್ತದೆ.

ನಾನು ಹಾಗೆ ಮಾಡಹೋಗುವುದಿಲ್ಲ. ಪ್ರಧಾನ ಮಂತ್ರಿಗಳು ವಿರೋಧ ಪಕ್ಷದಲ್ಲಿರುವ ನಮ್ಮಲ್ಲಿ ಕೆಲವರನ್ನು, ಶೇಕ್ ಅಬ್ದುಲ್ಲಾರವರು ಇಲ್ಲಿದ್ದಾಗ, ಕಳುಹಿಸಿದ್ದರೆ ಒಳ್ಳೆಯದಿತ್ತು. ಅವರ ನಿರ್ಧಾರಗಳನ್ನು ನಮ್ಮೊಂದಿಗೆ ಹೇಳಬಹುದಿತ್ತು. ಸಾರ್ವಜನಿಕವಾಗಿ ಚರ್ಚೆಯಾಗುವುದು ನನಗೆ ಇಷ್ಟವಾಗುವುದಿಲ್ಲ. ಏಕೆಂದರೆ ಯಾವ ಪ್ರತಿಕ್ರಿಯೆಗಳು ಉಂಟಾಗುತ್ತವೆ ಎಂಬುದು ನನಗೆ ಗೊತ್ತು. ಕೆಲವರಿಗೆ ಅವು ಹಿಡಿಸುವುದಿಲ್ಲ. ನಮ್ಮ ಸಲಹೆಗಳನ್ನು ಆತ ಒಪ್ಪಿಕೊಳ್ಳದೇ ಇದ್ದರೂ, ಆತನನ್ನು ನಾನು ಹಾಗೂ ಈ ವಿಷಯದಲ್ಲಿ ಪ್ರಧಾನ ಮಂತ್ರಿಗಳ ನಿಲುವನ್ನು ಒಪ್ಪಿಕೊಳ್ಳದವರೂ ಸಹ ಭೇಟಿಯಾಗ ಬಯಸಿದ್ದೆವು. ಒಂದು ಖಾಸಗಿ ಸಭೆಯಲ್ಲಿ ಆತನನ್ನು ನಾನು ಭೇಟಿಯಾಗಿದ್ದೆ. ನಾವು ಮುಕ್ತವಾಗಿ ಚರ್ಚೆ ನಡೆಸಿದೆವು. ಆದರೆ ಶೇಕ್ ಅಬ್ದುಲ್ಲಾ ಹಾಗೂ ಇತರರನ್ನು ಸ್ನೇಹದಿಂದ ಭೇಟಿಯಾಗಿ ನಮ್ಮ ದೃಷ್ಟಿಕೋನವನ್ನು ವಿವರಿಸಬಯಸಿದ್ದೆವು. ಏಕಾಭಿಪ್ರಾಯಕ್ಕೆ ಎಂದರೆ ಭಾರತವೂ ತನ್ನ ಏಕತೆಯನ್ನು ಉಳಿಸಿಕೊಳ್ಳುವುದಕ್ಕೆ ಹಾಗೂ ಕಾಶ್ಮೀರವೂ ತನ್ನ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಂಡು ಭಾರತದಲ್ಲಿ ವಿಲೀನವಾಗುವುದಕ್ಕೆ ಆಸ್ಪದ ಕೊಡುವ ಏಕಾಭಿಪ್ರಾಯಕ್ಕೆ ಬರಬೇಕೆಂದುಕೊಂಡಿದ್ದೆವು.

ಯಾವಾಗಿನಿಂದ ತೊಂದರೆಗಳು ಶುರು ಆದವು? ಆ ಬಗ್ಗೆ ಪಕ್ಷಪಾತವಿಲ್ಲದೆ ನೋಡೋಣ. ಕೆಲವು ಕಾಲದ ಹಿಂದೆ, ಶೇಕ್ ಅಬ್ದುಲ್ಲಾರು ಪ್ಯಾರಿಸ್ಸಿನಿಂದ ವಾಪಸು ಬಂದಾದ ಮೇಲೆ ನಮ್ಮನ್ನು ಗಲಿಬಿಲಿಗೊಳಿಸುವಂಥ ಹೇಳಿಕೆಗಳನ್ನು ಕೊಡಲು ಪ್ರಾರಂಭಿಸಿದರು. ಆಗಲೂ, ನಾವು ಏನನ್ನೂ ಮಾತನಾಡುವ ಗೋಜಿಗೆ ಹೋಗಲಿಲ್ಲ. ಆದರೆ, ಅವರು ವಿದೇಶದಲ್ಲಿದ್ದಾಗ ಇತ್ತ ಒಂದು ಸಂದರ್ಶದಲ್ಲಿ ಸ್ವತಂತ್ರ ಕಾಶ್ಮೀರದ ತನ್ನ ಕಲ್ಪನೆಯ ಬಗ್ಗೆ ಮೊದಲ ಬಾರಿಗೆ ಹೇಳಿಕೆ ಇತ್ತರು. ನಂತರ ಇಲ್ಲಿಗೆ ವಾಪಸು ಬಂದ ಮೇಲೆ ಅದನ್ನೇ ಒಮ್ಮೆ ಪುನರುಚ್ಚರಿಸಿದರು, ಇನ್ನೊಮ್ಮೆ ಆ ಹೇಳಿಕೆಯನ್ನು ವಾಪಸ್ಸು ತೆಗೆದುಕೊಂಡು ಸ್ಪಷ್ಟೀಕರಣ ನೀಡಿದರು, ಅದಾದ ಮೇಲೆ, ಕಳೆದ ಕೆಲವು ತಿಂಗಳಲ್ಲಿ ಅವರು ಮಾಡಿದ ಭಾಷಣಗಳು ಪುನಃ ಮನಕುಲಕುವಂಥವುಗಳಾಗಿದ್ದವು. ಭಾರತದಿಂದ ಹೊರಗಿದ್ದರೇನೇ ತನಗೆ ಕ್ಷೇಮ ಎನ್ನುವುದು ಅವರ ಭಾವನೆಯಾಗಿದ್ದ ಪಕ್ಷದಲ್ಲಿ, ಅವರು ಹಾಗೆಂದು ಹೇಳಲಿ, ಬೇಡ ಎಂದವರ್ಯಾರು ? ನಾವೂ ಮರುಗುತ್ತೇವೆ. ಅದು ಅನಿವಾರ್ಯವಾಗಬಹುದು. ಆದರೆ, ಅವರು ಬದಲಾವಣೆಗಳನ್ನು ಪ್ರಾಮಾಣಿಕವಾಗಿ ಕೋರುತ್ತಿದ್ದಾರೆಂದರೆ, ಅದೇ ನನ್ನ ನಂಬಿಕೆ ಮತ್ತು ಹಾರೈಕೆ, ಆ ಬದಲಾವಣೆಗಳನ್ನು ತಾನೇಕೆ ಬಯಸಿದ್ದೇನೆಂಬುದನ್ನು ಅವರು ವಿವರಿಸಲೇ ಬೇಕಾಗುತ್ತದೆ.

............ಸುಮಾರು ಮೂರು ಅಥವಾ ನಾಲ್ಕು ತಿಂಗಳ ಹಿಂದೆ ಕಾಶ್ಮೀರದ ರಾಜ್ಯಾಂಗ ಸಭೆಯಲ್ಲಿ ಶೇಕ್ ಅಬ್ದುಲ್ಲಾರು ಆಡಿದ ಮಾತುಗಳನ್ನು ಅವರು ಹಿಂತೆಗೆದುಕೊಂಡಿಲ್ಲ. ಆದರೆ, ಆ ಮಾತುಗಳು, ಪಕ್ಷನಿಷ್ಠೆ ಏನೇ ಇರಲಿ, ಎಲ್ಲ ಭಾರತೀಯರ ಮನಸ್ಸಿನಲ್ಲಿ ಸಾಕಷ್ಟು ಅನುಮಾನ ಹುಟ್ಟಿಸುತ್ತವೆ. ಆ ಮಾತುಗಳನ್ನು ಪ್ರಧಾನ ಮಂತ್ರಿಗಳು ಗಮನಿಸಿದ್ದಾರೆಯೇ ಇಲ್ಲವೇ ಎಂಬುದು ನನಗೆ ಗೊತ್ತಿಲ್ಲಃ

"ನಮ್ಮದು ಸಂಪೂರ್ಣ ಸಾರ್ವಭೌಮ ರಾಜ್ಯ. ನಮ್ಮ ಪ್ರಗತಿ ಚಕ್ರದಲ್ಲಿ ಯಾವುದೇ ದೇಶ ಕಂಬಿ ತೂರಿಸುವಂತಿಲ್ಲ. ಭಾರತದ ಸಂಸತ್ತಿಗಾಗಲೀ ಅಥವಾ ರಾಜ್ಯದ ಹೊರಗಿನ ಯಾವುದೇ ಸಂಸತ್ತಿಗಾಗಲೇ ನಮ್ಮ ರಾಜ್ಯದ ಮೇಲೆ ಯಾವುದೇ ಅಧಿಕಾರ ವ್ಯಾಪ್ತಿ ಇಲ್ಲ".

ಅದೊಂದು ಅಪಾಯ ಸೂಚಕ ಹೇಳಿಕೆ. ಪ್ರಧಾನ ಮಂತ್ರಿಗಳಿಗೆ ಮತ್ತು ಶೇಕ್ ಅಬ್ದುಲ್ಲಾರಿಗೆ ನಾನು ಒಂದು ಸಲಹೆ ಕೊಡುತ್ತೇನೆ. ಅಂತರಿಕ ಕ್ರಮವಾಗಿ ಅಂಥ ವ್ಯವಸ್ಥೆಗೆ ನಾನು ನನ್ನ ಸಂಪೂರ್ಣ ಹೃತ್ಪೂರ್ವಕ ಬೆಂಬಲ ಕೊಡುತ್ತೇನೆ ಯಾವುದೂ ಅಂತಿಮ ಅಲ್ಲವೆಂದು ಪ್ರಧಾನ ಮಂತ್ರಿಗಳು ಇಂದು ಹೇಳಿದ್ದಾರೆ. ಅದೇ ಅಂತಿಮವಾಗುವಂತಿಲ್ಲ. ಏಕೆಂದರೆ ವಿಷಯಗಳನ್ನು ವಿವರವಾಗಿ ಚರ್ಚಿಸಬೇಕಾಗುತ್ತದೆ. ಆದರೂ, ನಾನು ನನ್ನ ಬೆಂಬಲ ಕೊಡಲು ಸಿದ್ಧನಿದ್ದೇನೆ. ಎರಡು ಷರತ್ತುಗಳನ್ನು ಪಾಲಿಸಲಿ.

ಈ ಸಂಸತ್ತಿನ ಪರಮಾಧಿಕಾರವನ್ನು ನಾನು ಒಪ್ಪಿದ್ದೇನೆಂದು ಶೇಕ್ ಅಬ್ದುಲ್ಲಾರು ಘೋಷಿಸಲಿ. ಭಾರತದಲ್ಲಿ ಎರಡು ಸಾರ್ವಭೌಮ ಸಂಸತ್ತುಗಳು ಇರುವಂತಿಲ್ಲ. ಕಾಶ್ಮೀರವು ಭಾರತದ ಭಾಗವಾಗಿರಬೇಕೆಂದು ನೀವು ಹೇಳುತ್ತಿದ್ದೀರಿ, ಕಾಶ್ಮೀರಕ್ಕೆ ಬೇರೆ ಸಾರ್ವಭೌಮ ಸಂಸತ್ತು ಇರಬೇಕೆಂದು ಶೇಕ್ ಅಬ್ದುಲ್ಲಾ ಹೇಳುತ್ತಿದ್ದಾರೆ. ಅದನ್ನು ವಿರೋಧಿಸುತ್ತಿರುವ ನಾವು ಕೆಲವರೇ ಈ ಸಂಸತ್ತಲ್ಲ. ಈ ಸಂಸತ್ತಿನಲ್ಲಿ ಯಾವುದೇ ಸಣ್ಣಪುಟ್ಟ ಪರಿಗಣನೆಗಳ ಪ್ರಭಾವಕ್ಕೆ ಒಳಗಾಗದ ಬಹು ಜನರಿದ್ದಾರೆ. ಸ್ವತಂತ್ರ ಭಾರತದ ಈ ಸಂಸತ್ತಿನ ಪರಮಾಧಿಕಾರವನ್ನು ಒಪ್ಪಲು ಅವರು ಏಕೆ ಹೆದರಬೇಕು ?

ಎರಡನೆಯದಾಗಿ, ಅದು, ರಾಷ್ಟ್ರಪತಿಯವರ ಆದೇಶದ ಮೂಲಕ ರಾಜ್ಯಾಂಗದ ವಿಧಿಗಳನ್ನು ಬದಲಾಯಿಸುವ ವಿಷಯ ಅಲ್ಲ. ಬದಲಾವಣೆಗಾಗಿ ಕೋರುತ್ತಿರುವ ಆ ಕೆಲವೊಂದು ಬದಲಾವಣೆಗಳನ್ನು ನಾವೀಗ ನೋಡೋಣ. ನಾವು ಮಹಾರಾಜರ ಬೆಂಬಲಿಗರು। ಅದೇ ನಮ್ಮ ಬಗ್ಗೆ ಆಡಿರುವ ಮಾತು. ನಾನು ಮಹಾರಾಜರನ್ನು ಭೇಟಿ ಆಗಿಯೇ ಇಲ್ಲ, ವೈಯಕ್ತಿಕವಾಗಿ ನನಗೆ ಅವರ ಪರಿಚಯ ಇಲ್ಲ. ಆದರೂ, ನಾವು ಈ ಮಹಾರಾಜನ ಅಥವಾ ಯಾರೇ ಮಹಾರಾಜನ ಬೆಂಗಬಲಿಗರು। ತನ್ನದೇ ಆದ ಇಚ್ಛಾ ಸ್ವಾತಂತ್ರ್ಯ ಉಳ್ಳ ಮಹಾರಾಜ ಅಲ್ಲಿಲ್ಲ. ಭಾರತದ ಸಂಸತ್ತು, ರಾಜ್ಯಾಂಗ ಅವರನ್ನು ಜಮ್ಮು ಮತ್ತು ಕಾಶ್ಮೀರದ ಸಂವಿಧಾನಿಕ ಮುಖ್ಯಸ್ಥರನ್ನಾಗಿ ಮಾಡಿದೆ. ಅವರು ಆ ಸ್ಥಾನದಲ್ಲಿ ಇದ್ದಾರೆ. ಆಭಾಸ ಎಂಥಾದ್ದು? ಪ್ರಸ್ತುತದಲ್ಲಿ, ಶೇಕ್ ಅಬ್ದುಲ್ಲಾ ಸರ್ಕಾರವು ರಾಜ್ಯಾಂಗದ ಪ್ರಕಾರ ಮಹಾರಾಜರಿಗೆ ಜವಾಬ್ದಾರವಾಗಿರಬೇಕಿದೆ. ಸಂಪೂರ್ಣವಾಗಿ ತೆಗೆದುಹಾಕಬೇಕಾದ ಅನಿಷ್ಟ ವ್ಯಕ್ತಿಯೆಂದು ಯಾರನ್ನು ಬಣ್ಣಿಸಲಾಗಿದೆಯೋ ಅವರಿಗೇ ಜವಾಬ್ದಾರವಾಗಿರಬೇಕಿದೆ. ಮಹಾರಾಜರು ಸಂವಿಧಾನಿಕ ಮುಖ್ಯಸ್ಥರಾಗಿ ಅಲ್ಲಿದ್ದಾರೆ. ಈ ವ್ಯವಸ್ಥೆಯನ್ನು ತೆಗೆದು ಹಾಕಬೇಕೆಂಬುದು

ನಿಮ್ಮ ಭಾವನೆಯಾಗಿದ್ದರೆ, ನಿಮ್ಮ ರಾಜ್ಯಾಂಗವನ್ನು ಬದಲಾಯಿಸಿ. ಅಲ್ಲಿ ವಂಶಪಾರಂಪರ್ಯದ ರಾಜ ಪ್ರಮುಖರು ಇರಬಾರದೆಂದು ಹೇಳಿ. ಅದು ಪರಿಶೀಲನೆಗೆ ಅರ್ಹವಾದ ವಿಷಯ. ನಾವು ಅದನ್ನು ಪರಿಶೀಲಿಸೋಣ. ಆದರೆ, ಅದನ್ನು ಹೇಳಿರುವ ರೀತಿ ನೋಡಿ, ಹಿಂದೂ ಮಹಾರಾಜರನ್ನು ತೆಗೆದುಹಾಕಲಾಗುತ್ತಿದೆ. ಪಾಕಿಸ್ತಾನದಲ್ಲಿ ರಣಘೋಷಗಳಲ್ಲಿ ಅದು ಒಂದು ಆದರೆ, ಹಿಂದೂ ಮಹಾರಾಜರ ರಾಜಪ್ರಭುತ್ವವನ್ನು ಕಿತ್ತೊಗೆದವರು ಯಾರು ? ಶೇಕ್ ಅಬ್ದುಲ್ಲಾ ಅಲ್ಲ, ಕಿತ್ತೊಗೆದದ್ದು ಸ್ವತಂತ್ರ ಭಾರತದ ರಾಜ್ಯಾಂಗ. ಹಾಗೆ ಮಾಡಿದ್ದು ನಾವು. ಯಾವ ರಾಜರಿಗೂ ಯಾವುದೇ ಅಸಾಧಾರಣ ಅಧಿಕಾರಿಗಳು ಇರುವುದಿಲ್ಲ. ಅವರುಹೆಸರಿಗೆ ಸರ್ಕಾರದ ಮುಖ್ಯಸ್ಥರಾಗಿರುತ್ತಾರೆ. ಸರ್ಕಾರ, ತಾಂತ್ರಿಕವಾಗಿ ಅವರಿಗೆ ಜವಾಬ್ದಾರಾಗಿರ ಬೇಕಾಗುತ್ತದೆ, ಆದರೆ, ಕ್ರಮೇಣ ಚುನಾಯಿತ ಶಾಸನ ಸಭೆಗೆ ಜವಾಬ್ದಾರವಾಗಿರುತ್ತದೆ ಎಂದು ನಾವು ಹೇಳಿದ್ದೇವೆ, ಆದರೆ, ಈಗ, ಕಾಶ್ಮೀರದಲ್ಲಿ ಅಪೂರ್ವ ಸಾಧನೆ ಮಾಡುತ್ತಿದ್ದೇವೆಂದು, ಮಹಾರಾಜನನ್ನು, ಡೋಗ್ರಾ ರಾಜನನ್ನು ಕಿತ್ತೊಗೆಯುತ್ತಿದ್ದೇವೆಂದು ಅವರು ಪ್ರತಿಯೊಂದು ಭಾಷಣದಲ್ಲೂ ಹೇಳುತ್ತಿದ್ದಾರೆ. ಪ್ರಚಾರ ಆ ರೀತಿ ಮಾಡುವುದೇ? ಅದರ ಅಗತ್ಯವಿತ್ತೇ ? ನೀವು, ಸತ್ತ ಕುದುರೆಗೆ ಚಾವಟಿಯಿಂದ ಹೊಡೆಯುತ್ತಿದ್ದೀರಿ. ಆದು ಮುಗಿದ ಕತೆ. ಮತ್ತೆ ಮತ್ತೆ ಅದನ್ನೇ ಹೇಳುವುದರಿಂದ ಏನು ಪ್ರಯೋಜನ ?

ಇನ್ನು ಚುನಾಯಿತ ಗೌರ್ನರ್ ವಿಷಯ, ರಾಜ್ಯಾಂಗ ಸಭೆಯ ನಡವಳಿಕೆ ನನ್ನಲ್ಲಿದೆ. ನಮ್ಮ ರಾಜ್ಯಾಂಗದಲ್ಲಿ ಗೌರ್ನರ್‌ಗೆ, ಮೊದಲು ವಿಧಿಯನ್ನು ಸೇರಿಸಿದ್ದೆವೆಂಬುದನ್ನು, ತರುವಾಯ, ನಾವು ಉದ್ದೇಶಿಸಿದ್ದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾಯಿತ ಗೌರ್ನರ್ ಇರುವುದು ಬೇಡವೆಂದು ಸರ್ದಾರ್ ಪಟೇಲ್ ಮತ್ತು ಪ್ರಧಾನ ಮಂತ್ರಿಗಳು ಹಾಗೂ ಇತರರು ಅಭಿಪ್ರಾಯಪಟ್ಟಿದ್ದನ್ನು ಪ್ರಧಾನ ಮಂತ್ರಿಗಳು ನೆನಪಿಗೆ ತಂದುಕೊಳ್ಳಬೇಕು. ಗೌರ್ನರ್ ರವರು ರಾಷ್ಟ್ರಪತಿಯವರ ಪ್ರತಿನಿಧಿಯಾಗಿ ಕಾರ್ಯ ನಿರ್ವಹಿಸಬೇಕು, ಗೌರ್ನರ್‌ರವರು ಜನರಿಂದ ಅಥವಾ ಶಾಸನ ಸಭೆಯಿಂದ ಚುನಾಯಿತರಾಗಿ, ಚುನಾಯಿತ ಮುಖ್ಯಮಂತ್ರಿಯೂ ಇದ್ದರೆ, ಗೌರ್ನರ್‌ರವರು ಸಹ ಪಕ್ಷದ ವ್ಯಕ್ತಿಯಾಗುವುದರಿಂದ ಸಂಘರ್ಷದ ಎಲ್ಲ ಸಾಧ್ಯತೆಯು ಇರುತ್ತದೆ ಎಂದು ಹೇಳಲಾಗಿದೆ. ಈ ಎಲ್ಲ ಸಂಗತಿಗಳನ್ನು ಪ್ರಧಾನ ಮಂತ್ರಿಗಳು ವಿವರಿಸಿದ್ದಾರೆ ಮತ್ತು ಭಾರತದ ಏಕತೆಯನ್ನು ಉಳಿಸಿಕೊಳ್ಳಲು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಸಂಪರ್ಕ ಇರುವಂತಾಗಲು ಗೌರ್ನರ್‌ರನ್ನು ರಾಷ್ಟ್ರಪತಿಯವರು ನೇಮಿಸಬೇಕೆಂಬುದಕ್ಕೆ ಅದೇ ಕಾರಣವೆಂದು ಹೇಳಿದ್ದಾರೆ. ಈಗ ಅದನ್ನೆಲ್ಲಾ ಮರೆತುಬಿಡಿ, ಏಕೆಂದರೆ, ಶೇಕ್ ಅಬ್ದುಲ್ಲಾರವರು "ಈಗ ಚುನಾಯಿತ ಮುಖ್ಯಸ್ಥರಿರಬೇಕು" ಎಂದು ಹೇಳುತ್ತಿದ್ದಾರೆ. ರಾಜ್ಯಾಂಗದಲ್ಲಿ ಮೂಲತಃ ಚುನಾಯಿತ ಗೌರ್ನರ್‌ಗೆ ನಾವು ಅವಕಾಶ ಕಲ್ಪಿಸಿದ್ದೆವು. ಆ ತರುವಾಯ ಚನ್ನಾಗಿ ಆಲೋಚನೆ ಮಾಡಿಯೇ ನಾವು ಅವ್ಯವಸ್ಥೆಯನ್ನು ಕೈಬಿಟ್ಟಾಗ ನೀವೇನು

ಮಾಡುತ್ತಿದ್ದಿರಿ ಎಂದು ನೀವೇಕೆ ಅವರಿಗೆ ಮತ್ತು ಇತರರಿಗೆ ಹೇಳಬಾರದು ? ಈಗ ನಮಗೆ ಜ್ಞಾನೋದಯ ಆಗಿದೆ, ಚುನಾಯಿತ ಮುಖ್ಯಸ್ಥನ ಅವಶ್ಯಕತೆ ಇದೆ, ಅದರಿಂದ ನಮಗೆ ಅನುಕೂಲವಾಗುತ್ತದೆಯೆಂದು ನೀವು ಭಾವಿಸಿದರೆ, ಅದನ್ನು ಪರೀಶೀಲಿಸಿ ಎಂದು ನಾನು ಹೇಳುತ್ತೇನೆ. ನಿರ್ದಿಷ್ಟ ಪ್ರಸ್ತಾವನೆ ಮಂಡಿಸಿ. ಅದರ ಸಾಧಕ, ಬಾಧಕಗಳನ್ನು ನಾವು ಪರಿಶೀಲಿಸೋಣ. ಇದ್ದಕ್ಕಿದ್ದಂತೆ ನನ್ನ ಸ್ನೇಹಿತ ಡಾ|| ಹಿರೇನ್ ಮುಖರ್ಜಿಯವರು, “ಜನರು ಚುನಾಯಿತ ಮುಖ್ಯಸ್ಥ ಇರಬೇಕೆಂದು ಗದ್ದಲ ಎಬ್ಬಿಸುತ್ತಿದ್ದಾರೆ” ಎಂದು ಹೇಳುತ್ತಿದ್ದಾರೆ. ಎಲ್ಲ ಕಡೆಯೂ ಜನರು, ಚುನಾಯಿತ ಮುಖ್ಯಸ್ಥ ಇರಬೇಕೆಂದು ಗದ್ದಲ ಎಬ್ಬಿಸುತ್ತಿರಬಹುದು. ನೀವು, ಎಲ್ಲ ಕಡೆಯೂ ಚುನಾಯಿತ ಮುಖ್ಯಸ್ಥನನ್ನು ಇಟ್ಟುಕೊಳ್ಳುತ್ತೀರಾ ? ವಾಸ್ತವವಾಗಿ, ಇಂದಿನ ವಿದ್ಯಮಾನಗಳನ್ನು ನೋಡಿದರೆ, ನಾವು ಗೌರ್ನರ್ ಹುದ್ದೆಯನ್ನೇ ರದ್ದುಪಡಿಸಬೇಕಾಗುತ್ತದೆ. ಗೌರ್ನರ್ ಹುದ್ದೆಗಳನ್ನು ಹಲವಾರು ವರ್ಗಗಳ ಜನರಿಗೆ ಎಂದರೆ ಅತೃಪ್ತರು, ಸೋತವರು, ತಿರಸ್ಕೃತರು, ಅನಪೇಕ್ಷಿತ ಮಂತ್ರಿಗಳು, ಇನ್ನಿತರರಿಗೆ ಮೀಸಲಿಡಲಾಗುತ್ತದೆ. ನಮಗೆ ಈ ವರ್ಗದ ಜನರೇ ಬೇಕಿಲ್ಲ. ಅಥವಾ ನಿಮಗೆ ಅಂಥವರೇ ಬೇಕಿದ್ದರೆ, ಇಟ್ಟುಕೊಳ್ಳಿ. ನನಗೆ ವಿಶೇಷ ಆಸಕ್ತಿ ಏನಿಲ್ಲ. ಆದರೆ, ಈ ಬದಲಾವಣೆಗೆ ಯಾವ ಸಮರ್ಥನೆಯನ್ನೂ ಕೊಟ್ಟಿಲ್ಲ.

ಇನ್ನು ಧ್ವಜದ ವಿಷಯ. ಧ್ವಜಕ್ಕೆ ಮಹತ್ವ ಇದೆ. ಅದು ಮನೋಭಾವನೆಯ ವಿಷಯ ಎಂದು ಪ್ರಧಾನ ಮಂತ್ರಿಗಳು ಹೇಳಿದರಷ್ಟೇ ಸಾಲದು. ಭಾರತದ ಧ್ವಜ, ಅಲ್ಲಿ ಕೇವಲ ಎರಡು ಸಮಾರಂಭಗಳ ಸಂದರ್ಭದಲ್ಲಿ ಮಾತ್ರವೆ ಹಾರಾಡುತ್ತದೆ, ಉಳಿದಂತೆ ಆ ರಾಜ್ಯದ ಧ್ವಜ ಹಾರಾಡುತ್ತಿರುತ್ತದೆ ಎಂದು ತಿಳಿಸಲಾಗಿದೆ. ಭಾರತದ ಏಕತೆಗೆ ಮತ್ತು ಸಮಗ್ರತೆಗೆ ಭಾಧಕವಾಗುವುದಿಲ್ಲ ಹಾಗೂ ಪ್ರತ್ಯೇಕತೆಯ ಕೂಗಿಗೆ ಅದು ಆಸ್ಪದ ಕೊಡುವುದಿಲ್ಲವೆಂದು ನಿಮಗನ್ನಿಸಿದರೆ ಅದನ್ನು ಒಪ್ಪಿಕೊಳ್ಳಿ. ಎಲ್ಲರಿಗೂ ಅದೇ ಅವಕಾಶ ಕೊಡಿ. ಆದರೆ, ಶೇಕ್ ಅಬ್ದುಲ್ಲಾರ ಒತ್ತಾಯಕ್ಕೆ ಶರಣಾಗಿ ಅದಕ್ಕೆ ಏಕೆ ಅವಕಾಶ ಕೊಡಬೇಕು ?

ಆತ, ಸ್ವತಃ ತನ್ನನ್ನು ಪ್ರಧಾನ ಮಂತ್ರಿ ಎಂದು ಕರೆದುಕೊಳ್ಳ ಬಯಸಿದ್ದಾರೆ. ಆತ ಮೊದಲು ಶುರು ಮಾಡಿದ್ದೇ ಹಾಗೆ. ನಮ್ಮಲ್ಲಿ ಕೆಲವರಿಗೆ ಅದು ಹಿಡಿಸಲಿಲ್ಲ. ಕಾಶ್ಮೀರ ಸೇರಿದಂತೆ, ಭಾರತಕ್ಕೆ ಒಬ್ಬರೇ ಪ್ರಧಾನ ಮಂತ್ರಿ ಇರುವುದು ನಮಗೆ ಗೊತ್ತಿದೆ, ಆ ಪ್ರಧಾನ ಮಂತ್ರಿ ಇಲ್ಲೇ ಕುಳಿತಿದ್ದಾರೆ. ಇಬ್ಬರು ಪ್ರಾಧಾನ ಮಂತ್ರಿಗಳು, ಒಬ್ಬರು ದೆಹಲಿಯಲ್ಲಿ, ನಾನು ಮುಖ್ಯ ಮಂತ್ರಿಯಲ್ಲ, ನಾನು ಪ್ರಧಾನ ಮಂತ್ರಿ ಎಂದು ಸ್ವತಃ ಕರೆದುಕೊಳ್ಳುವ ಇನ್ನೊಬ್ಬರು ಶ್ರೀನಗರದಲ್ಲಿ, ಇದು ಸಾಧ್ಯವೇ? ಮೊದಮೊದಲು ಇದೊಂದು ಸಣ್ಣ ವಿಷಯವೆಂದುಕೊಂಡಿದ್ದೆ. ನಾವು ಅದಕ್ಕೆ ಗಮನ ಕೊಡಬಾರದು, ಆದರೆ ಕೆಲವೊಂದು ಬಗೆಯ ವಿಶೇಷ ಸ್ಥಾನಮಾನ ಕೊಡುವ ಮತ್ತು ಆತನಿಗೆ ತೀರಾ ಬೇರೆಯದೇ ಆದ ರೀತಿಯ

ಗೌರವಾದರ ನೀಡುವ ಪ್ರಕ್ರಿಯೆ ಹೇಗೆ ರೂಪುಗೊಳ್ಳುತ್ತದೆ ಎಂಬುದನ್ನು ನೋಡುತ್ತಿರಬೇಕೆಂದುಕೊಂಡಿದ್ದೆವು. ಪೌರತ್ವದ ಹಕ್ಕುಗಳು ಮತ್ತು ಮೂಲಭೂತ ಹಕ್ಕುಗಳತ್ತ ನೋಡಿ. ನಾವೇನು ಮಾಡುತ್ತಿದ್ದೇವೆ ? ಅದನ್ನು ಸದನ ಪರಿಶೀಲಿಸಿದೆಯೇ ? ಮಾಡಿರುವ ಶಿಫಾರಸ್ಸುಗಳ ಸಾಧಕ, ಭಾದಕಗಳನ್ನು ಸದನ ಚರ್ಚಿಸಿದೆಯೇ? ಪೌರತ್ವ ಕುರಿತಂತೆ ರಾಜ್ಯಾಂಗದಲ್ಲಿರುವ ವಿಧಿಗಳ ಬಗ್ಗೆ ಆಳವಾಗಿ ಚಿಂತನೆ ಮಾಡದಯೇ ನೀವು ಬದಲಾವಣೆ ಮಾಡುತ್ತಿದ್ದೀರಿ. ಶ್ರೀಮಂತರು ಆಸ್ತಿಪಾಸ್ತಿ ಕೊಂಡುಕೊಳ್ಳಲು ಕಾಶ್ಮೀರಕ್ಕೆ ಧಾವಿಸುತ್ತಿದ್ದಾರೆಂದು ಹೇಳಲಾಗಿದೆ. ನಮ್ಮ ಹೇಳಿಕೆಯಲ್ಲಿ ಪ್ರಧಾನ ಮಂತ್ರಿಗಳು ಹೇಳಿದಂತೆ 19 (5) ನೇ ವಿಧಿಯಲ್ಲಿ ಅವಕಾಶ ಇದೆ. ನಾವು ರಾಜ್ಯಾಂಗವನ್ನು ರಚಿಸುವಾಗ ಈ ವಿಧಿಯನ್ನು ನಾವು ಎಳೆ ಎಳೆಯಾಗಿಚರ್ಚಿಸಿದ್ದೇವೆ. ಭಾರೀ ಪ್ರಮಾಣದಲ್ಲಿ ಭೂಮಿಯನ್ನು ಅನಧಿಕೃತವಾಗಿ ಕೊಳ್ಳುವುದನ್ನು ತಡೆಯಲು ಕೆಲವೊಂದು ವಿಶೇಷ ಸಂರಕ್ಷಣೆ ಬೇಕೆಂದು ಹಲವಾರು ಪ್ರಾಂತ್ಯಗಳು ಪ್ರಯತ್ನಪಟ್ಟಿದ್ದವು. ಆಗ ನಾವೇನು ಹೇಳಿದ್ದೆವು ? ಆಸ್ತಿಪಾಸ್ತಿಕೊಳ್ಳುವುದರ ಮೇಲೆ ಅಥವಾ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಚಲನವಲನದ ಮೇಲೆ ಸಾರ್ವಜನಿಕ ಹಿತದೃಷ್ಟಿಯಿಂದ ಅಥವಾ ಪರಿಶಿಷ್ಟ ಜಾತಿಗಳು ಹಾಗೂ ಪರಿಶಿಷ್ಟ ಪಂಗಡಗಳ ಹಿತದೃಷ್ಟಿಯಿಂದ ನ್ಯಾಯೋಚಿತ ನಿರ್ಬಂಧ ವಿಧಿಸಲು ಯಾವುದೇ ರಾಜ್ಯ ಶಾಸನ ಸಭೆಯು ಕಾನೂನು ಮಾಡಬಹುದೆಂದು ನಾವು ಹೇಳಿದ್ದೆವು. ಕಾಶ್ಮೀರದಲ್ಲಿ ಕೆಲವೊಂದು ವಿಶೇಷ ನಿರ್ಬಂಧ ಇರಬೇಕೆಂದು ಶೇಕ್ ಅಬ್ದುಲ್ಲಾರಿಗೆ ಅನ್ನಿಸಿದರೆ, ಆ ವಿಧಿ ಇದೆ. ಈ ಬಗ್ಗೆ ನಾನು ಪ್ರಧಾನ ಮಂತ್ರಿಗಳನ್ನು ಸ್ಪಷ್ಟವಾಗಿ ಕೇಳಬಯಸುತ್ತೇನೆ ಅವರು ಅದನ್ನು ಹೇಳಿಲ್ಲ. ಅದನ್ನು ಅವರು ಹಾರಿಸಿಬಿಟ್ಟಿದ್ದಾರೆ. ಕಾಶ್ಮೀರ ವಿಧಾನಸಭೆಯು ವಿಧಿಸುವ ನಿರ್ಬಂಧಗಳು ಈ ವಿನಾಯಿತಿಗೆ ಅನುಸಾರವಾಗಿರುತ್ತವೆ. ಅಥವಾ ಅದಕ್ಕೆ ಇನ್ನೂ ಹೆಚ್ಚಿಗೆ ಕೊಡಲು ಉದ್ದೇಶಿಸಲಾಗಿದೆ ಎಂಬುದು ಅದರ ಅರ್ಥವೇ? ಅಲ್ಲಿ ನಾಗರೀಕರ ನಾಲ್ಕು ವರ್ಗಗಳಿವೆ. ನನ್ನಲ್ಲಿ ವಿವರ ಇದೆ, ಆದರೆ, ಅದನ್ನು ಓದಿ ಹೇಳಲು ನನಗೆ ಸಮಯ ಇಲ್ಲ ಆ ನಾಲ್ಕು ವರ್ಗಗಳನ್ನು, ತುಂಬಾ ನತದೃಷ್ಟರಾದ ಮಹಾರಾಜರ ಕಾಲದಲ್ಲಿ ರೂಪಿಸಲಾಗಿತ್ತು. ಪೌರತ್ವದ ಆ ನಾಲ್ಕು ವರ್ಗಗಳನ್ನು ಅವರು ಉಳಿಸಿಕೊಳ್ಳುವರೇ ಅಥವಾ ರದ್ದು ಮಾಡುತ್ತಾರೆಯೇ ? ಲಾರ್ಡ್ ಕರ್ಜನ್‌ರವರು ಒಂದು ಪುಸ್ತಕದಲ್ಲಿ ಬರೆದ ಕಥೆ ನನಗೆ ಜ್ಞಾಪಕಕ್ಕೆ ಬರುತ್ತಿದೆ. ಇಂಗ್ಲೆಂಡಿನ ಒಳ್ಳೆಯ ಮನೆತನದ ಗಣ್ಯ ವ್ಯಕ್ತಿಯೊಬ್ಬರು 60 ಅಥವಾ 70 ವರ್ಷಗಳ ಹಿಂದೆ, ತನ್ನ ಹೆಂಡತಿ ಜತೆ, ಪರ್ಷಿಯಾದ ದೊರೆಯ ಆಸ್ಥಾನಕ್ಕೆ ಹೋಗಿದ್ದರಂತೆ. ದೊರೆಗೆ, ಇಬ್ಬರನ್ನೂ ಪರಿಚಯ ಮಾಡಿಕೊಡಲಾಯಿತು. ದೊರೆ ಆ ಹೊತ್ತಿನಲ್ಲಿ ಬೇರೆ ಏನೋ ಗುಂಗಿನಲ್ಲಿದ್ದರಿಂದ ಇವರತ್ತ ಅಷ್ಟೇನೂ ಗಮನಹರಿಸದಿದ್ದುದನ್ನು ನೋಡಿದ ರಾಯಭಾರಿಯು ದೊರೆಯನ್ನು: “ಮಹಾ ಸ್ವಾಮಿ, ಈ ಮಹಿಳೆಗೆ ಯಾವ ಮರ್ಯಾದೆ ಕೊಡಬೇಕು, ಅಪ್ಪಣೆಯಾಗಬೇಕು” ಎಂದು ಭಿನ್ನವಿಸಿಕೊಂಡ. ಆ ದೊರೆಯ ಆಸ್ಥಾನದಲ್ಲಿ ಮಹಿಳೆಯರಿಗಾಗಿ ಮೂರು ಬೇರೆ ಬೇರೆ ದರ್ಜೆಯ ಮರ್ಯಾದೆ ಇದ್ದವಂತೆ,

ಆ ದೊರೆ, "ಮರ್ಯಾದೆ-ಮೂರನೇ ದರ್ಜೆ" ಎಂದು ಅಪ್ಪಣೆ ಮಾಡಿದನಂತೆ. ಸಾರಾಸಾರ ವಿಚಾರ ಮಾಡದೆ ದೊರೆ ತತ್ತರಗೊಳಿಸುವ ಅಪ್ಪಣೆ ಮಾಡಿದ್ದರಿಂದ ಆದ ಅನಾಹುತ ಆಮೇಲೆ ಗೊತ್ತಾಗಿ ತಪ್ಪನ್ನು ಸರಿಪಡಿಸಿಕೊಳ್ಳಲಾಯಿತಂತೆ. ಜಮ್ಮು ಮತ್ತು ಕಾಶ್ಮೀರ ದಲ್ಲೂ ಪೌರತ್ವದ ನಾಲ್ಕು ವರ್ಗಗಳಿವೆ, ಏತಕ್ಕಾಗಿ? ಅವುಗಳನ್ನು ರದ್ದುಪಡಿಸಬೇಕು. ಪೌರತ್ವಕ್ಕೆ ಒಂದೇ ಒಂದು ವರ್ಗ ಇರಬೇಕು. ನಿಮ್ಮ ಎಲ್ಲಾ ಆಸ್ತಿಪಾಸ್ತಿಗಳನ್ನು ಭಾರತೀಯರು ಕೊಂಡುಕೊಳ್ಳುತ್ತಾರೆಯೇ? ಭಾರತೀಯರು ತಮ್ಮಗಿಷ್ಟ ಬಂದ ಹಾಗೆ ಅಲ್ಲಿಗೆ ಹೋಗುತ್ತಾರೆ, ಆಸ್ತಿಪಾಸ್ತಿ ಕೊಂಡುಕೊಳ್ಳುತ್ತಾರೆಂದು ಹೇಳಿಲ್ಲ. ಒಂದು ವೇಳೆ ಕೆಲವರು ಭಾರತೀಯರು ಅಲ್ಲಿಗೆ ಹೋಗಿ ಕೆಲವೊಂದು ಆಸ್ತಿಪಾಸ್ತಿ ಕೊಂಡುಕೊಳ್ಳುತ್ತಾರೆಂದುಕೊಂಡರೆ, ನಿಮ್ಮಲ್ಲಿ ಶಾಸನಾತ್ಮಕ ನಿಯಮಗಳಿವೆಯಲ್ಲ. ನಾವು ಅವನ್ನು ಒಪ್ಪಿಕೊಂಡಿದ್ದೇವಲ್ಲ. ಭಯ ಏಕೆ ? ನಮ್ಮಲ್ಲಿ ಭಾರತದ ಕಾಶ್ಮೀರಿ ಪ್ರಧಾನ ಮಂತ್ರಿಗಳಿದ್ದಾರೆ. ಭಾರತದ ಕಾಶ್ಮೀರಿ ಗೃಹಮಂತ್ರಿಯವರಿದ್ದಾರೆ. ನಾವು ಭಾರತದಲ್ಲಿ ನೆಮ್ಮದಿಯಿಂದ ಇದ್ದೇವೆ. ನಾವು ಜಮ್ಮು ಮತ್ತು ಕಾಶ್ಮೀರದ ಮೇಲೆ ದಾಳಿ ಮಾಡಹೋಗುವುದಿಲ್ಲ. ನಾನು ಆ ಸುಂದರ ಪ್ರದೇಶಕ್ಕೆ ಹೋಗಿಯೇ ಇಲ್ಲ. ನಾನು ಅಲ್ಲಿಗೆ ಹೋಗಿ ಕೆಲಕಾಲ ಇರಬಯಸಿದ್ದೇನೆ. ಒಂದು ಮನೆಯನ್ನು ಕೊಂಡುಕೊಂಡು ಕೊಳ್ಳಲು ನನ್ನಲ್ಲಿ ಹಣ ಇಲ್ಲ. ಅದೇನೆ ಇರಲಿ, ನಾನು ಅಲ್ಲಿಗೆ ಹೋಗಬಯಸಿದ್ದೇನೆ. ಇದು ಮೂಲಭೂತ ಹಕ್ಕುಗಳ ಬಗ್ಗೆ ನಿಮಗಿರುವ ಧೋರಣೆ. ಸಮರ್ಥನೆ ನೀಡಲು ತುಂಬಾ ಕಷ್ಟವೆನಿಸಿದ ಬದಲಾವಣೆಗಳನ್ನು ನೀವು ತರಬಯಸಿದ್ದೀರಿ ಪ್ರಧಾನ ಮಂತ್ರಿಗಳು ಎರಡು ಮೂರ ವಿಷಯಗಳನ್ನು ಹೇಳಿದ್ದಾರೆ. ವಿದ್ಯಾರ್ಥಿವೇತನ ಹಾಗೂ ನೌಕರಿ ಇತ್ಯಾದಿ ಬಗ್ಗೆ. ನೌಕರಿ ವಿಷಯದಲ್ಲೇ ಏಕೆ ? ನೌಕರಿ ವಿಷಯದಲ್ಲಿ ಒಬ್ಬ ಪೌರನ, ಇನ್ನೊಬ್ಬ ಪೌರನ ನಡುವೆ ನೀವು ತಾರತಮ್ಯ ಮಾಡಬಯಸಿದ್ದೀರಾ ? ಆ ವಿಷಯದಲ್ಲೂ, ನಮ್ಮ ರಾಜ್ಯಂಗದ ಪ್ರಕಾರ, ಸಂಸತ್ತಿಗೆ ಮಾತ್ರವೇ, ಯಾರಿಗೆ ರಕ್ಷಣೆ ಕೊಡಬೇಕೋ ಅಂಥವರು ಮಾತ್ರವೇ ನೌಕರಿ ಸೇರುವುದಕ್ಕೆ ವಿಶೇಷ ವಿಧಿಯನ್ನು ತರುವ ಹಕ್ಕಿದೆ. ಎನ್ನುವುದು ನಿಮಗೆ ಗೊತ್ತಿದೆ. ದಕ್ಷಿಣ ಭಾರತದಲ್ಲೂ ಅದೇ ಬಗ್ಗೆ ಬೇಡಿಕೆಗಳು ಇವೆ. ಕಳೆದ ಕೆಲವು ವರ್ಷಗಳಿಂದ ನಾನು ಆ ಬೇಡಿಕೆಗಳನ್ನು ಗಮನಿಸುತ್ತಿದ್ದೇನೆ. ಈ ಕೆಲವೊಂದು ನಿಯಮಗಳು ಕಟ್ಟುನಿಟ್ಟಾಗಿ ಕಾರ್ಯರೂಪಕ್ಕೆ ಬರುತ್ತಿರುವುದನ್ನು ನೋಡಿ ಅವರೂ ಸಹ ಹತಾಶರಾಗಿದ್ದಾರೆ. ಅವರಿಗೆ ಅಂಥ ಅವಕಾಶಗಳನ್ನು ನೀಡಿದರೆ, ಇವರೂ ಸಹ ಅದೇ ಬಗೆಯ ರಕ್ಷಣೆ ಬಯಸುತ್ತಾರೆ.

ಇನ್ನೊಂದು ವಿಷಯವನ್ನು ಪ್ರಧಾನ ಮಂತ್ರಿಗಳು ಹೇಳಲಿಲ್ಲ. ವಿಶೇಷ ನಿಯಮವನ್ನು ಹೇಗೆ ಮಾಡಲಾಗುತ್ತದೆ ಎಂಬ ಬಗ್ಗೆ ನನಗೆ ನಿಜವಾಗಿಯೂ ತುಂಬಾ ಆಶ್ಚರ್ಯವಾಯಿತು. ಎರಡು ಲಕ್ಷ ಜನರು ಪಾಕಿಸ್ತಾನಕ್ಕೆ ಹೋಗಿರುವುದು ನಿಮಗೆ ಗೊತ್ತಿದೆ. ಈ ಜನರು ಕಾಶ್ಮೀರಕ್ಕೆ ವಾಪಸು ಬರುವಂತೆ ವಿಶೇಷ ಕಾನೂನು ಮಾಡಲಾಗುವುದು ಎಂಬ ನಿಯಮ ಇದೆ. ಕದನ

ಇನ್ನೂ ನಡೆಯುತ್ತಿದೆ. ಒಂದು ಕಡೆ ನೀವು, ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟಂತೆ ನಾಗರೀಕ ಸ್ವಾತಂತ್ರ್ಯದ ಮೇಲೆ ಕಟ್ಟುನಿಟ್ಟಿನ ನಿರ್ಬಂಧ ವಿಧಿಸಲು ಉದ್ದೇಸಿದ್ದೀರಿ, ಇನ್ನೊಂದು ಕಡೆ ನೀವು ಬಾಗಿಲು ತೆರೆದು ಪಾಕಿಸ್ತಾನಿಗಳು ಕಾಶ್ಮೀರಕ್ಕೆ ಬರಲು ಅವಕಾಶ ಕೊಡುತ್ತಿದ್ದೀರಿ. ಇದಕ್ಕಾಗಿ ವಿಶೇಷ ಕಾನೂನು ಬೇಕು, ವಿಶೇಷ ಸರ್ಕಾರ ಬೇಕು. ಪಾಕಿಸ್ತಾನಕ್ಕೆ ಓಡಿ ಹೋದ, ಮತ್ತು ವಾಪಸು ಬರಲು ಇಷ್ಟವಿಲ್ಲದವರಿಗಾಗಿ ವಿಶೇಷ ನಿಯಮ ಮಾಡಲು ಶೇಕ್ ಅಬ್ದುಲ್ಲಾರವರಿಗೆ ಅಷ್ಟೊಂದು ಕಾತುರ ಏಕೆ ? ಅದರಲ್ಲಿ ಏನಾದರೂ ತತ್ವ ಇದೆಯೇ ? ಅದರಿಂದ ಭತ್ರತೆಯ ಮೇಲೆ ಆಗುವ ಪರಿಣಾಮ ಏನು ?.............. ಸತ್ತವರು ಮತ್ತೆ ವಾಪಸು ಬರುವುದಿಲ್ಲ, ಯಾರು ಬದುಕಿದ್ದಾರೋ ಅವರಿಗೆ ಭಾರತದ ಮೇಲೆ ಪ್ರಾಮಾಣಿಕವಾದ ನಂಬಿಕೆ ಇದ್ದರೆ ಮತ್ತು ನಿಜವಾಗಿಯೂ ಜಮ್ಮುವಿನಲ್ಲಿ ಬಾಳಬಯಸಿದರೆ ನಾಳೆ ಬರಬಹುದು. ಅಂಥವರನ್ನು ಒರೆ ಹಚ್ಚಿನೋಡ ಬೇಕಾಗುತ್ತದೆ. ಅವರು ಬಂದರೆ ಬರಲಿ. ಅದಕ್ಕಾಗಿ ವಿಶೇಷ ನಿಯಮದ ಅಗತ್ಯವೇನಿಲ್ಲ. ಜಮ್ಮು ಬಗ್ಗೆ ಹೇಳುವುದಾದರೆ, ನಿಮಗೇ ಗೊತ್ತಿದೆ, ಅದೊಂದು ಅತ್ಯಂತ ದುರಂತದ ರಾಜ್ಯ. ಎರಡೂ ಕಡೆಯಿಂದ ಜರ್ಝರಿತವಾಗಿದೆ. ವ್ಯಥೆಯಿಂದ ತುಂಬಿರುವ ಮುಸ್ಲಿಮರೂ ಇದ್ದಾರೆ, ವ್ಯಥೆಯಿಂದ ತುಂಬಿರುವ ಹಿಂದೂಗಳೂ ಇದ್ದಾರೆ. ಭಾರತದ ಅನೇಕ ಭಾಗಗಳಲ್ಲಿ ಇದ್ದಂಥದ್ದೇ ಕರಾಳ ಕಾಲ ಅದು. ಆದರೆ, ಇಂದಿನ ವಸ್ತು - ಸ್ಥಿತಿ ಏನಿದೆ ? ನೀವು ಎಷ್ಟು ಸಾವಿರ ಜನರು ಬರಲು ಅವಕಾಶ ಕೊಟ್ಟಿದ್ದೀರಿ? ನನಗೆ ಸಂಖ್ಯೆ ಮರೆತು ಹೋಗಿದೆ. ಜಮ್ಮು ಮತ್ತು ಕಾಶ್ಮೀರಕ್ಕೆ ಅವರನ್ನು ವಾಪಸು ಕರೆಸಿಕೊಳ್ಳಲಾಗುತ್ತದೆ ಎಂಬ ವಿಶೇಷ ವಿಧಿಯನ್ನು ಏಕೆ ಸೇರಿಸಬಾರದು ? ಸಾವಿರಾರು ಜನ ಬಿಟ್ಟು ಬಂದಿದ್ದಾರೆ. ಅವರು ವಾಪಸು ಏಕೆ ಹೋಗುತ್ತಿಲ್ಲ? ಎಷ್ಟು ಜನ ಪಂಡಿತರು ಕಾಶ್ಮೀರವನ್ನು ಬಿಟ್ಟು ಬಂದಿದ್ದಾರೋ, ನನಗೆ ಗೊತ್ತಿಲ್ಲ. ಅವರೂ ಸಹ ಕಾಶ್ಮೀರಕ್ಕೆ ವಾಪಸ್ಸು ಹೋಗಲೇಬೇಕು. ಆ ಭಾಗದ ಬಗ್ಗೆ ಹೇಳುವುದಾದರೆ, ಅದೂ ಸಹ ಗುರುತರವಾದ ವಿಷಯವೇ. ಜಮ್ಮು ಮತ್ತು ಕಾಶ್ಮೀರದ ಮೂರನೇ ಒಂದು ಭಾಗ ಈಗ ಪಾಕಿಸ್ತಾನದ ಹಿಡಿತದಲ್ಲಿದೆ. ಸುಮಾರು ಒಂದು ಲಕ್ಷ ಹಿಂದೂಗಳು, ಸಿಖ್ಖರು ಕಾಶ್ಮೀರದ ಭೂಗಕ್ಕೆ ಬಂದಿದ್ದಾರೆ, ಆಶ್ರಯ ಪಡೆದಿದ್ದಾರೆ. ಅವರ ಗತಿ ಏನು ? ಅವರ ಪಾಲನೆ, ಪೋಷಣೆ ಮಾಡಬೇಕಿದೆ. ಈಗ, ಪಾಕಿಸ್ತಾನಿಗಳಾಗಿರುವವರ ಬಗ್ಗೆಯೇ ನೀವು ಚಿಂತಿಸುತ್ತಿದ್ದೀರಿ. ನೀವು ಅವರನ್ನು ಪುನಃ ಪರಿವರ್ತಿಸುತ್ತೀರಿ ಮತ್ತು ಕಾಶ್ಮೀರ ಪೌರರ ಸ್ಥಾನಮಾನ ಕೊಡುತ್ತೀರಿ. ಆದರೆ, ಆಶ್ರಯ ಕೋರಿ ಬಂದಿರುವ ಆ ನತದೃಷ್ಟರಿಗೆ ನೀವು ಹೇಗೆ ಜಾಗ ಕೊಡುತ್ತೀರಿ ? ಅವರಿಗಾಗಿ ಜಾಗ ಸಾಕಷ್ಟಿದೆಯೇ ? ಈ ವಿಷಯಗಳಿಗೆ ಯಾವ ಗಮನವನ್ನೂ ಕೊಟ್ಟಿಲ್ಲ.

ತುರ್ತು ಪರಿಸ್ಥಿತಿ ವಿಧಿ ಬಗ್ಗೆ ಹೇಳುವುದಾದರೆ ಅದೊಂದು ಆಶ್ಚರ್ಯಕರ ವಿಚಾರ. ಆಂತರಿಕ ಪ್ರಕ್ಷುಬ್ಧತೆ ಕಾರಣದಿಂದ ತುರ್ತು ಪರಿಸ್ಥಿತಿ ತಲೆದೋರಿದರೆ, ರಾಷ್ಟ್ರಪತಿಯವರಿಗೆ

ಅಂತಿಮ ನಿರ್ಧಾರ ಹೇಳುವ ಅವಕಾಶವೇ ಇಲ್ಲ. ಭಾರತದ ರಾಷ್ಟ್ರಪತಿಯವರ ಬಗ್ಗೆ ಭಯ ಏಕೆ ? ಭಾರತದ ರಾಷ್ಟ್ರಪತಿಯವರಿಗೆ ಇದಕ್ಕಿಂತಲೂ ಪುಕ್ಕಟೆ ಅವಮಾನ ಇನ್ನೊಂದನ್ನು ನೀವು ಊಹಿಸಬಲ್ಲಿರಾ ? ಕಾಶ್ಮೀರ ಸರ್ಕಾರ ರಾಜ್ಯಾಂಗಕ್ಕೆ ಬದ್ಧವಾಗಿರ ಬೇಕು. ಅವರದೇ ಕೆಟ್ಟ ಕೆಲಸಗಳ ಪರಿಣಾಮವಾಗಿ ತುರ್ತು ಪರಿಸ್ಥಿತಿ ತಲೆದೋರಿದರೆ ಅವರು ಏಕೆ ಕೋರಿಕೊಳ್ಳಬೇಕು ?

ಉದಾಹರಣೆಗೆ, ಚೀನಾ ಅಥವಾ ರಷ್ಯಾ ನಮ್ಮ ಮಿತ್ರ ರಾಷ್ಟ್ರಗಳಾದರೂ, ಅವರು ಆ ದೇಶಗಳ ಜೊತೆಗೆ ಸೇರಿಕೊಂಡಿರುವಾಗ ಅವರು ನಿಮ್ಮನ್ನೇ ಏಕೆ ಕೋರಿಕೊಳ್ಳಬೇಕು ? ನಿಮ್ಮ ಮಧ್ಯ ಪ್ರವೇಶಕ್ಕಾಗಿ ಅವರು ನಿಮ್ಮನ್ನೇ ಏಕೆ ಕೋರಿಕೊಳ್ಳಬೇಕು ? ಇತರ ತುರ್ತು ಪರಿಸ್ಥಿತಿ ವಿಧಿಗಳು ಅನ್ವಯವಾಗುತ್ತವೆಯೇ, ಇಲ್ಲವೇ ಎಂಬುದನ್ನು ಪ್ರಧಾನ ಮಂತ್ರಿಗಳು ಹೇಳುವರೆಂದು ನಾನು ನಿರೀಕ್ಷಿಸಿದ್ದೇನೆ. ರಾಜ್ಯಾಂಗದಲ್ಲಿ ಇತರ ಎರಡು ಮಹತ್ವದ ವಿಧಿಗಳು ಇರುವುದು ನಿಮಗೆ ಗೊತ್ತಿದೆ. ತುರ್ತು ಪರಿಸ್ಥಿತಿ ಘೋಷಣೆ ಜಾರಿಯಲ್ಲಿದ್ದಾಗ ಆದಾಯ ವಿತರಣೆಗೆ ಸಂಬಂಧಪಟ್ಟ ನಿಯಮಗಳನ್ನು ಅನ್ವಯಿಸುವುದಕ್ಕೆ 354ನೇ ವಿಧಿ ಸಂಬಂಧಿಸಿದೆ. 356ನೇ ವಿಧಿ, ರಾಜ್ಯಗಳಲ್ಲಿ ಸಂವಿಧಾನಿಕ ವ್ಯವಸ್ಥೆ ಕುಸಿದುಬಿದ್ದ ಸಂದರ್ಭಗಳಿಗೆ ಸಂಬಂಧಿಸಿದೆ. ಶೇಕ್ ಅಬ್ದುಲ್ಲಾರವರು 356ನೇ ವಿಧಿಯ ಅನ್ವಯವನ್ನು ಒಪ್ಪಿಕೊಂಡಿದ್ದಾರೆಯೇ ಅಥವಾ ಆರ್ಥಿಕ ತುರ್ತು ಪರಿಸ್ಥಿತಿಗೆ ಸಂಬಂಧಪಟ್ಟ ನಿಯಮಗಳನ್ನು ಒಳಗೊಂಡಿರುವ ತುಂಬಾ ಮಹತ್ವದ 360ನೇ ವಿಧಿಯನ್ನು ಒಪ್ಪಿ ಕೊಂಡಿದ್ದಾರೆಯೇ ? ಆ ಬಗ್ಗೆ ಪ್ರಧಾನ ಮಂತ್ರಿಗಳು ಏನನ್ನೂ ಹೇಳಿಲ್ಲ. ಸುಪ್ರೀಂ ಕೋರ್ಟ್ ಅಧಿಕಾರ ವ್ಯಾಪ್ತಿಯನ್ನು ಇನ್ನೂ ಒಪ್ಪಿಕೊಂಡಿಲ್ಲ.

ರಚನಾತ್ಮಕ ಸಲಹೆ ನೀಡಿ ನನ್ನ ಮಾತು ಮುಗಿಸುತ್ತೇನೆ. ಶೇಕ್ ಅಬ್ದುಲ್ಲಾ ರವರ ಪ್ರತಿಕ್ರಿಯೆಗಳ ಬಗ್ಗೆ ವಿವರವಾದ ವಿಮರ್ಶೆಗೆ ಹೋಗದೆ ಈ ನನ್ನ ಅಭಿಪ್ರಾಯಗಳನ್ನು ಹೇಳಿದ್ದೇನೆ. ಕಳೆದ ಸಲ, ಅವರು ದೆಹಲಿಗೆ ಬರುವುದಿದ್ದಾಗ, ನನ್ನನ್ನು ಭೇಟಿಯಾಗ ಬಯಸಿ ಅವರು ನನಗೆ ಪತ್ರ ಬರೆದಿದ್ದರು. ಆ ದಿನ ನಾನು ಇಲ್ಲಿರಲಿಲ್ಲ. ಹಾಗಾಗಿ, ಅವರನ್ನು ನಾನು ಭೇಟಿಯಾಗಲಿಲ್ಲ. ಸ್ನೇಹ ಪೂರ್ವಕವಾಗಿ, ನಾನು ಅವರಿಗೆ ಪತ್ರ ಬರೆದೆ. ಬಹುಷಃ ಯಾವುದಾದರೊಂದು ದಿನ ನಾನು ಅವರನ್ನು ಸಂಧಿಸಬಹುದು. ಇದು, ಅವರನ್ನು ನಾನು ಸಂಧಿಸುವ ಅಥವಾ ಅವರು ನನ್ನನ್ನು ಸಂಧಿಸುವ ವಿಷಯ ಅಲ್ಲ ಕೆಲವೊಂದು ಮಾನದಂಡಗಳಿಗೆ ಅನುಸಾರವಾಗಿ ನಾವು ಮುಂದೆ ಸಾಗಬೇಕೆಂಬುದು ನನ್ನ ಕಳಕಳಿ. ಮೊಟ್ಟಮೊದಲನೆಯದಾಗಿ, ಮುಖ್ಯ ವಿಷಯಗಳ ಬಗ್ಗೆ ರಾಜ್ಯಾಂಗದ ವಿಧಿಗಳನ್ನು ರಾಷ್ಟ್ರಪತಿಯವರೇ ತನ್ನ ಅಧಿಕಾರ ಬಲದಿಂದ ಬದಲಾಯಿಸಲು ಆದೇಶ ಮಾಡಬೇಕಾದ ಯಾವ ವಿಷಯವೂ ಇಲ್ಲ.

ಕೆಲವೊಂದು ಮಹತ್ವದ ವಿಧಿಗಳನ್ನು ಪುನರ್ ಪರಿಶೀಲಿಸುವುದಕ್ಕೆ ಸಮರ್ಥನೆ ಇದೆಯೆಂದು ಪ್ರಧಾನ ಮಂತ್ರಿಗಳು ಭಾವಿಸಿದರೆ, ಉದಾಹರಣೆಗೆ ಭೂಮಿ, ಪರಿಹಾರ

ಕೊಡದೆಯೇ ಭೂಮಿಯನ್ನು ವಶಪಡಿಸಿಕೊಳ್ಳಬೇಕೆಂದು ನಿಮಗನ್ನಿಸಿದರೆ ರಾಜ್ಯಾಂಗದಲ್ಲಿ ಅದಕ್ಕೆ ಅವಕಾಶ ಕಲ್ಪಿಸಿ. ಈ ಎಲ್ಲ ಅಂಶಗಳನ್ನೂ ಪರಿಶೀಲಿಸಿ, ಇಡೀ ಭಾರತಕ್ಕೆ ಅನ್ವಯವಾಗುವಂತಹ ಅಥವಾ ಯಾವ ಭಾಗಗಳಿಗೆ ವಿಶೇಷ ಗಮನ ಕೊಡಬೇಕಾದ ಅಗತ್ಯವಿದೆಯೋ ಅಂಥ ಭಾಗಗಳಿಗೆ ಮಾತ್ರವೇ ಅನ್ವಯವಾಗುವಂತಹ ರೀತಿಯಲ್ಲಿ ನಿಯಮಗಳನ್ನು ರಚಿಸಿ. ಸಂವಿಧಾನಾತ್ಮಕ ರೀತಿಯಲ್ಲಿ ಮುಂದೆ ಸಾಗಿರಿ, ರಾಜ್ಯಾಂಗ ದೊಂದಿಗೆ ಚೆಲ್ಲಾಟ ಆಡಬೇಡಿ. ಅದು ಪವಿತ್ರವಾದ ದಾಖಲೆ. ತುಂಬಾ ಶ್ರಮವಹಿಸಿ, ತುಂಬಾ ಚಿಂತನ ಮಂಥನ ಮಾಡಿ ಸಿದ್ಧವಾದ ದಾಖಲೆ ಅದು. ಭಾರತದಲ್ಲಿ, ಕಾಶ್ಮೀರದಲ್ಲಾಗಲೀ ಅಥವಾ ಭಾರತದ ಇತರ ಭಾಗಗಳಲ್ಲಾಗಲೀ ನಿಧಾನವಾಗಿ ವಿಕಾಸವಾಗುತ್ತಿರುವ ಹೊಸ ವ್ಯವಸ್ಥೆಯನ್ನು ಪರಿಗಣನೆಗೆ ತೆಗೆದುಕೊಂಡರೆ ಕೆಲವೊಂದು ಬದಲಾವಣೆಗಳು ಅವಶ್ಯಕವೆಂದು ನೀವು ಭಾವಿಸಿದರೆ ತಮ್ಮ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಎಲ್ಲ ರೀತಿಯ ಅವಕಾಶ ದೇಶದ ಜನರಿಗೂ ಸಿಗಲಿ.

ಕೊನೆಯದಾಗಿ, ನಮ್ಮಲ್ಲಿ ಕೆಲವರು ಜಮ್ಮು ಹಾಗೂ ಲಡಾಖ್‌ಗೆ ಪ್ರತ್ಯೇಕ ಅಸ್ತಿತ್ವಕ್ಕೆ ಪ್ರಸ್ತಾಪಿಸುತ್ತಿದ್ದಾರೆ ಎಂದು ಆರೋಪ ಮಾಡಿರುವ ವಿಚಾರ. ಜಮ್ಮು ಮತ್ತು ಕಾಶ್ಮೀರದ ವಿಭಜನೆಯನ್ನು ನಾನು ಬಯಸಿಲ್ಲವೆಂದು ನಿಮಗೆ ಹಾಗೂ ಈ ಸದನಕ್ಕೆ ನಾನು ಭರವಸೆ ಕೊಡುತ್ತೇನೆ. ವಿಭಜನೆಯ ಭಯಂತರ ಅತಿರೇಕಗಳು ನನಗೆ ಗೊತ್ತಿವೆ. ವಿಭಜನೆಯಿಂದ ಖಂಡಿತವಾಗಿಯೂ ಸಂಭವಿಸುವ ಪರಿಣಾಮಗಳೂ ನನಗೆ ಗೊತ್ತಿವೆ. ವಿಭಜನೆಯನ್ನು ತಪ್ಪಿಸುವ ಜವಾಬ್ದಾರಿ, ಭಾರತದ ರಾಜ್ಯಾಂಗವನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದ ಜಮ್ಮು ಮತ್ತು ಕಾಶ್ಮೀರದ ಇಂದಿನ ಧಣಿಗಳ ಮೇಲಿದೆ. ಭಾರತದೊಂದಿಗೆ ಸಂಪೂರ್ಣವಾಗಿ ಸೇರಿಕೊಳ್ಳಲು ನಮಗೆ ಅವಕಾಶ ಕೊಡಬೇಕೆಂಬ ಅರ್ಥದಲ್ಲಿ ಇಂದು, ಜಮ್ಮುವಿನ ಜನರು ತಮಗೆ ಪ್ರತ್ಯೇಕ ಅಸ್ತಿತ್ವ ಬೇಕೆಂದು ಕೇಳಿದರೆ, ಅದು, ಭಾರತದಿಂದ ಬೇರೆಯಾಗುವ ವಿಚಾರ ಅಲ್ಲವೆಂಬುದನ್ನು ಸೂಕ್ಷ್ಮವಾಗಿ ಗಮನಿಸಿ ಅದರಲ್ಲಿ ಅಪರಾಧ ಏನಿದೆ ? ನಾವು ಸ್ವತಂತ್ರ ಭಾರತದ ರಾಜ್ಯಾಂಗವನ್ನು ಇಡಿಯಾಗಿ ಒಪ್ಪಿಕೊಳ್ಳಬಯಸಿದ್ದೇವೆ ಎಂದು ಅವರು ಹೇಳಿದರೆ ಅದರಲ್ಲಿ ಅಪರಾಧ ಏನಿದೆ ? ನೀವು, ಜಮ್ಮು ಮತ್ತು ಕಾಶ್ಮೀರವನ್ನು ವಿಭಜಿಸಿ ಎಂದು ನಾನು ಹೇಳುತ್ತಿಲ್ಲ. ನೀವು ಕಾಶ್ಮೀರವನ್ನು ಅಥವಾ ಕಾಶ್ಮೀರ ಕಣಿವೆಯನ್ನು ಭಾರತದಿಂದ ಹೊರಕ್ಕೆ ಕಳುಹಿಸಿ ಎಂದು ನಾನು ಹೇಳುತ್ತಿಲ್ಲ. ಅನು ನಾನು ಅಥವಾ ಈ ಸದನದಲ್ಲಿ ಕುಳಿತಿರುವ ನಾವು ನಿರ್ಧರಿಸುವ ವಿಷಯ ಅಲ್ಲ. ಅದನ್ನು ಆ ಭಾಗದ ಜನರೇ ನಿರ್ಧರಿಸಬೇಕಾಗುತ್ತದೆಂದು ಪ್ರಧಾನ ಮಂತ್ರಿಗಳು ಸರಿಯಾಗಿಯೇ ಹೇಳಿದ್ದಾರೆ. ಈಗ ಒಂದು ವೇಳೆ ಜಮ್ಮು ಮತ್ತು ಲಡಾಖ್ ಜನರು, ಇಡೀ ಜಮ್ಮು ಮತ್ತು ಕಾಶ್ಮೀರ ವಿಲೀನ ಆಗಬೇಕೆಂದು ಅಥವಾ ಶೇಕ್ ಅಬ್ದುಲ್ಲಾರವರಿಗೆ ಅದು ಒಪ್ಪಿಗೆಯಾಗದಿದ್ದರೆ ಆಗ ಕೊನೇ

ಪಕ್ಷ ಈ ಎರಡು ಪ್ರಾಂತ್ಯಗಳು, ಪ್ರತ್ಯೇಕ ಅಸ್ತಿತ್ವ ಉಳಿಸಿಕೊಳ್ಳಲು ಐತಿಹಾಸಿಕವಾದ ಅಥವಾ ಬೇರೆ ರೀತಿಯ ಸಮರ್ಥನೆ ಇದೆಯೆಂದು ಭಾವಿಸಿದರೆ, ಭಾರತಕ್ಕೆ ಸೇರಿಕೊಳ್ಳಲು ಅವಕಾಶ ಕೊಡಬೇಕು. ಕಾಶ್ಮೀರ ತಾನು ಬಯಸಿದ ರೀತಿಯಲ್ಲೇ, ಭಾರತದ ಮಧ್ಯಪ್ರವೇಶ ಸಾಧ್ಯತೆ ಅಷ್ಟೇನೂ ಇದರ ಹಾಗೆ, ಇನ್ನೂ ಹೆಚ್ಚಿನ ಸ್ವಾಯತ್ತತೆಯಿಂದ ಮುಂದುವರಿಯಲಿ. ಆ ಸಾಧ್ಯತೆಯನ್ನು ನಾವು ತಳ್ಳಿ ಹಾಕುವಂತಿಲ್ಲ. ಈ ವಿಚಾರವನ್ನು, ಅದರ ಸಂಭವನೀಯ ಪರಿಣಾಮಗಳೆಲ್ಲವನ್ನು ಗಮನಕ್ಕೆ ತೆಗೆದುಕೊಂಡು ಪರೀಶೀಲಿಸಲಾಗುವುದೆಂಬ ಭರವಸೆ ನನಗಿದೆ.

ಕಾಶ್ಮೀರದ ನನ್ನ ಮಿತ್ರ ಮೌಲಾನ ಮಸೂದಿಯವರು, ಅವರ ಬಗ್ಗೆ ನನಗೆ ತುಂಬಾ ಗೌರವವಿದೆ, ಈ ಬೆಳಿಗ್ಗೆ ಜಮ್ಮುವಿನ ಬಗ್ಗೆ ಮಾಡಿದ ಭಾಷಣವನ್ನು ಗ್ರಹಿಸಲು ಪ್ರಯತ್ನಿಸಿದೆ. ಅವರ ಕೊನೆಯ ವಿಷಯಕ್ಕೆ ನಾನು ಉತ್ತರ ಕೊಡುತ್ತೇನೆ. ಈ ಬೇಡಿಕೆಯನ್ನು ಜಮ್ಮು ಮುಂದಿಟ್ಟಿದೆ. ಆದರೆ 1941 ರಲ್ಲಿ ಜಮ್ಮು ಒಂದು ಪ್ರಾಂತ್ಯವಾಗಿತ್ತು. ಅಲ್ಲಿ ಮುಸ್ಲಿಮರ ಸಂಖ್ಯೆ ಜಾಸ್ತಿ ಇತ್ತು ಎಂದು ಅವರು ಹೇಳಿದ್ದಾರೆ. ಅವರು ಅದನ್ನೇನೋ ಹೇಳಿದರು, ಆದರೆ ಕತೆಯನ್ನು ಅವರು ಸಂಪೂರ್ಣವಾಗಿ ಹೇಳಲಿಲ್ಲ. 1941ರಲ್ಲಿ ಅದು ಮುಸ್ಲಿಂ ಬಹು ಸಂಖ್ಯಾಂತರ ಪ್ರಾಂತ್ಯವಾಗಿತ್ತೇನೋ ನಿಜ, ಆದರೆ, ಈಗ ಪಾಕಿಸ್ತಾನ ಆಕ್ರಮಿತ ಪ್ರದೇಶದಲ್ಲಿರುವ ಜಿಲ್ಲೆಗಳು, ಆಗ ಇಲ್ಲೇ ಇದ್ದದ್ದರಿಂದ ಅದು ಮುಸ್ಲಿಂ ಬಹು ಸಂಖ್ಯಾತ ಪ್ರಾಂತ್ಯವಾಗಿತ್ತು. ಈಗ ಆ ಜಿಲ್ಲೆಗಳು ನಮ್ಮ ಅಧೀನದಲ್ಲಿ ಇಲ್ಲ. ಅಂದ ಮೇಲೆ.........

ಅವುಗಳನ್ನು ನಾನು ಒಪ್ಪಿಸುವುದಿಲ್ಲ, ಅವರು ಆ ವಿಷಯ ಎತ್ತಿದ್ದಕ್ಕೆ ನನಗೆ ತುಂಬಾ ಸಂತೋಷ ಆಗಿದೆ. ಪುನಃ ವಶಪಡಿಸಿಕೊಳ್ಳುವುದಿಲ್ಲ ಎಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಅದು ಬೇರೆ ವಿಚಾರ, ನೀವು ಪುನಃ ವಶಪಡಿಸಿಕೊಳ್ಳುವುದಿಲ್ಲ. ಅದು ಆಗುವುದೂ ಇಲ್ಲ. ಆ ಜನರು ಜಮ್ಮು ಮತ್ತು ಕಾಶ್ಮೀರಕ್ಕೆ ವಿರುದ್ಧವಾಗಿ ವರ್ತಿಸಿದ್ದಾರೆ. ಆ ಜನರೇ ಪದೇ ಪದೇ ಹೇಳಿದಂತೆ, ಅವರಿಗೆ ಭಾರತಕ್ಕಿಂತಲೂ ಪಾಕಿಸ್ತಾನದತ್ತಲೇ ಒಲವು ಹೆಚ್ಚು.

ನೀವು, 1951ರ ಜನಗಣತಿ ಅಂಕಿಗಳನ್ನು ನೋಡಿ - ಅಂಕಿಗಳನ್ನು ಪ್ರಕಟಿಸಿಲ್ಲ, ಪಾಕಿಸ್ತಾನದ ವಶದಲ್ಲಿರುವ ಈ ಭಾಗವನ್ನೂ ಗಣನೆಗೆ ತೆಗೆದುಕೊಂಡರೆ - ಜಮ್ಮು ಜನಸಂಖ್ಯೆಯ ಶೇ. 75ರಷ್ಟು ಜನ ಹಿಂದೂಗಳು; ಹಿಂದೂ ಮತ್ತು ಮುಸ್ಲಿಂ ಆಧಾರದ ಮೇಲೆ ನಾನು ಹಾಗೆ ಹೇಳುತ್ತಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಭಾರತಕ್ಕೆ ಇಡಿಯಾಗಿ ಅಥವಾ ಭಾಗಶಃ ಸೇರಲು ಆ ಜನರ ಸಂಕಲ್ಪ ಏನಿದೆ ಅದರ ಆಧಾರದ ಮೇಲೆ ಹೇಳುತ್ತಿದ್ದೇನೆ. ಎಲ್ಲ ವಿಷಯಗಳನ್ನು ಒಪ್ಪಿಸಿ, ನಾವು ಭಾರತಕ್ಕೆ ಸೇರುತ್ತೇವೆಂದು ಜಮ್ಮು ಮತ್ತು ಲಡಾಖ್ ಪ್ರಾಂತ್ಯಗಳು ಹೇಳಿದರೆ, ಹಾಗೆ ಅವು ಸೇರುವುದಕ್ಕೆ ಅವುಗಳಿಗೆ ಸಾಧ್ಯತೆ ಮಾಡಿಕೊಡಿ.

ಕಾಶ್ಮೀರದ ಬಗ್ಗೆ ನೀವು ಯಾವ ಹಕ್ಕನ್ನು ಮುಂದಿಡುತ್ತಿದ್ದೀರೋ ಅದನ್ನೇ ಜಮ್ಮು ಮತ್ತು ಲಡಾಖ್‌ನ ಜನರೂ ಸಹ ಕೇಳಬಹುದು. ನಾವು ಸ್ನೇಹದ ಮನೋಭಾವದಿಂದ ಮುಂದುವರಿಯೋಣ. ಶೇಕ್ ಅಬ್ದುಲ್ಲಾರವರೇ ಸ್ವತಃ ಸುಮಾರು ಒಂದು ತಿಂಗಳ ಹಿಂದೆ, ಜಮ್ಮು ಮತ್ತು ಲಡಾಖ್ ನಿಜವಾಗಿಯೂ ಭಾರತಕ್ಕೆ ಸೇರುವುದಾದರೆ ತನ್ನ ಆಕ್ಷೇಪಣೆಯೇನೂ ಇಲ್ಲವೆಂದು ಹೇಳಿದ್ದಾರೆ. ನೀವು ಅದನ್ನು ಈಗಿಂದೀಗಲೇ ಮಾಡಬೇಕು ಅಥವಾ ಆ ರೀತಿಯಲ್ಲಿ ಮುಂದುವರಿಯಬೇಕು ಎಂದು ನಾನು ಹೇಳುತ್ತಿಲ್ಲ. ಆದರೆ, ಯಾವುದರಿಂದ ಒಳ್ಳೆಯದಾಗುತ್ತದೆ ಎನ್ನುವುದು ಆ ಭಾಗದ ಜನರೇ ನಿರ್ಧರಿಸಿಕೊಳ್ಳಬೇಕು ಮತ್ತು ಆ ನಿರ್ಧಾರ, ಪ್ರಧಾನ ಮಂತ್ರಿಗಳು ಸಮರ್ಥಿಸಿರುವ ಶೇಕ್ ಅಬ್ದುಲ್ಲಾರ ಮೂಲಭೂತ ಬೇಡಿಕೆಗಳಿಗೆ ಆಧಾರಸ್ತಂಭವಾಗಿರುವ ಸ್ವಯಂ-ನಿರ್ಧರಣೆಯ ತತ್ವಗಳಿಗೆ ಅನುಸಾರವಾಗಿರಬೇಕು.

## * ಭಾರತ ಮತ್ತು ಪಾಕಿಸ್ತಾನದ ನಡುವೆ ವಲಸೆ

ನಾವು, ಇಂದು, ಲಕ್ಷಾಂತರ ಜನರ ಹಿತದೃಷ್ಟಿಯಿಂದಷ್ಟೇ ಅಲ್ಲ, ಇಡೀ ದೇಶದ ಹಿತದೃಷ್ಟಿಯಿಂದ ತುಂಬಾ ಮಹತ್ವದ ವಿಷಯವೊಂದನ್ನು ಚರ್ಚಿಸಬೇಕಾಗಿದೆ. ಈ ವಿಷಯ ಇದೇ ಮೊದಲ ಬಾರಿಗೆ ಸಂಸತ್ತಿನ ಮುಂದೆ ಬರುತ್ತಿಲ್ಲ. ಕಳೆದ ಎರಡೂವರೆ ವರ್ಷಗಳಲ್ಲಾದ ಈ ಗುರುತರ ವಿದ್ಯಮಾನದ ಬಗ್ಗೆ ಈ ದೇಶದ ಬಹುಜನರ ಅಭಿಪ್ರಾಯವೇನೆಂಬುದನ್ನು ತಿಳಿಸಲು ಇದು ನನಗೆ ಅವಕಾಶ ಮಾಡಿಕೊಟ್ಟಿದೆ.

ಈ ನಿಲುವಳಿ ಸೂಚನೆ ಮೇಲೆ ಇಂದು ನಾನು ಮಾತನಾಡಲು ಎದ್ದಾಗ ನಾನು ತುಂಬಾ ವ್ಯಥೆ ಮತ್ತು ಕೊರಗಿನಿಂದ ಜರ್ಝರಿತನಾಗಿದ್ದೆ ಮತ್ತು ಜವಾಬ್ದಾರಿ ಹಾಗೂ ಕರ್ತವ್ಯದ ಪ್ರಜ್ಞೆಯಲ್ಲಿ ಮುಳುಗಿದ್ದೆನೆಂದು ಅನ್ನಿಸುತ್ತಿದೆ. ಭಾರತ ಸರ್ಕಾರವು ಇನ್ನು ಮುಂದೆ ಅನುಸರಿಸುವ ನೀತಿ, ಸಮಾಧಾನಕರ ಅಲ್ಲವೇ ಅಲ್ಲ ಮತ್ತು ಸಾಧಿಸಬೇಕೆಂದಿದ್ದ ಸಾಧನೆಯಲ್ಲಿ ವಿಫಲವಾಗಿದೆಯೆಂದು ನನ್ನ ಹಾಗೂ ಅನೇಕರ ಭಾವನೆ. ನಾವು ಅನೇಕರು ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೇವೆ. ಸರ್ಕಾರಕ್ಕೆ ಅವು ಒಪ್ಪಿಗೆಯಾಗಿಲ್ಲವೆಂಬುದು ತಿಳಿದು ಬಂದಿದೆ. ನಮ್ಮ ಮುಂದಿರುವ ವಿಷಯಗಳು ಎಷ್ಟೊಂದು ಬಹು ಮುಖ್ಯವಾದವುಗಳೆಂದರೆ ನಮ್ಮಲ್ಲಿ ಯಾರೂ ಕೋಪ ಅಥವಾ ರೋಷದ ವಾತಾವರಣದಲ್ಲಿ ಮಾತನಾಡ ಬಯಸುತ್ತಿಲ್ಲ. ಆದರೆ, ಕಾಲ ಮಿಂಚಿ ಹೋಗುವುದಕ್ಕೂ ಮೊದಲು ಈ ಬೃಹತ್ ಸಮಸ್ಯೆಗೆ ಒಂದು ಪರಿಹಾರ ಕಂಡುಕೊಳ್ಳಬಹುದೇನೋ ಎನ್ನುವ ನಂಬಿಕೆಯಿಂದ ತುಂಭಾ ನಿರ್ಭಡೆಯಿಂದ ನಮ್ಮ ನಮ್ಮ ಅಭಿಪ್ರಾಯಗಳನ್ನು ಮುಂದಿಡಬಯಸಿದ್ದೇವೆ.

ಪಾಕಿಸ್ತಾನದಲ್ಲಿರುವ ಅಲ್ಪ ಸಂಖ್ಯಾತರ ವಿಷಯವನ್ನು ನಾನಾ ರೀತಿಯಲ್ಲಿ ಕಳೆದ ಐದು ವರ್ಷಗಳಲ್ಲಿ ಇತ್ಯರ್ಥ ಮಾಡಲಾಗಿದೆ. ಪಶ್ಚಿಮ ಪಾಕಿಸ್ತಾನದ ಬಗ್ಗೆ ಹೇಳುವುದಾದರೆ, ಅದು, ಅಲ್ಲಿನ ಅಲ್ಪಸಂಖ್ಯಾರನ್ನು ಪೂರ್ತಿಯಾಗಿ ಹೊರಹಾಕಿರುವುದಾಗಿ ತೋರುತ್ತದೆ. ಕಳೆದ ಹದಿನೈದು ದಿನಗಳಲ್ಲಿ ಎರಡು ಹಡಗುಗಳ ತುಂಬಾ ಹಿಂದೂಗಳು ಸಿಂಧ್‌ನಿಂದ ಭಾರತಕ್ಕೆ ಬಂದಿದ್ದಾರೆ. ಅಲ್ಲಿ ಇನ್ನೂ ಎಷ್ಟು ಸಾವಿರ ಜನರಿದ್ದಾರೋ ನನಗೆ ಗೊತ್ತಿಲ್ಲ.

ಪೂರ್ವ ಪಾಕಿಸ್ತಾನದ ಬಗ್ಗೆ ಹೇಳುವುದಾದರೆ, ವಿಭಜನೆ ಸಮಯದಲ್ಲಿ ಸುಮಾರು ಒಂದು ಕೋಟಿ ನಲವತ್ತು ಲಕ್ಷ ಹಿಂದೂ ಅಲ್ಪ ಸಂಖ್ಯಾತರು ಅಲ್ಲಿದ್ದರು. ಸರ್ಕಾರದ ಅಂಕಿಗಳ ಪ್ರಕಾರ, ಕಳೆದ ಐದು ವರ್ಷಗಳಲ್ಲಿ ಸುಮಾರು ಮೂವತ್ತು ಲಕ್ಷ ಹಿಂದೂಗಳು ಹೊರ ಬಂದಿದ್ದಾರೆ. ಈ ಅಂಕಿಗಳು ನಿಖರವಾದವುಗಳೆಂಬುದನ್ನು ನಾವು ಒಪ್ಪುವುದಿಲ್ಲ.

---

* ಲೋಕ ಸಭಾ ಚರ್ಚೆಗಳು 15, ನವೆಂಬರ್ 1952. 596-619

ನಾನು ವಿವರಗಳಿಗೆ ಹೋಗುವುದಿಲ್ಲ ಪಾಕಿಸ್ತಾನ ಸರ್ಕಾರದ್ದೇ ಕಳೆದ ಜನಗಣತಿ ಅಂಕಿಗಳನ್ನು ನೋಡಿದರೆ ಸುಮಾರು 45 ಲಕ್ಷ ಹಿಂದೂಗಳು ಹೊರ ಬಂದಿದ್ದಾರೆಂದು ತೋರುತ್ತದೆ. ಏಕೆಂದರೆ, ಆ ಜನಗಣತಿ ಪ್ರಕಾರ, ಪೂರ್ವ ಬಂಗಾಳದಲ್ಲಿ ಸುಮಾರು 95 ಲಕ್ಷ ಹಿಂದೂ ಜನಸಂಖ್ಯೆ ಇತ್ತು.

ಈ ವಿಷಯದ ಮೇಲೆ ಭಾರತ ಮತ್ತು ಪಾಕಿಸ್ತಾನದ ನಡುವೆ ಒಂದೇ ಬಾರಿ ಅಲ್ಲ, ಎರಡು ಬಾರಿ ಅಲ್ಲ, ಮೂರು ಬಾರಿ ಒಪ್ಪಂದಗಳು, ಒಡಂಬಡಿಕೆಗಳು ಆಗಿವೆ. ಭಾರತ ಮತ್ತು ಪಾಕಿಸ್ತಾನದ ಪ್ರಧಾನ ಮಂತ್ರಿಗಳು ನಡುವೆ, ಯಾವ ಹೃದಯವಿದ್ರಾವಕ ಸನ್ನಿವೇಶಗಳಲ್ಲಿ 1950ರ ಏಪ್ರಿಲ್ 8 ರ ಒಪ್ಪಂದ ಆಯಿತೆಂಬುದು ನಮಗೆ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ನನ್ನ ಹಣೇ ಬರಹ, ನಾನು ಆ ಒಪ್ಪಂದವನ್ನು ವಿರೋಧಿಸ ಬೇಕಾಯಿತು. ಆ ಒಪ್ಪಂದದಲ್ಲಿ ಯಾವುದೂ ಒಳ್ಳೆಯದು ಇರಲಿಲ್ಲ ಅಂತಲ್ಲ ಆದರೆ, ರಕ್ತದ ಕೋಡಿ ಹರಿಯಲು ಕಾರಣರಾದವರಿಗೇ ಅಲ್ಪ ಸಂಖ್ಯಾತರ ಪಾಲನೆ, ಪೋಷಣೆ ಜವಾಬ್ದಾರಿಯನ್ನು ವಹಿಸುತ್ತಿದ್ದಾರಲ್ಲ ಎಂಬ ಕಾರಣಕ್ಕಾಗಿ ವಿರೋದಿಸಿದೆ. ಈ ವ್ಯವಸ್ಥೆ ಸಫಲರಾಗುವುದಿಲ್ಲವೆಂದು ಭಾವಿಸಿದ್ದೆ. ಆ ಒಪ್ಪಂದದಲ್ಲಿ ವಾಕ್ಯಗಳ ರಚನೆ ಎಷ್ಟೊಂದು ಸೊಗಸಾಗಿದೆ ? ಅದು ನನ್ನ ಬಳಿ ಇದೆ. ಅವನ್ನು ನಾನು ಪುನಃ ಓದ ಬಯಸುವುದಿಲ್ಲ. ಆದರೆ, ವ್ಯಕ್ತಪಡಿಸಿರುವ, ಸರಿಯಾಗಿಯೇ ವ್ಯಕ್ತಪಡಿಸಿರುವ ಆ ಎಲ್ಲಾ ಉದಾತ್ತ ಭಾವನೆಗಳಲ್ಲಿ ಒಂದೂ ಈಡೇರಿಲ್ಲ. ಕಟ್ಟಕಡೆಗೆ, ಪಾಕಿಸ್ತಾನದಿಂದ ಏನನ್ನು ಕೇಳಿದ್ದೆವು ? ಅಸಹಜವಾದದ್ದನ್ನು ಅಥವಾ ಅಪೂರ್ವವಾದದ್ದನ್ನು ಕೇಳಿರಲಿಲ್ಲ. ಸಭ್ಯ ದೇಶವಾಗಿ ವರ್ತಿಸಬೇಕು ಮತ್ತು ಅಲ್ಲಿನ ಅಲ್ಪಸಂಖ್ಯಾತರನ್ನು ಸರಿಯಾಗಿ ನೋಡಿಕೊಳ್ಳಬೇಕು ಎಂದಷ್ಟೇ ಕೇಳಿದ್ದೆವು. ಆದರೆ, ಆ ಸಂದರ್ಭದಲ್ಲಿ, ಅಲಂಕಾರ ತುಂಬಿದ ಭಾಷೆಯ ಆ ಒಪ್ಪಂದ ಆಗಿದ್ದರೂ, ಕಳೆದ ಎರಡೂವರೆ ವರ್ಷಗಳಲ್ಲಿ ಪಾಕಿಸ್ತಾನವು ಆ ಒಪ್ಪಂದದ ಮೂಲ ತತ್ವಗಳನ್ನೇ ಉಲ್ಲಂಘಿಸಿದೆ. ಕಳೆದ ಕೆಲವು ತಿಂಗಳಲ್ಲಿ ಇನ್ನೊಂದು ವ್ಯಾಪಕ ಪ್ರಮಾಣದ ವಲಸೆಯನ್ನು ನಾವು ನೋಡಿದ್ದೇವೆ.

ಇಲ್ಲಿ ನಾನು ತೀರಾ ಮುಖ್ಯವಾದ ಒಂದು ಅಂಶಕ್ಕೆ ಒತ್ತು ಕೊಡಬಯಸುತ್ತೇನೆ. ದೊಡ್ಡ ಪ್ರಮಾಣದಲ್ಲಿ ಜನರು ವಲಸೆ ಬಂದಾಗ ಮಾತ್ರವೇ ಸಾರ್ವಜನಿಕ ಅಭಿಪ್ರಾಯದ ಮಳೆ ಭೋರ್ಗರೆಯುತ್ತದೆ. ಸಂಕಟ, ಅವಮಾನ, ದುರವಸ್ಥೆ ಅಪಮಾನದ ಗೋಳನ್ನು ಹೊತ್ತು ನೂರಾರು, ಸಾವಿರಾರು, ಲಕ್ಷಗಟ್ಟಲೆ ಜನ ಬಂದಾಗ ಮಾತ್ರವೇ ಸಾರ್ವಜನಿಕ ಅಭಿಪ್ರಾಯ ತುಂಬಿ ತುಳುಕಾಡುತ್ತದೆ, ಸರ್ಕಾರ ತಾನೇ ತಾನಾಗಿ ವಿಷಯವನ್ನು ಪರಿಶೀಲಿಸಲು ಮುಂದಾಗುತ್ತದೆ. ಆದರೆ, ವಲಸೆ ದೊಡ್ಡ ಪ್ರಮಾಣದ್ದಲ್ಲದಿದ್ದರೆ, ಅತ್ಯಲ್ಪ ಪ್ರಮಾಣದ್ದಾಗಿದ್ದರೆ, ಆಗ, ಅದಕ್ಕೆ ಸಾಕಷ್ಟು ಗಮನ ಕೊಡುವುದೇ ಇಲ್ಲ ಪೂರ್ವ ಪಾಕಿಸ್ತಾನದಲ್ಲಿ ಬಹುಷಃ ಎಲ್ಲವೂ ಸರಿಯಾಗಿದೆ ಎಂದು ಭಾವಿಸಿ ವಿಷಯವನ್ನು ಸಮಾಪ್ತಿಗೊಳಿಸಲು ಹವಣಿಸಲಾಗುತ್ತದೆ.

ಕೇವಲ ಅಂಕಿಗಳ ದೃಷ್ಟಿಯಿಂದಲೇ - ನಾನು ಅಂಕಿಗಳ ಮಹತ್ತ್ವವನ್ನು ಕಡೆಗಣಿಸುತ್ತಿಲ್ಲ ನೋಡುವುದು ಸರಿಯಾದ ರೀತಿಯಲ್ಲ, ಸಮಸ್ಯೆಯನ್ನು ಮಾನವತೆ ದೃಷ್ಟಿಯಿಂದಲೂ ನೋಡಬೇಕು ಮತ್ತು ಈ ಜನರು ಪೂರ್ವ ಬಂಗಾಳದಲ್ಲಿ ಹೇಗೆ ಬದುಕುತ್ತಿದ್ದಾರೆ ಒಪ್ಪಿಕೊಳ್ಳಬೇಕೆಂದು ಅವರುಗಳ ಮೇಲೆ ಯಾವ ನಿಬಂಧನೆಗಳನ್ನು ಹೇರಲಾಗುತ್ತಿದ್ದೆ, ಆದರಲ್ಲೂ ಅಲ್ಪ ಸಂಖ್ಯಾತರು ಅಲ್ಲಿ ನಿಜವಾಗಿಯೂ ಬದುಕಬಲ್ಲರೇ, ಬದುಕಲಾರರೇ ಎಂಬುದನ್ನು ಕಂಡುಕೊಳ್ಳುವಂತೆ ನಮ್ಮಲ್ಲಿ ಅನೇಕರು ಕಳೆದ ಎರಡೂವರೆ ವರ್ಷಗಳಿಂದಲೂ ಪದೇ ಪದೇ ಹೇಳುತ್ತಲೇ ಇದ್ದೇವೆ. ಆದರೆ ದುರಾದೃಷ್ಟವಶಾತ್, ಕಾರಣಗಳೇನೇ ಇರಲಿ, - ಆಡಳಿತ ವ್ಯವಸ್ಥೆ ಇಲ್ಲದ್ದರಿಂದಲೂ ಅಥವಾ ಪಾಕಿಸ್ತಾನದಿಂದ ಸಹಕಾರ ಸಿಕ್ಕದ್ದರಿಂದಲೋ - ಅಂಥ ಮಾಹಿತಿ ಯಾವಾಗಲೂ ಸಿಕ್ಕಿಯೇ ಇಲ್ಲ.

ಒಂದು ಅಂಶವನ್ನು ಈ ಸದನ ಮನಸ್ಸಿಗೆ ತಂದುಕೊಳ್ಳಬೇಕೆಂದು ನಾನು ಹೇಳಬಯಸುತ್ತೇನೆ. ಈಗ ಹೊರಬರುತ್ತಿರುವ ಈ ಎಲ್ಲ ನತದೃಷ್ಟ ಜನರು, ಗೋಳುಗಳೇನೇ ಇದ್ದರೂ, ಪೂರ್ವ ಪಾಕಿಸ್ತಾನದಲ್ಲೇ ಇರಲು ನಿರ್ಧರಿಸಿದ್ದಾರೆ. ಕೆಲವು ತಿಂಗಳುಗಳಲ್ಲೇ ಸುಮಾರು 50,000 ದಷ್ಟು ಜನರು ಕೊಲೆಗೀಡಾದ ಹಾಗೂ ಆ ರಾಜ್ಯದ ಅಧಿಕಾರಿ ವರ್ಗದ ಪರೋಕ್ಷ ಸಮ್ಮತಿಯಿಂದ, ಸರಿ ಸಾಟಿಯಿಲ್ಲದ ಅಮಾನುಷ ಕ್ರೌರ್ಯ ನಡೆದ, 1950ರ ಆ ದುರಂತಮಯ ವಿದ್ಯಮಾನಗಳು ಸಂಭವಿಸಿದರೂ ಅವರುಗಳು ಆ ನಿರ್ಧಾರ ತೆಗೆದುಕೊಂಡಿದ್ದಾರೆ. ಅಂಥದ್ದೆಲ್ಲಾ ಆದರೂ, ಈ ಜನರು ಅಲ್ಲಿರಲು ನಿರ್ಧರಿಸಿದ್ದಾರೆ. ತನ್ನ ಮನೆ, ತನ್ನ ಜಾಗವನ್ನು ಯಾವ ನಿರೀಕ್ಷೆ ಹೊತ್ತು ಯಾರು ಬಿಟ್ಟು ಬಯಸುತ್ತಾರೆ? ನಾವು ಅವರ ಬಾಗಿಲಿಗೆ ತೆರೆದಿದ್ದೇವೆ, ನಿಜ. ಆದರೆ, ಪುನರ್ ವಸತಿ ಕಾರ್ಯ ಎಷ್ಟೊಂದು ಕಷ್ಟ ಎಂಬುದು ನಮಗೆ ಗೊತ್ತಿದೆ. ಮಾನವ ಕುಲವೇ ಬೇರು ಸಹಿತ ಕಿತ್ತು ಬಂದಾಗ, ಒಟ್ಟಾರೆ ಬೇರೇ ಬೇರೆಯದೇ ಆದ ಪರಿಸ್ಥಿತಿಗಳಿರುವಂಥ ಜಾಗಗಳಲ್ಲಿ ಅದನ್ನು ನೆಲೆ ಗೊಳಿಸುವುದು ಅಷ್ಟೋಂದು ಸುಲಭ ಅಲ್ಲ.

ಕಳೆದ ಕೆಲವು ತಿಂಗಳುಗಳಲ್ಲಿ, ಸರ್ಕಾರದ ಪ್ರಕಾರ, ಸುಮಾರು ಮೂರು ಲಕ್ಷ ಜನರು, ಆದರೆ, ನಮ್ಮ ಪ್ರಕಾರ, ಕೊನೆಪಕ್ಷ ಅದರ ಎರಡರಷ್ಟು ಜನರು ಬಲವಂತದಿಂದ ಹೊರಬಂದಿದ್ದಾರೆ. ಅಷ್ಟೊಂದು ಸಂಖ್ಯೆ ಜನರು ಹೊರಬರುವುದಕ್ಕೆ ಕಾರಣವಾದ ಬಲವಂತದ ಸನ್ನಿವೇಶಗಳನ್ನು ನಾವು ಸುಲಭವಾಗಿ ಊಹಿಸಬಹುದು.

ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹಬ್ಬುತ್ತಿರುವ ಈ ವಿದ್ಯಾಮಾನಕ್ಕೆ ಮೂಲ ಕಾರಣಗಳು ಯಾವುವು? ಮೊಟ್ಟಮೊದಲನೆಯದಾಗಿ, ನಮ್ಮ ತಿಳಿವಳಿಕೆ ಪ್ರಕಾರ, ಪಾಕಿಸ್ತಾನ ರಾಷ್ಟ್ರದ ಪರಿಕಲ್ಪನೆ. ಹಿಂದೂಗಳ ಬಗ್ಗೆ, ಭಾರತದ ಬಗ್ಗೆ ಇದ್ದ ದ್ವೇಷದಿಂದ ಪಾಕಿಸ್ತಾನ ಹುಟ್ಟಿದೆ. ಭಾರತದೊಂದಿಗೆ ಸೌಹಾರ್ದ ಸಂಬಂಧ ಇಟ್ಟುಕೊಂಡು, ಪಾಕಿಸ್ತಾನದ ಸಂಸ್ಥಾಪಕರು

ತಮ್ಮ ದೇಶದ ಅಭಿವೃದ್ಧಿ ಬಗ್ಗೆ ಚಿಂತಿಸುತ್ತಾರೆ, ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ ಎಂದು ಭಾವಿಸಲಾಗಿತ್ತು. ಆದರೆ, ಆ ನಿರೀಕ್ಷೆಗಳು ಹುಸಿಯಾಗಿವೆ. ಸಣ್ಣ ಇಸ್ಲಾಮಿಕ್ ರಾಷ್ಟ್ರದ ರಚನೆಯೇ ಪಾಕಿಸ್ತಾನದ ಸಂಸ್ಥಾಪಕನ ಮುಖ್ಯ ಧ್ಯೇಯವಾಗಿತ್ತು. ಅವರ ಉತ್ತರಾಧಿಕಾರಿಗಳಾದವರು, ಪ್ರತಿಯೊಂದು ಅವಕಾಶವನ್ನು ಕಳೆದುಕೊಳ್ಳದೆ ಆ ಆದರ್ಶವನ್ನು ಸಾಕಾರಗೊಳಿಸಿದ್ದಾರೆ. ಹಿಂದೂಗಳನ್ನು ಅವರ ಪ್ರತಿಯೊಂದು ಹಕ್ಕಿನಿಂದ - ಸಾಮಾಜಿಕ, ರಾಜಕೀಯ, ಆರ್ಥಿಕ ಧಾರ್ಮಿಕ ಹಾಗೂ ರಾಜಕೀಯ - ವಂಚಿಸಿದ್ದಾರೆ ಅವರನ್ನು 'ಜಿಮ್ಮಿ'ಗಳೆಂದು ಪರಿಗಣಿಸಿದ್ದಾರೆ.

ಎರಡನೆಯದಾಗಿ, ಅಲ್ಪಸಂಖ್ಯಾತರನ್ನು ಹೊರಹಾಕುವ - ಒಟ್ಟೊಟ್ಟಾಗಿ ಹೋಗುವಂತೆ ಮಾಡುವುದಿಲ್ಲ, ಹೊರ ಹಾಕುವ - ನೀತಿಯ ವಿಷಯ. ನಾನು ಈ ವಿಷಯವನ್ನು ಹೇಳಲೇಬೇಕಾಗಿದೆ. ಏಕೆಂದರೆ, ತನ್ನಲ್ಲಿರುವ ಅಲ್ಪಸಂಖ್ಯೆತರನ್ನು ಹೊರಹಾಕುವುದೇ ಪಾಕಿಸ್ತಾನದ ಅಧಿಕಾರಿಗಳ ನೀತಿಯಾದರೆ, ರಹದಾರಿ ಪತ್ರ ಪಡೆದೇ ಹೆಚ್ಚು ಜನರು ಏಕೆ ಬರುತ್ತಿಲ್ಲ? ಬಹು ಸಂಖ್ಯೆ ಜನರು ಬರುವುದನ್ನು ಪಾಕಿಸ್ತಾನ ಏಕೆ ತಡೆಯಬೇಕು? ಆದ್ದರಿಂದ, ಅದು ಹೊರಹಾಕುವುದೇ ಹೊರತು ಒಟ್ಟೊಟ್ಟಾಗಿ ಬರುವುದಲ್ಲ. ಕಾರಣ ಏನೆಂದರೆ, ಒಂದು ಸಲಕ್ಕೆ ಅಷ್ಟೊಂದು ಭಾರಿ ಸಂಖ್ಯೆಯಲ್ಲಿ ಜನ ಬಂದು ಬಿಟ್ಟರೆ ತಕ್ಷಣವೇ ಭಾರತದಲ್ಲಿ ಪ್ರತಿಕ್ರಿಯೆ, ಟೀಕೆಗಳು ಶುರು ಆಗುತ್ತದೆ, ಆದ್ದರಿಂದ ಪಾಕಿಸ್ತಾನಕ್ಕೆ ತೀರಾ ಅಹಿತಕರವಾದ ಪರಿಸ್ಥಿತಿ ತಲೆದೋರುತ್ತದೆ.

ಮೂರನೆಯದಾಗಿ, ಸನ್ಮಾನ್ಯರೇ, ಗುರಿ ಹಿಂದೂ ಅಲ್ಪ ಸಂಖ್ಯಾತರ ಮೇಲಷ್ಟೇ ಇಲ್ಲ. ಅದು ಯಾವುದೋ ಒಂದರ ಸೂಚನೆ. ಈ ಬೃಹತ್ ಸಮಸ್ಯೆಯನ್ನು ಪರಿಶೀಲಿಸುವಾಗ ನಾವು ಅದನ್ನು ಮರೆಯಬಾರದು. ಜನತಂತ್ರದ ವಿಚಾರಗಳನ್ನು ವ್ಯಕ್ತಪಡಿಸುವ ಅಥವಾ ನಿಜವಾದ ಸ್ವಾತಂತ್ರ್ಯಕ್ಕೆ ನಿಷ್ಠೆಯಿಂದಿರುವ ಯಾವುದೇ ಪ್ರಯತ್ನ ಆಗದಂತೆ ಮಾಡುವ ರೀತಿಯಲ್ಲಿ, ಇಂದು ಅಲ್ಲಿನ ಅಧಿಕಾರಿಗಳು ಕೆಲಸ ಮಾಡುತ್ತಿದ್ದಾರೆ. ಮಹಾನ್ ನಾಯಕ ಖಾನ್ ಅಬ್ದುಲ್ ಗಫಾರ್ ಖಾನ್ ಅವರು ಇನ್ನೂ ಸ್ಥಾನಬದ್ಧತೆಯಲ್ಲಿರುವುದಕ್ಕೆ ಅಥವಾ ಅವರ ಅನುಯಾಯಿಗಳು, ಅವರುಗಳು ಮುಸ್ಲಿಮರಾಗಿದ್ದರೂ, ಪಾಕಿಸ್ತಾನದ ಜೈಲಿನಲ್ಲಿ ಕೊಳೆಯುತ್ತಿರುವುದಕ್ಕೆ ನಾವೇನು ಹೇಳಲು ಸಾಧ್ಯ? ಅವರುಗಳ ಮೇಲೆ ಕೇವಲ ಒಂದು ವಾರದ ಹಿಂದೆ, ವಾಯುವ್ಯ ಗಡಿನಾಡು ಪ್ರಾಂತ್ಯದ ಮುಖ್ಯ ಮಂತ್ರಿಯು, ಅವರೆಲ್ಲಾ ಭಾರತದ ಗೂಢಾಚಾರರು ಮತ್ತು ಸ್ನೇಹಿತರು ಅವರನ್ನು ನಂಬುವಂತಿಲ್ಲ ಎಂಬ ಆರೋಪ ಮಾಡಿದ್ದಾರೆ, ಇತ್ತೀಚೆಗೆ ಪೂರ್ವ ಬಂಗಾಳದಲ್ಲಿ ಭಾಷಾ ಸಮಸ್ಯೆ ತಲೆದೋರಿದಾಗ, ತಮ್ಮದೇ ಮಾತೃಭಾಷೆಗೆ ಮನ್ನಣೆ ಕೊಡಬೇಕೆಂದು ಮತ್ತು ಸಂರಕ್ಷಿಸಬೇಕೆಂದು ಬಂದೂಕುಗಳನ್ನು ಎದುರಿಸುವ ಎದೆಗಾರಿಕೆ ತೋರಿದ ಸುಮಾರು 18 ಜನ ಮುಸ್ಲಿಂ ವಿದ್ಯಾರ್ಥಿಗಳಿಗೆ, ಹಿಂಭಾಗಕ್ಕಲ್ಲ,

ಎದೆಗೇ ಗುಂಡು ಹಾರಿಸಿದ್ದಕ್ಕೆ ನಾವೇನು ಹೇಳಲು ಸಾಧ್ಯ? ಆ ಸೂಚನೆಗಳು ಸಹ ಅಲ್ಲಿವೆ. ಈ ಸಮಸ್ಯೆಗೆ ಅಂತಿಮ ಪರಿಹಾರ ಕಂಡುಕೊಳ್ಳಲು ನಮಗೆ ನಿಜವಾಗಿಯೂ ಕಾತುರ ಇದ್ದರೆ ಈ ಎಲ್ಲ ಅಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕಾಗುತ್ತದೆ.

ಸುಮಾರು ನಾಲ್ಕು ತಿಂಗಳ ಹಿಂದೆ ಅಂಕಿಗಳ ಪರಿಗಣನೆ ವಿಷಯದಲ್ಲಿ ಪ್ರಧಾನ ಮಂತ್ರಿಗಳು ತಪ್ಪು ದೃಷ್ಟಿಕೋನವನ್ನು ನಾನು ಎತ್ತಿ ತೋರಿಸಿದಾಗ ಅವರು ಸಿಟ್ಟಿಗೆದ್ದಿದ್ದರು. ಅಂಕಿಗಳನ್ನು ಒದಗಿಸುವಂತೆ ನನಗೆ ಸವಾಲು ಹಾಕಿದ್ದರು. ಇದು ಸವಾಲಿನ ಅಥವಾ ಪ್ರತಿ ಸವಾಲಿನ ವಿಷಯ ಅಲ್ಲ. ಇಡೀ ಸಮಸ್ಯೆಯನ್ನು ತಪ್ಪು ವಿಧಾನದಿಂದ ನೋಡುವುದನ್ನು ಕೈಬಿಡಬೇಕೆಂದು ನಾನು ಅವರಿಗೆ ಮನವಿ ಮಾಡಿಕೊಳ್ಳುತ್ತೇನೆ. ಅಂಕಿಗಳು ಯಾವುವು? ಅವು ಒಂದು ದೇಶದಿಂದ, ಇನ್ನೊಂದು ದೇಶಕ್ಕೆ ಜನ ವಲಸೆ ಹೋಗುತ್ತಿರುವುದಕ್ಕೆ ಸಂಬಂಧಿಸಿದ ಅಂಕಿಗಳೆಂದು ಹೇಳಲಾಗಿದೆ. ಅವುಗಳನ್ನು ಹೇಗೆ ಪಡೆಯಲಾಗುತ್ತದೆ? ಪಾಕಿಸ್ತಾನದಿಂದ ಬರುವ ಅಥವಾ ಪಾಕಿಸ್ತಾನಕ್ಕೆ ಹೋಗುವ ಪ್ರತಿಯೊಬ್ಬ ವ್ಯಕ್ತಿಯ ಮೇಲೂ ಇವನು ಹಿಂದೂ ಅಥವಾ ಇವರೂ ಮುಸ್ಲಿಂ ಎನ್ನುವುದನ್ನು ತೋರಿಸುವ ದೋಭಿ ಗುರುತು ಇರುವುದಿಲ್ಲ. ಆದರೆ, ಕೆಲವೊಂದು ರೀತಿಯ ಕಟ್ಟುನಿಟ್ಟಿಲ್ಲದ ಮತ್ತು ಸಿದ್ಧವಿಧಾನವನ್ನು ಅನುಸರಿಸಲಾಗುತ್ತಿದೆ ಹಾಗೂ ವಲಸಿಗರ ಕೋಮು ವರ್ಗೀಕರಣ ಮಾಡಲಾಗುತ್ತಿದೆ. ಕೇವಲ ಎರಡು ರೈಲ್ವೆ ನಿಲ್ದಾಣಗಳಲ್ಲಿ ಎಣಿಕೆ ಮಾಡಲಾಗುತ್ತಿದೆ. ಪಶ್ಚಿಮ ಬಂಗಾಳ ಮತ್ತು ಪೂರ್ವ ಬಂಗಾಳದ ನಡುವಣ 700 ಮೈಲಿ ಉದ್ದದ ಗಡಿಯನ್ನು ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಆದ್ದರಿಂದ, ಸರ್ಕಾರವು ಮೂಲತಃ ಈ ಅಂಕಿಗಳನ್ನು ಆಧಾರವಾಗಿ ತೆಗೆದುಕೊಳ್ಳುವುದನ್ನು ಹಾಗೂ ತನ್ನ ತಪ್ಪು ನೀತಿಯನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸುವುದನ್ನು ನೋಡಿದರೆ, ಸನ್ಮಾನ್ಯರೇ, ಸರ್ಕಾರವು, ತನಗೇ ಶೋಭೆ ತರದಂತಹ ಅಷ್ಟೇ ಅಲ್ಲ, ಬಹು ಜನರಿಗೆ ನ್ಯಾಯೋಚಿತವಲ್ಲದ ಏನನ್ನೋ ಮಾಡುತ್ತಿದೆಯೆಂದು ನಾನು ಹೇಳಲೇಬೇಕಾಗಿದೆ. ಸಮಸ್ಯೆಯನ್ನು ತಿಳಿದುಕೊಳ್ಳಲು ಇರುವ ಒಂದೇ ಒಂದು ಮಾರ್ಗವೆಂದರೇ ಪೂರ್ವ ಪಾಕಿಸ್ತಾನದಲ್ಲಿನ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕು. ಈ ಸದನವನ್ನು, ಸ್ವತಂತ್ರ ಭಾರತದ 360 ಮಿನಿಯನ್ ಜನರ ಪ್ರತಿನಿಧಿಗಳನ್ನು ನಾನು, ಈಗಿನ ಪರಿಸ್ಥಿತಿಗಳಲ್ಲಿ ಅಲ್ಪ ಸಂಖ್ಯಾತರು ಪೂರ್ವ ಪಾಕಿಸ್ತಾನದಲ್ಲಿ ಬದುಕಬಲ್ಲರೇ - ಅದೇ ಮೂಲಭೂತ ಪ್ರಶ್ನೆ - ಎಂಬುದನ್ನು ನಿರ್ಧರಿಸಬೇಕೆಂದು ಮತ್ತು ಸಾಧ್ಯವೇ ಇಲ್ಲ ಎಂಬ ನಿಧಾರಕ್ಕೆ ಅವರು ಬಂದರೆ, ಭಾರತದ ಸ್ವತಂತ್ರ ಸರ್ಕಾರವು ಆ ನತದೃಷ್ಟರ ಸಂರಕ್ಷಣೆಗೆ ಯಾವುದೇ ಪರಿಣಾಮಕಾರೀ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಆಗುತ್ತದೆಯೋ ಎಂಬುದನ್ನು ನಿರ್ಧರಿಸಬೇಕೆಂದು ಕೇಳಿಕೊಳ್ಳಬಯಸುತ್ತೇನೆ.

ಈ ದೇಶದ ವಿಭಜನೆಯ ಇತಿಹಾಸದ ವಿವರಗಳನ್ನು ನಾನು ಹೇಳಬೇಕಾದ ಅಗತ್ಯವೇನಿಲ್ಲ. ಈ ಸದನದ ಎಲ್ಲ ಸದಸ್ಯರುಗಳಿಗೆ ಅದು ಚೆನ್ನಾಗಿ ಗೊತ್ತಿಗೆ. ಆದರೆ, ಒಂದು ಮೂಲಭೂತ ಅಂಶವನ್ನು ಈಗ ನೆನಪಿಗೆ ತಂದುಕೊಳ್ಳಬೇಕಿದೆ. ಭಾರತದ ವಿಭಜನೆಗೆ ಯಾವುದು ಆಧಾರವಾಗಿತ್ತು? ಸಂದರ್ಭಗಳು, ಸನ್ನಿವೇಶಗಳು ಏನೇ ಇದ್ದರೂ, ಭಾರತದ ವಿಭಜನೆ ಆಗಕೂಡದೆಂದು ವಿರೋಧಿಸಿದವರಲ್ಲಿ ನಾನೂ ಒಬ್ಬ. ಭಾರತದ ವಿಭಜನೆಯ ಅನಿವಾರ್ಯವೆಂಬ ನಿರ್ಧಾರ ಆದ ಮೇಲೆ ಮಾತ್ರವೇ ನಾನು ಬಂಗಾಳದ ವಿಭಜನೆಯನ್ನು ಮತ್ತು ಪಂಜಾಬ್ ವಿಭಜನೆಯನ್ನು ಬೆಂಬಲಿಸಿದೆ. ಏಕೆಂದರೆ ಇಡೀ ಬಂಗಾಳ ಮತ್ತು ಇಡೀ ಪಂಜಾಬು ಪಾಕಿಸ್ತಾನಕ್ಕೆ ಸೇರಬೇಕೆಂಬುದು ಶ್ರೀ ಜಿನ್ನಾರ ಆಗಿನ ಬೇಡಿಕೆಯಾಗಿತ್ತು. ಆಗ ನಾವೇನು ಮಾಡಿದೆವೆಂದರೆ, ಭಾರತದ ವಿಭಜನೆಗೆ ಒಪ್ಪಲಿಲ್ಲ. ಬದಲಿಗೆ, ಪಾಕಿಸ್ತಾನವೇ ವಿಭಜನೆ ಆಗುವುದಕ್ಕೆ ಅನುವು ಮಾಡಿಕೊಟ್ಟ ಚಳುವಳಿಗೆ ಬೆಂಬಲ ನೀಡಿದೆವು. ಆ ಸಮಯದಲ್ಲಿ ಅನೇಕ ಕಾಂಗ್ರೆಸ್ ನಾಯಕರು, ಅದರಲ್ಲೂ ಮುಖ್ಯವಾಗಿ ಗಾಂಧೀಜಿಯವರು ಹಾಗೂ ನಮ್ಮಲ್ಲಿ ಕೆಲವರು ಜಿನ್ನಾರನ್ನು, ನಿಮ್ಮ ಹೊಸ ರಾಷ್ಟ್ರವು ಜನ್ಮ ತಾಳಲು ಕಾರಣವಾದ ಸನ್ನಿವೇಶಗಳನ್ನು ಪರಿಗಣನೆಗೆ ತೆಗೆದುಕೊಂಡರೆ, ಪಾಕಿಸ್ತಾನದಲ್ಲಿ ಅಲ್ಪ ಸಂಖ್ಯಾತರು ಬಾಳಲು ಆಗುತ್ತದೆಯೇ ಎಂಬ ಕಟು ಸತ್ಯವನ್ನು ಅರ್ಥ ಮಾಡಿಕೊಳ್ಳಿ ಎಂದು ಗೋಗರೆದದ್ದು ನನಗೆ ಜ್ಞಾಪಕವಿದೆ. ವಿಭಜನೆ ವ್ಯವಸ್ಥೆಯ ಒಂದು ಅಂಗವಾಗಿ ಸರ್ಕಾರಗಳ ಮಟ್ಟದಲ್ಲಿ ಜನರ ಮತ್ತು ಆಸ್ತಿಪಾಸ್ತಿಯ ವ್ಯವಸ್ಥಿತ ವಿನಿಮಯಕ್ಕೆ ನಾವು ಸಲಹೆ ಮಾಡಿದ್ದೆವು. ಅದನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಏಕೆಂದರೆ, ನಾವು ಭಾರತದ ಕ್ಷೇತ್ರ ವಿಭಜನೆಗೆ ಒಪ್ಪಿಕೊಳ್ಳುತ್ತಿದ್ದೇವೆಯೇ ಹೊರತು ಭಾರತದ ಜನಾಂಗ ವಿಭಜನೆಯನ್ನಲ್ಲ ಎಂಬುದ ಆ ನಾಯಕರ ಅಭಿಪ್ರಾಯವಾಗಿತ್ತು. ಹೊಸ ಭಾರತದಿಂದಾಗಲೀ ಅಥವಾ ಪಾಕಿಸ್ತಾನವೆಂದು ಕರೆಯಲಾಗುವ ಹೊಸ ದೇಶದಿಂದಾಗಲೀ ತಮ್ಮ ತಮ್ಮ ಮನೆಬಾಗಿಲು ಬಿಟ್ಟು ಹೋಗಬೇಕೆಂದು ಅಲ್ಪ ಸಂಖ್ಯಾತರನ್ನು ಬಲಾತ್ಕರಿಸುವ ಸಂದರ್ಭವೇ ಉಂಟಾಗದೆಂಬ ತಮ್ಮ ಅಭಿಪ್ರಾಯಕ್ಕೆ ಆ ನಾಯಕರು ಅಂಟಿಕೊಂಡಿದ್ದರು. ಪೂರ್ವ ಬಂಗಾಳದ ಈ ಜನರ ಜೊತೆ ಪ್ರಮಾಣ ಮಾಡಬೇಕಾಗಿ ಬಂದ ಸಂದರ್ಭದಲ್ಲಿ ಈ ಕಾಂಗ್ರೆಸ್ ನಾಯಕರುಗಳ ಸಂದೇಶವನ್ನು ಈ ಜನರಿಗೆ ತಿಳಿಸಿದ್ದೆ. ಅವರಲ್ಲೊಬ್ಬರು ಇಂದು ಪ್ರಧಾನಮಂತ್ರಿ ಸ್ಥಾನವನ್ನು ಅಲಂಕರಿಸಿದ್ದಾರೆ. ಆ ಜನರನ್ನು ಮರೆಯುವುದಿಲ್ಲ, ಪಾಕಿಸ್ತಾನದಲ್ಲಿರುವ ಅಲ್ಪ ಸಂಖ್ಯಾತರಿಗೆ ರಕ್ಷಣೆ ಕೊಡುವ ಅಗತ್ಯದ ಅವಶ್ಯಕತೆ ಉದ್ಭವಿಸುವುದಿಲ್ಲವೆಂಬ ನಂಬಿಕೆಯಿಂದ ಒಂದು ವೇಳೆ ಅಂಥದ್ದೇನಾದರೂ ಪರಿಸ್ಥಿತಿ ತಲೆದೋರಿದರೆ, ಸ್ವತಂತ್ರ ಭಾರತ ಸುಮ್ಮನಿರುವುದಿಲ್ಲ ರಕ್ಷಣೆ ಕೊಡುತ್ತದೆ ಎಂಬ ಆಶ್ವಾಸನೆಯನ್ನು ಆ ಜನರಿಗೆ ಕೊಡಲಾಗಿತ್ತು. ಇಲ್ಲಿ ಒಂದು ಮೂಲಭೂತ ಅಂಶವನ್ನು ಭಾರತ ಮರೆಯುವಂತಿಲ್ಲ. ಹಿಂದೂ, ಸಿಖ್, ಮುಸ್ಲಿಂ ಅಲ್ಲದವರು

ಕೂಡ ಭಾರತದ ವಿಭಜನೆಯನ್ನು ಬಯಸಿರಲಿಲ್ಲ. ಮುಸ್ಲಿಂ ಲೀಗಿನ ಆದೇಶಗಳನ್ನು ಅನುಸರಿಸಿದ ಮುಸ್ಲಿಮರ ಒಂದು ದೊಡ್ಡ ಭಾಗ, ಭಾರತದ ವಿಭಜನೆ ಬೇಡಿಕೆಯನ್ನು ಮುಂದಿಟ್ಟಿತ್ತು. ಅಖಂಡ ಭಾರತದ ಸ್ವಾತಂತ್ರ್ಯಕ್ಕಾಗಿ ಬಹಳ ಶ್ರಮಪಟ್ಟಿನುವ ರಕ್ತಸುರಿಸಿದ, ಅಮೂಲ್ಯವಾದ ತಮ್ಮದ್ದೆಲ್ಲವನ್ನೂ ತ್ಯಾಗ ಮಾಡಿದ ಅಲ್ಪ ಸಂಖ್ಯಾತರನ್ನು ಭಾರತಕ್ಕೆ ಅನ್ಯವಾದ ದೇಶದಲ್ಲಿ ಬಾಳಬೇಕೆಂದು ಹೇಳುವುದೂ ಒಂದೇ, ತುಂಬಾ ಅಮೂಲ್ಯವಾದ ತಮ್ಮದ್ದನ್ನು ತ್ಯಾಗ ಮಾಡಿ ಎಂದು ಹೇಳುವುದೂ ಒಂದೇ. ಆ ತ್ಯಾಗವನ್ನು ನಾಯಕರುಗಳು, ಪಂಡಿತ್ ಜವಹರಲಾಲ್ ನೆಹರೂರವರು ಮನಸಾರೆ ಹೊಗಳಿದ್ದಾರೆ. ಪಾಕಿಸ್ತಾನದಲ್ಲಿರುವ ಹಿಂದೂಗಳನ್ನು, ಪಾಕಿಸ್ತಾನದಲ್ಲಿರುವ ಅಲ್ಪ ಸಂಖ್ಯಾತರನ್ನು ಕುರಿತು ಆಗಸ್ಟ್ 15 ರಂದು ಪಂಡಿತ್ ಜವಹರಲಾಲ್ ನೆಹರೂರವರು ಇತ್ತ ಹೇಳಿಕೆಯಿಂದ ಒಂದೇ ಒಂದು ವಾಕ್ಯವನ್ನು ನಾನು ಓದಿ ಹೇಳುತ್ತೇನೆ.

> "ಯಾರು ರಾಜಕೀಯ ಗಡಿಗಳಾಚೆ ಇದ್ದಾರೋ, ಯಾರು ದುರಾದೃಷ್ಟದಿಂದ, ಸ್ವಾತಂತ್ರ್ಯದಲ್ಲಿ ಸದ್ಯ ಭಾಗಿಗಳಾಗಲು ಸಾಧ್ಯವಾಗಿಲ್ಲವೋ ಅವರೆಲ್ಲರೂ ನಮ್ಮ ಸಹೋದರ, ಸಹೋದರಿಯರು. ಅವರೆಲ್ಲರೂ ನಮ್ಮವರೇ, ಎಂದೆಂದಿಗೂ ನಮ್ಮವರೇ, ಮುಂದೇ ಏನೇ ಆಗಲಿ, ಕಷ್ಟ ಸುಖಗಳೆರಡರಲ್ಲೂ ನಾವು ಭಾಗಿಗಳಾಗುತ್ತೇವೆ."

ಈಗ, ನಾನು ಭಾರತದ ಪ್ರಧಾನ ಮಂತ್ರಿಗಳಾಗಿರುವ ಪಂಡಿತ್ ಜವಾಹರಲಾಲ್ ನೆಹರೂರವರನ್ನು, ತಮ್ಮ ತಾಯ್ನಾಡಿನ ವಿಮೋಚನೆಗೆ, ಅವರೊಂದಿಗೆ ಹಾಗೂ ಅವರಂಥ ಇತರರೊಂದಿಗೆ ಶ್ರಮಪಟ್ಟವರಿಗೆ ಅವರು ಯಾವ ಉದಾತ್ತ ಶಬ್ದಗಳಲ್ಲಿ ಯಾವ ವಾಗ್ದಾನ ಕೊಟ್ಟಿದ್ದಾರೋ ಅವನ್ನೇ ಈಗ ಈಡೇರಿಸಬೇಕೆಂದು ಕೇಳುತ್ತಿದ್ದೇನೆ. ಅದೇ ಬಗೆಯ ಸಂದೇಶ ಸರ್ದಾರ್ ವಲ್ಲಭಭಾಯ್ ಪಟೇಲ್‌ರಿಂದಲೂ ಬಂದಿದೆ. ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ದೇಶದ ಈ ಅಸಹಜ ವಿಭಜನೆ ಪರಿಸಮಾಪ್ತಿಗೊಂಡು ಎರಡು ರಾಷ್ಟ್ರಗಳು ಪುನಃ ಒಂದುಗೂಡುವ ದಿನವನ್ನು ನಾನು ಕಾಯುತ್ತಿದ್ದೇನೆಂದು ಹೇಳಿದ್ದಾರೆ.

ಗಾಂಧೀಜಿಯವರಿಂದಲೂ ಸಂದೇಶ ಬಂತು, ನಂತರ ನಾಟಕ ಶುರು ಆಯಿತು. ಮೇಲಿಂದ ಮೇಲಾಗುತ್ತಿದ್ದ ವಿಪತ್ತುಗಳನ್ನು ತಾಳಲಾರದೆ ಜನರು ಬರುತ್ತಿದ್ದ ಸಮಯದಲ್ಲಿ ಮತ್ತು ದಬ್ಬಾಳಿಕೆ ಹಾಗೂ ದೌರ್ಜನ್ಯಗಳ ವರದಿಗಳು ಬರಲು ಪ್ರಾರಂಭಿಸಿದ ಸಮಯದಲ್ಲಿ ನಾನು ಮಂತ್ರಿಮಂಡಲದಲ್ಲಿದ್ದೆ ನಾವು ವಿಷಯವನ್ನು ಪರಮಾರ್ಶಿಸಿದೆವು. ಪರಿಸ್ಥಿಯ ತೀವ್ರತೆಯನ್ನು ನಾವು ಮನಗಂಡೆವು. ಭಾರತ ಸರ್ಕಾರದ ಪ್ರತಿನಿಧಿಯಾಗಿ ನಾನು ಕಲ್ಕತ್ತಕ್ಕೆ ಹೋಗಿ, ಪೂರ್ವ ಬಂಗಾಳದ ಪರಿಸ್ಥಿತಿ ಕುರಿತು ಚರ್ಚಿಸಲು ಸಂಘಟಿಸಿದ್ದ ಮೊದಲ

ಇಂಡೋ-ಪಾಕಿಸ್ತಾನ ಸಮ್ಮೇಳನದಲ್ಲಿ ಭಾಗವಸಿದೆ. ಈಗ ಪಾಕಿಸ್ತಾನದ ಗೌರ್ನರ್ ಜನರಲ್ ಆಗಿರುವ ಗುಲಾಮ್ ಮೊಹಮ್ಮದ್, ಪಾಕಿಸ್ತಾನ ನಿಯೋಗದ ನಾಯಕರಾಗಿದ್ದರು. ಖ್ವಾಜಾ ನಜೀಮುದ್ದೀನ್ ಸಹ ಇದ್ದರೂ. ಒಟ್ಟಿಗೆ ದಿನಗಟ್ಟಲೆ ಚರ್ಚಿಸಿದೆವು. ನಾನು ಇಂದು ದೃಢವಾದ ಕ್ರಮ ತೆಗೆದುಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಸಿಟ್ಟಿನಿಂದ ಹೇಳುತ್ತಿಲ್ಲ. ಬಾಲಿಶವಾಗಿ ಹೇಳುತ್ತಿಲ್ಲ. ಅತಿರೇಕದ ಭಾವನೆಯಿಂದ ಹೇಳುತ್ತಿಲ್ಲ. ನಮಗಾಗುತ್ತಿರುವ ಅನುಭವಗಳ, ಕಳೆದ ಐದು ವರ್ಷಗಳಲ್ಲಾದ ನಮ್ಮ ಕಹಿ ಅನುಭವಗಳ ಮತ್ತು ನಮ್ಮ ದುರಂತಮಯ ವಿಫಲತೆಗಳ ಅನುಭವದಿಂದ ಹೇಳುತ್ತಿದ್ದೇನೆ. "ಇತರ ವಿಧಾನಗಳನ್ನು" 1950ರ ಫೆಬ್ರವರಿಯಲ್ಲಿ ಪಂಡಿತ್ ಜವಹರಲಾಲ್ ನೆಹರೂರವರೇ ಹೇಳಿದಂತೆ ಎಂದರೆ ಶಾಂತಿಯ ವಿಧಾನಗಳು ವಿಫಲವಾದರೆ, ಸರ್ಕಾರವು ಇತರ ವಿಧಾನಗಳನ್ನು ಕೈಗೊಳ್ಳುವಂತೆ ನಮ್ಮ ಸರ್ಕಾರವನ್ನು ಕೇಳುತ್ತಿದ್ದೇವೆ. ಅನುಸರಿಸುವುದಕ್ಕೆ ಇನ್ನೂ ಕಾಲ ಕೂಡಿ ಬಂದಿಲ್ಲವೇ ಎಂಬುದನ್ನು ನಮಗೆ ಹೇಳುವಂತೆ ನಾನು ಈಗ ಪ್ರಧಾನ ಮಂತ್ರಿಯವನ್ನು ಕೇಳುತ್ತಿದ್ದೇನೆ.

ನನ್ನ ಬಳಿ ವರದಿಗಳಿವೆ. ಒಪ್ಪಂದಗಳು, ವಾಗ್ದಾನಗಳು, ಆಶ್ವಾಸನೆಗಳು ಎಲ್ಲವಕ್ಕೂ ಸಹಿ ಮಾಡಿದ್ದೇವೆ. ಕೆಲವು ತಿಂಗಳವರೆಗೆ ಸುಸೂತ್ರವಾಗಿ ನಡೆಯಿತು. ಪಾಕಿಸ್ತಾನ ಎಲ್ಲವನ್ನೂ ಉಲ್ಲಂಘಿಸಿತು. ನಂತರ, ದೆಹಲಿಯಲ್ಲಿ ಮತ್ತೆ ನಾವು ಸೇರಿದೆವು. ಘುಲಾಂ ಮೊಹಮ್ಮದ್ ಅವರೇ ಪಾಕಿಸ್ತಾನ ನಿಯೋಗದ ನಾಯಕರಾಗಿ ಬಂದಿದ್ದರು. ಮೊದಲ ಇಂಡೋ-ಪಾಕಿಸ್ತಾನ್ ಸಮ್ಮೇಳನದಲ್ಲಾಗಿದ್ದ ನಿರ್ಣಯಗಳನ್ನೇ ಕಾರ್ಯರೂಪಕ್ಕೆ ತರಲು ಇನ್ನೊಂದು ಒಪ್ಪಂದ ಆಯಿತು. ಅದರಲ್ಲಿ ನಾನು ಭಾಗಿಯಾಗಿದ್ದೆ. ನಾನು ಅದರಲ್ಲಿ ಏಕೆ ಭಾಗಿಯಾಗಿದ್ದೆನೆಂದರೆ, ಈ ಸಮಸ್ಯೆಯನ್ನು ಶಾಂತಿಯುತವಾಗಿ ಮತ್ತು ಗೌರವಯುತವಾಗಿ ಬಗೆಹರಿಸಲು ಇರುವಂಥ ಯಾವುದನ್ನೂ ನಾವು ಕಳೆದುಕೊಳ್ಳಬಾರದೆಂಬುದು ನನ್ನ ಅಭಿಪ್ರಾಯವಾಗಿತ್ತು. ಸಾಮಾನ್ಯವಾಗಿ ಸರ್ಕಾರವೇ ತನ್ನ ಜನರ ಯೋಗಕ್ಷೇಮದ ಭಾರ ಹೊರಬೇಕಾಗುತ್ತದೆ. ಇಲ್ಲಿ, ತನ್ನ ಅಲ್ಪ ಸಂಖ್ಯಾತರ ಯೋಗಕ್ಷೇಮ ಪಾಕಿಸ್ತಾನಕ್ಕೆ ಸೇರಿದ್ದು. ನಮ್ಮ ಅಭಿಪ್ರಾಯ ಸಹ ಅದೇ ಆಗಿತ್ತು. ಆ ಒಪ್ಪಂದಕ್ಕೆ ಸಹಿ ಹಾಕಿದೆವು. ಯಥಾ ಪ್ರಕಾರ ಕೆಲವು ತಿಂಗಳು ಸುಸೂತ್ರವಾಗಿ ನಡೆಯಿತು. ನಂತರ ಬಂತು, 1950ರ ಜನವರಿ - ಫೆಬ್ರವರಿಯ ಘೋರ ದುರಂತ. ಆ ವಿವರಗಳನ್ನು ನಾನು ಹೇಳಹೋಗುವುದಿಲ್ಲ. ಈಗಲೂ, ಲಿಯಾಖತ್ ಅಲಿ ಖಾನ್ ಬಂದಿದ್ದರು. ಬಂದಿದ್ದರೂ, ಏಕೆ? ಏಕೆಂದರೆ, ಭಾರತ ಪ್ರತಿಕ್ರಿಯೆ ತುಂಬಾ ಕಟುವಾಗಿದೆ ಎಂಬುದು ಅವರಿಗೆ ತಿಳಿದಿತ್ತು. ಅವರು ಇಲ್ಲಿಗೆ ಏಕೆ ಬಂದಿದ್ದರೆಂದರೆ, ಅವರಿಗೆ ಭಾರತದಲ್ಲಿ ಬೇರೆ ಬೇರೆ ರೀತಿಯ ಸಿದ್ಧತೆ ಆಗುತ್ತಿರುವುದು ಗೊತ್ತಾಗಿತ್ತು. ಅವರ ಮೇಲೆ ಇಂಗ್ಲೆಂಡ್ ಮತ್ತು ಅಮೆರಿಕಾ ಒತ್ತಡ ತಂದಿದ್ದವು. ಪಾಕಿಸ್ತಾನಕ್ಕೆ ಭಾರತದಿಂದ ಲಕ್ಷಾಂತರ ಜನ ಮುಸ್ಲಿಮರು ಹೋಗಿದ್ದರು. ಹಿಂದೂಗಳು ಹೋಗದೇ, ಮುಸ್ಲಿಮರೇ

ಬರುವುದು ಅವರಿಗೆ ಬೇಡವಾಗಿತ್ತು. ಬೇರೆಯವರಂತೆಯೇ ಕುಯುಕ್ತಿಯ ಆಟವಾಡಲು ಬಂದಿದ್ದರು. ಸ್ನೇಹ ಸಂಬಂಧದ ಭಾವನೆ ಅವರಲ್ಲಿರಲಿಲ್ಲ. 1950ರ ಏಪ್ರಿಲ್ 8ರ ಒಪ್ಪಂದ ಆಯಿತು, 2½ ವರ್ಷಗಳಲ್ಲಿ ಅದೂ ವಿಫಲವಾಯಿತು.

ಆದ್ದರಿಂದ, ಸರ್ಕಾರಕ್ಕೆ ನನ್ನ ಮೂಲಭೂತ ಪ್ರಶ್ನೆ ಏನೆಂದರೆ, ಅಲ್ಪ ಸಂಖ್ಯಾತರ ರಕ್ಷಣೆಯ ಜವಾಬ್ದಾರಿ ನಿಮಗೆ ಇದೆಯೆಂಬುದು ನನಗೆ ತಿಳಿದಿದೆಯೇ? ಪಂಡಿತ್‌ಜೀಯವರು ಆ ಸಂದರ್ಭದಲ್ಲಿ "ಆ ಜವಾಬ್ದಾರಿ ನನಗಿದೆ, ಅಲ್ಪ ಸಂಖ್ಯಾತರ ರಕ್ಷಣೆಯನ್ನು ನಾವು ಕೈಗೆತ್ತಿಕೊಳ್ಳಬೇಕಾಗಿದೆ. ಸಾಧ್ಯವಾದರೆ, ಅವರಿಗೆ ಅವರವರ ಸ್ಥಳಗಳಲ್ಲೇ ಸೌಕರ್ಯ ಕಲ್ಪಿಸಲಾಗುವುದು ಅಥವಾ ಅವಶ್ಯಕವಾದರೆ, ಬೇರೆ ಕಡೆ ಪುನರ್ ವಸತಿ ಕಲ್ಪಿಸಲಾಗುವುದು" ಎಂದು ಹೇಳಿದ್ದರು. ಸದಾ ಕಾಲವು ಪಾಕಿಸ್ತಾನ ಸರ್ಕಾರವು ವಿಫಲವಾಗುತ್ತಿರುವಾಗ, ಅದಕ್ಕೆ ಭಾರತ ಸರ್ಕಾರದ ಪ್ರತಿಕ್ರಿಯೆ ಏನು? ರಹದಾರಿ ವ್ಯವಸ್ಥೆ ತರಲಾಗಿದೆ, ರಹದಾರಿ ವ್ಯವಸ್ಥೆಯಿಂದ ಜನರು ಬರುತ್ತಿದ್ದಾರೆಂದು ಹೇಳಲಾಗಿದೆ. ಕಲ್ಕತ್ತದಲ್ಲಿ, ಪತ್ರಿಕಾ ಸಮ್ಮೇಳನವೊಂದರಲ್ಲಿ ನಮ್ಮ ಅಲ್ಪ ಸಂಖ್ಯಾತರ ಮಂತ್ರಿಗಳು, ರಹದಾರಿ, ಕೇವಲ ಒಂದು ಸೂಚನೆ ಎಂದು ಹೇಳಿದ್ದಾರೆ. ನಾವು ಹೇಳುತ್ತಿರುವುದನ್ನೇ ಅವರೂ ಹೇಳುತ್ತಿದ್ದಾರೆ. ಜನರು ಬರುತ್ತಿರುವುದಕ್ಕೆ ಅದೇ ಕಾರಣ ಅಲ್ಲ. ತೆರೆಮರೆಯಲ್ಲಿ ಏನೋ ನಡೆಯುತ್ತಿದೆ. ಅದು ಆತಂಕಕ್ಕೆ, ಭಯಕ್ಕೆ ಕಾರಣವಾಗಿದೆ. ಎಲ್ಲವೂ ಸರಿಯಾಗಿದ್ದಿದ್ದರೆ, ನಮ್ಮನ್ನು ನಮ್ಮ ದೇಶದಿಂದಲೇ ಬಲವಂತದಿಂದ ಹೊರಹಾಕಲಾಗುತ್ತಿದೆಯೆಂಬ ವಿಪರೀತ ಆತಂಕವನ್ನು ಆ ಜನರ ಮನಸ್ಸಿನಲ್ಲಿ ರಹದಾರಿ ವ್ಯವಸ್ಥೆಯು ಏಕೆ ಮೂಡಿಸುತ್ತಿದೆ?

ಈಗ, ನಾನು ಸರ್ಕಾರದ, ಅದರಲ್ಲೂ ಮುಖ್ಯವಾಗಿ ಪ್ರಧಾನ ಮಂತ್ರಿಗಳ ಈಗಿನ ಅಪಾಯಕಾರಿ ಸಂತೃಪ್ತ ಭಾವನೆಯ ಬಗ್ಗೆ ಹೇಳುತ್ತೇನೆ. ಅವರ ಹೇಳಿಕೆ ಕೇಳಿ ನನಗೆ ತುಂಬಾ ಆಶ್ಚರ್ಯವಾಯಿತು. ಅನೇಕ ಬಾರಿ ಅವರು ಅದಕ್ಕೆ ಹೇಳಿದ್ದಾರೆ. ಸಮಸ್ಯೆಯನ್ನು ಕಾರ್ಯತಃ ಬಗೆಹರಿಸಲಾಗಿದೆ. ಜನರ ಹಿಂಡು ಹಿಂಡೇ ಬರುತ್ತಿಲ್ಲ ರಹದಾರಿ ತೊಂದರೆಗಳಿಲ್ಲ - ಇಲ್ಲವೇ ಇಲ್ಲ - ಪುನರ್ ವಸತಿ ಕಲ್ಪಿಸುವ ವಿಷಯ ಬಿಟ್ಟರೆ - ಅದು ತುಂಬ ಮಹತ್ವದ್ದು ಎಂಬುದು ನಿಜ- ಸದ್ಯಕ್ಕೆ ಯಾವ ತೊಂದರೆಯೂ ಇಲ್ಲ ಎಂದು ಸಾರ್ವಜನಿಕರಿಗೆ ಹೇಳುತ್ತಿದ್ದಾರೆ. ಆದರೆ, ಸನ್ಮಾನ್ಯರೇ, ಅದು ನಿಜವಾದ ವಸ್ತುಸ್ಥಿತಿ ಅಲ್ಲ. ಜನರ ಸಂಖ್ಯೆ ಕಡಿಮೆಯಾಗಿದೆ ಎಂಬುದರಲ್ಲಿ ಅನುಮಾನವಿಲ್ಲ. ಸನ್ಮಾನ್ಯ ಸದಸ್ಯರು ಮೊನ್ನೆ ಹೇಳಿದಂತೆ ಅದು ಅಸಂಗತ ಧೋರಣೆ. "ಒಮ್ಮೆ ನೀವು ಈ ಜನರನ್ನು ಹೊರಹಾಕಲಾಗುತ್ತಿದೆ ಎಂದು ಹೇಳುತ್ತೀರಿ, ಇನ್ನೊಮ್ಮೆ ಅವರನ್ನು ಬರದಂತೆ ತಡೆಯಲಾಗುತ್ತಿದೆ ಎಂದು ಹೇಳುತ್ತೀರಿ. ಪಾಕಿಸ್ತಾನವು ಅವರನ್ನು ಹೊರದೂಡಬಯಸಿದ್ದರೆ, ಹಿಂಡು ಹಿಂಡಾಗಿ ಅವರು ಏಕೆ ಬರುತ್ತಿಲ್ಲ?

ಇಲ್ಲಿ, ಪಾಕಿಸ್ತಾನದ ನೀತಿಯೇನೆಂದರೆ, ಅಲ್ಪ ಸಂಖ್ಯಾತರು ದೇಶಬಿಟ್ಟು ಹೋಗಬೇಕು, ಯಾರು ಉಳಿಯುತ್ತಾರೋ ಅವರು ಮತಾಂತರ ಹೊಂದಿ ಅಥವಾ ಗುಲಾಮರಾಗಿ ಇರಬೇಕು. ಅದು ಸುಷ್ಪಷ್ಟ. ಎಲ್ಲರೂ ಹೋಗಬೇಕೆಂದು ಅದು ಬಯಸುತ್ತಿಲ್ಲ. ಪೂರ್ವ ಪಾಕಿಸ್ತಾನದ ಜೀವನ ವಿಧಾನವನ್ನು ಒಪ್ಪಿಕೊಂಡರೆ ಆಗ ಬಹುಷಃ ಅವರು ಅಲ್ಲೇ ಬಾಳಬಹುದು. ಹಿಂಡು ಹಿಂಡಾಗಿ ಜನರ ಹೊರ ಹೋಗುವುದನ್ನು ಪಾಕಿಸ್ತಾನವು ಆಪೇಕ್ಷಿಸುವುದಿಲ್ಲ. ಏಕೆಂದರೆ, ಅದು, ಭಾರತದಲ್ಲಿ ತತ್‌ಕ್ಷಣವೇ ಪ್ರಚಂಡ ಪ್ರತಿಕ್ರಿಯೆಯನ್ನುಂಟು ಮಾಡುತ್ತದೆಂದು ಅದಕ್ಕೆ ಗೊತ್ತಿದೆ.

ರಹದಾರಿ ವ್ಯವಸ್ಥೆ ಬಗ್ಗೆ ಹೇಳುವುದಾದರೆ, ವಸ್ತುಸ್ಥಿತಿ ಏನಿದೆ? ಪ್ರಧಾನ ಮಂತ್ರಿಗಳು ಕೆಲವೊಂದು ಅಂಕಿಗಳನ್ನು ಹೇಳಿದ್ದಾರೆ. ನನ್ನ ಬಳಿ ಅಧಿಕೃತ ಅಂಕಿಗಳಿವೆ. ಅಕ್ಟೋಬರ್ 15ರವರೆಗೆ ಪ್ರತಿದಿನವೂ ಸಾವಿರಾರು ಜನ ಬಂದಿದ್ದಾರೆ- ಪ್ರತಿದಿನವೂ ಏಳು, ಎಂಟು, ಹತ್ತು ಸಾವಿರ. ಅಕ್ಟೋಬರ್ 18 ರಿಂದ ಸಂಖ್ಯೆ ಕಡಿಮೆಯಾಗತೊಡಗಿದೆ. ಒಂದು ಹಂತದಲ್ಲಿ ಸೊನ್ನೆ, ಯಾರೂ ಬರಲಿಲ್ಲ. ಅಕ್ಟೋಬರ್ 18 ರಿಂದ ನವೆಂಬರ್ 2 ರವರೆಗೆ ಪೂರ್ವ ಪಾಕಿಸ್ತಾನದಿಂದ ಬೋಂಗಾವ್ ರೈಲ್ವೆ ನಿಲ್ದಾಣದಲ್ಲಿ ಪ್ರತಿದಿನವೂ ಐದು, ಆರು, ಎಂಟು ಸಾವಿರ ಜನರು ಬಂದಿಳಿಯುತ್ತಿದ್ದವರು, ಈಗ ಸಂಖ್ಯೆ ಸೊನ್ನೆ, ಅಷ್ಟೊಂದು ದಿನಗಳಲ್ಲಿ ಜನ ಬರುವುದು ನಿಂತೇ ಹೋಗುವುದಕ್ಕೆ ರಾತ್ರೋ ರಾತ್ರಿಯ ಪವಾಡದಿಂದ, ಪರಿಸ್ಥಿತಿಯಲ್ಲಿ ಬದಲಾವಣೆ ಆಗಿರುವುದೇ ಕಾರಣವೇ? ಹಾಗೆಯೇ, ಬಾನಾಪುರದಲ್ಲಿ ಸಂಖ್ಯೆ ಎಂಟಕ್ಕೆ ಆರಕ್ಕೆ ಇಳಿದಿತ್ತು ಕೆಲವು ದಿನಗಳಲ್ಲಿ ಹತ್ತಕ್ಕೆ, ಕೆಲವು ದಿನಗಳಲ್ಲಿ ಹನ್ನೊಂದಕ್ಕೆ ಏರಿತ್ತು ಮತ್ತೆ ಕೆಲವು ದಿನಗಳಲ್ಲಿ ಸೊನ್ನೆಗೆ ಇಳಿದಿತ್ತು.

ಜನರಿಗೆ ಬರುವುದಕ್ಕೆ ಏಕೆ ಆಗುತ್ತಿಲ್ಲ? ಪ್ರತಿದಿನವೂ ಬರುತ್ತಿರುವುದಕ್ಕೆ ಕಾರಣಗಳು ಪತ್ರಿಕೆಗಳಲ್ಲಿ, ವರದಿಗಳಲ್ಲಿ ಬಂದಿವೆ. ಈ ರಹದಾರಿ ವ್ಯವಸ್ಥೆ ಹೇಗಿದೆ? ಸನ್ಮಾನ್ಯರೇ, ಜನರು ಅರ್ಜಿ ಹಾಕಿಕೊಳ್ಳಬೇಕು. ನಮೂನೆಯನ್ನು ಪಡೆದುಕೊಳ್ಳಬೇಕು, ತುಂಬ ಬೇಕು, ಹಣ ಕಟ್ಟಬೇಕು ಎಲ್ಲ ರೀತಿಯ ವಿಚಾರಣೆಗೆ ಒಳಗಾಗಬೇಕು. ಅರ್ಜಿಗಳನ್ನು ಪೋಲೀಸರಿಗೆ ಕಳುಹಿಸುತ್ತಾರೆ. ಫೋಟೋಗಳನ್ನು ಕೊಡಬೇಕು. ಈಗ, ಫೋಟೋ ಬೆಲೆಯನ್ನು ತುಂಬಾ ಹೆಚ್ಚಿಸಲಾಗಿದೆಯೆಂದು ನಿನ್ನೆಯ ಪತ್ರಿಕೆಗಳಲ್ಲಿ ವರದಿಯಾಗಿದೆ. ನೀವು 10 ರೂಪಾಯಿ ಕೊಡದಿದ್ದರೆ, ನಿಮಗೆ ಫೋಟೋ ಕೊಡುವುದೇ ಇಲ್ಲ. ಇದರಿಂದ ತೊಂದರೆಗೆ ಒಳಗಾಗಿರುವವರುಯಾರು? ನಗರ ಜನರಷ್ಟೇ ಅಲ್ಲ, ಹಳ್ಳಿಗಳ ಸಾವಿರಾರು ಜನರಿಗೆ ತೊಂದರೆಯಾಗಿದೆ. ತಿಳಿವಳಿಕೆ ಸಾಲದ ಜನರಿಗೆ, ಅನಕ್ಷರಸ್ಥರಿಗೆ ತುಂಬಾ ತೊಂದರೆಯಾಗಿದೆ. ಇಲ್ಲಿಗೆ ಬಂದವರು ಆ ಬಗ್ಗೆ ಬರೆದು ತಿಳಿಸಿದ್ದಾರೆ. ನಾವು ಓದಿದ್ದೇವೆ. ತೀರಾ ಸೂಕ್ಷ್ಮವಾದ ಮತ್ತು ಅಪಾಯಕಾರಿಯಾದ ಅಲ್ಲಿನ ವಿದ್ಯಾಮಾನಗಳ ಬಗ್ಗೆ ಅವರು ವಿವರಿಸಿದ್ದಾರೆ. ಭಾರತಕ್ಕೆ ಬರುವ ಉದ್ದೇಶದಿಂದ ತಮ್ಮ ಮನೆ ಮಠಬಿಟ್ಟು ಹೊರಟಿದ್ದ ಸಾವಿರಾರು ಜನರನ್ನು

ಅಕ್ಟೋಬರ್ 15 ರಂದು, ಆ ನಂತರ, ಹಿಡಿದಿಟ್ಟುಕೊಳ್ಳಲಾಗಿದೆ. ಆ ಸಮಯದಲ್ಲಿ ಕಲ್ಕತ್ತದಲ್ಲಿದ್ದ ಪಂಡಿತ್‌ಜೀಯವರನ್ನು, ವಿಶೇಷ ಕ್ರಮ ತೆಗೆದುಕೊಳ್ಳಬೇಕೆಂದು ನಾನು ಕೋರಿಕೊಂಡಿದ್ದೆ. ಸುಮಾರು ಎರಡು ಲಕ್ಷ ಅಥವಾ ಮೂರು ಲಕ್ಷದಷ್ಟಿರಬಹುದಾದ ಜನರು ಈ ಬಲೆಗೆ ಬೀಳದಂತೆ ನೋಡಿಕೊಳ್ಳಬೇಕೆಂದು ಪ್ರಾರ್ಥಿಸಿದ್ದೆ. ಅವರುಗಳು ಮನೆಬಿಟ್ಟು ಹೊರಟಿದ್ದರು, ದಾರಿಯಲ್ಲಿದ್ದರು, ಅವರೆಲ್ಲಾ ತಿಳುವಳಿಕೆ ಇಲ್ಲದವರು, ಅನಕ್ಷರಸ್ಥರು, ಬಡ ಬೇಸಾಯಗಾರರು, ಭೂ ಕಾರ್ಮಿಕರು. ಇಂದು, ಶ್ರೀಮಂತರ ಜನರು ಬರುತ್ತಿಲ್ಲ, ಅವರೆಲ್ಲಾ ಈಗಾಗಲೇ ಹೊರ ಬಂದಿದ್ದಾರೆ. ಅವರ ಹೀನಾಯ ಸ್ಥಿತಿ ಬಗ್ಗೆ ವರದಿಗಳು ಬಂದಿವೆ. ಕೆಲವರು ವಾಪಸ್ಸು ಹೋಗಿದ್ದಾರೆ, ಹಲವರು ನಾಪತ್ತೆಯಾಗಿದ್ದರೆ. ಇಂದು ಅವರೆಲ್ಲಿದ್ದಾರೋ ನನಗೆ ಗೊತ್ತಿಲ್ಲ. ಅವರುಗಳು ರಹದಾರಿ ನಿಬಂಧನೆಗಳನ್ನು ಪಾಲಿಸಿ ಭಾರತಕ್ಕೆ ಬರುವುದು ಸುಲಭದ ವಿಷಯ ಅಲ್ಲ. ಆದ್ದರಿಂದ, ಎಲ್ಲಿ ಎಲ್ಲವೂ ಸರಿಯಾಗಿದೆ, ಜನರು ಇಚ್ಛಿಸಿದರೆ ಬರುತ್ತಾರೆ, ಇಚ್ಛಿಸದಿದ್ದರೆ ಬರಬೇಕಾಗಿಲ್ಲ ಎಂದಲ್ಲ. ಢಾಕ ರಹದಾರಿ ಕಾರ್ಯಾಲಯದ ಮುಂದೆ ಸಾವಿರಾರು ಜನ ಕಾದು ನಿಂತಿದ್ದಾರೆಂದು ಮೊನ್ನೆ ದಿನ ನಮಗೆ ವರದಿ ಬಂದಿದೆ. ಅವರಲ್ಲಿ ಅನೇಕರು ದೂರದ ಭಾಗಗಳಿಂದ ಬಂದು ಅಲ್ಲಿ ಕಾದು ನಿಂತಿದ್ದಾರೆ. ಅವರಿಗೆ ರಾತ್ರಿ ಎಲ್ಲಿ ನಿದ್ರೆ ಮಾಡಬೇಕೆಂಬುದೇ ತಿಳಿಯುತ್ತಿಲ್ಲ. ಜಹಜು ಸಂಚಾರ ನಿಲ್ಲಿಸಲಾಗಿದೆ. ನಾರಾಯಣ ಗಂಜ್ ಮತ್ತು ಗೋವಲಾಂಡೋ ನಡುವಣ ಜಹಜು ಸಂಚಾರವನ್ನು ನಿಲ್ಲಿಸಿರುವುದು ಭಾರತ ಸರ್ಕಾರಕ್ಕೆ ಗೊತ್ತಿದೆಯೇ? ಪೂರ್ವ ಬಂಗಾಳದಲ್ಲಿ ಅದು ಒಂದು ಪ್ರಮುಖ ಸಂಚಾರ ಮಾರ್ಗ. ಇತರ ಕೆಲವು ಜಹಜು ಸಂಚಾರ ಮಾರ್ಗವನ್ನು ರದ್ದುಪಡಿಸಲಾಗಿದೆ. ಹಾಗಾಗಿ, ಜನರು ಹೊರಬರಲು ಇಚ್ಛಿಸಿದರೂ, ಅವರು ಬರುವುದು ಸುಲಭ ಅಲ್ಲ.

ಯಾವುದೇ ಬೆಲೆಗೆ ತಮ್ಮ ಆಸ್ತಿಪಾಸ್ತಿಯನ್ನು ಮಾರಲು ಅಲ್ಲಿನ ಜನರು ಕಾತರದಿಂದಿದ್ದಾರೆ. ಜಿಲ್ಲಾ ನ್ಯಾಯಾಧೀಶರು ಮಾಡಿರುವ ನಿಷೇಧಾಜ್ಞೆ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. "ಹಿಂದೂಗಳ ಆಸ್ತಿಪಾಸ್ತಿಗಳನ್ನು ಯಾರೂ ಕೊಂಡುಕೊಳ್ಳಬಾರದು", ಹಾಗಾಗಿ, ದಾಖಲೆಗಳನ್ನು ನೋಂದಣಿ ಮಾಡಲಿಕ್ಕಾಗದೆ, ಅವರುಗಳು ತಮ್ಮ ಆಸ್ತಿಪಾಸ್ತಿಗಳನ್ನು ಮಾರುತ್ತಿದ್ದಾರೆ ಮತ್ತು ದೀಪಾವಳಿಗಾಗಿ ಬರೀ ಕೈಯಲ್ಲಿ ಬರುತ್ತಿದ್ದಾರೆ.

ಇದು, ಐದು ದಿನಗಳ ಹಿಂದೆ ಕಲ್ಕತ್ತಾದ ಒಂದು ಪತ್ರಿಕೆಯಲ್ಲಿ ಪ್ರಕಟವಾಗಿರುವ ವರದಿ. ಅದರಲ್ಲಿ ಭಾರತಕ್ಕೆ ಪೂರ್ವ ಬಂಗಾಳದಿಂದ ಬಂದ ಮುಸ್ಲಿಮರ ಹೇಳಿಕೆ ಸಹ ಇದೆ. ಅವರ ಹೇಳಿಕೆಗಳನ್ನು ಪ್ರಧಾನ ಮಂತ್ರಿಗಳು ತಕ್ಷಣವೇ ಒಪ್ಪಿಕೊಳ್ಳುತ್ತಾರೆಂದು ಭಾವಿಸುತ್ತೇನೆ. ಏಕೆಂದರೆ ಅವುಗಳಲ್ಲಿ ಕೋಮು ಸ್ವರೂಪ ಏನಿಲ್ಲ. ಅವರು ಏನೆಂದು ಹೇಳಿದ್ದಾರೆ? ಜನಾಬ್‌ರಹೀಂ, ಆರನೇ ತರಗತಿ ವಿದ್ಯಾರ್ಥಿ, ರಹದಾರಿ ಸಿಕ್ಕಿದ ನಂತರ

ಗಡಿದಾಟಿ ಬಂದಿದ್ದಾನೆ. ರಹದಾರಿ ಪತ್ರ ಸಿಕ್ಕುವುದಕ್ಕೆ ತಾನು ಇಪ್ಪತೆರಡು ದಿನಗಳು ಪ್ರಯತ್ನ ಪಡೆಯಬೇಕಾಯಿತೆಂದು ಹೇಳಿದ್ದಾನೆ. ಇನ್ನು ರಹದಾರಿ ಪತ್ರ ಪಡೆದು ಭಾರತಕ್ಕೆ ಬಂದಿರುವ ಜನಾಬ್ ಅಕ್ಬರ್‌ಖಾನ್. ಭಾರಿ ಸಂಖ್ಯೆಯ ಜನರು ಢಾಕಾದಲ್ಲಿ ಕಾಯುತ್ತಿದ್ದಾರೆ, ಪಶ್ಚಿಮ ಬಂಗಾಳಕ್ಕೆ ಪ್ರಯಾಣ ಮಾಡಲು ಅನುಮತಿ ಪಡೆಯುವುದಕ್ಕೆ ತುಂಬಾ ತುಂಬಾ ತೊಂದರೆ ಅನುಭವಿಸಬೇಕಾಯಿತು ಎಂದು ಹೇಳಿದ್ದಾನೆ. ಪಾಕಿಸ್ತಾನಿ ಕ್ರಿಶ್ಚಿಯನ್ ಸಭ್ಯರೊಬ್ಬರು, ಸತತ ಪ್ರಯತ್ನದಿಂದ ಮತ್ತು ಢಾಕದಲ್ಲಿ ಕೆಲವರು ಉನ್ನತ ಅಧಿಕಾರಿಗಳೊಂದಿಗೆ ಮಾತನಾಡಿದ್ದರಿಂದ ತನಗೆ ರಹದಾರಿ ಪತ್ರ ಸಿಕ್ಕಿತು ಎಂದು ಹೇಳಿದ್ದಾರೆ. ಒಬ್ಬರು ಹಿಂದೂ ಸಹ ಈ ಹೇಳಿಕೆಯನ್ನು ಸಮರ್ಥಿಸಿದ್ದಾರೆ ಮತ್ತು ತನ್ನ ಬಳಿ ಹಾಗೂ ಇತರರ ಬಳಿ ಇದ್ದ ಹಣವನ್ನೆಲ್ಲಾ ಹೇಗೆ ಕಸಿದುಕೊಳ್ಳಲಾಯಿತು ಎಂಬುದನ್ನು ನಾವು ಬರೀ ಕೈಲೀ ಬಂದಿದ್ದೇವೆಂಬುದನ್ನು ಹೇಳಿದ್ದಾರೆ. ರಹದಾರಿ ವ್ಯವಸ್ಥೆಯನ್ನು ತಂದ ಮೇಲೆ ಏನಾಗುತ್ತಿದೆಯೆಂದರೆ ಇದೇ.

ನಾನು ವಿವರಗಳಿಗೆ ಹೋಗಬಯಸುವುದಿಲ್ಲ. ಆದರೆ, ಪೂರ್ವ ಬಂಗಾಳದಲ್ಲಿ ಒಂದು ಪಾಸ್‌ಪೋರ್ಟ್ ಗಾತ್ರದ ಫೋಟೋ ಬೆಲೆ 10 ರೂಪಾಯಿ ಆಗಿದೆ. ಕೆಲವರು ವಕೀಲರುಗಳು, ಅಲ್ಲಿ ದಿಢೀರನೇ ಮುಂದೆ ಬಂದು, ತಾವು ರಹದಾರಿ ನಿಬಂಧನೆಗಳ ತಜ್ಞರು, ಸುಲಭವಾಗಿ ರಹದಾರಿ ಪತ್ರ ಕೊಡಿಸುತ್ತೇವೆಂದು ಹೇಳಿಕೊಂಡು 40 ರೂಪಾಯಿ ಫೀಜು ಕೇಳುತ್ತಿದ್ದಾರೆ.

ತೇಜ್‌ಪುರ (ಅಸ್ಸಾಂ) ಭಾಗದಿಂದ ಇನ್ನೊಂದು ವರದಿ ಬಂದಿದೆ. ಡುರ್‍ರಾಂಗ್ ಡೆಪ್ಯೂಟಿ ಕಮಿಷನ್‌ರವರು ಪರಿಸ್ಥಿತಿಯನ್ನು ಪರಿಶೀಲಿಸಿದ್ದಾರೆ. ಅದೇ ಬೇರೆ ರೀತಿ ಇದೆ. ಹೊರ ಬರುತ್ತಿದ್ದ 250 ಹಿಂದೂಗಳನ್ನು ತಡೆಯಲಾಗಿದೆ. ಮುಸ್ಲಿಮರಿಗೆ ಮಾತ್ರವೇ ಅನುಮತಿ ನೀಡಲಾಗಿದೆ. ಡೆಪ್ಯೂಟಿ ಕಮೀಷನರ್‌ರವರು ಪೂರ್ವ ಬಂಗಾಳ ಸರ್ಕಾರಕ್ಕೆ 'ತೀವ್ರ ಪ್ರತಿಭಟನೆ' ಕಳುಹಿಸಿದ್ದಾರೆ.

ಇಂದು ಬೆಳಿಗ್ಗೆ ನನಗೆ ಒಂದು ಪತ್ರ ಬಂದಿದೆ. ತುಂಬಾ ಆಸಕ್ತಿ ಹುಟ್ಟಿಸುವಂಥದ್ದು. ಪ್ರಧಾನ ಮಂತ್ರಿಗಳಿಗೆ ಸಂಗತಿ ಗೊತ್ತಿದೆಯೋ, ಇಲ್ಲವೋ ನನಗೆ ಗೊತ್ತಿಲ್ಲ. ಇದು ಕಲ್ಕತ್ತಾದಲ್ಲಿ ಮೂರು ದಿನ ಹಿಂದೆ ನಡೆದದ್ದು, ಒಬ್ಬರು ಹಿಂದೂ, ಕೆಲವೊಂದು ಖಾಸಗಿ ಉದ್ದೇಶಕ್ಕಾಗಿ ಪೂರ್ವ ಬಂಗಾಳಕ್ಕೆ ಹೋಗಬಯಸಿದರು. ಕಲ್ಕಾತ್ತಾದಲ್ಲಿರುವ ಡೆಪ್ಯೂಟಿ ಹೈಕಮೀಷನ್ ಕಾರ್ಯಾಲಯಕ್ಕೆ ಹೋದರು. ಪದೇ ಪದೇ ಪ್ರಯತ್ನ ಮಾಡಿದರೂ, ದಿನೇ ದಿನೇ ಹೋದರು ರಹದಾರಿ ಪತ್ರ ಅವರಿಗೆ ಸಿಗಲಿಲ್ಲ. ಕೊನೇ ದಿನ, ಅವರಿಗೆ, ನೀವು ಪೂರ್ವ ಪಾಕಿಸ್ತಾನಕ್ಕೆ ವಾಪಸ್ಸು ಹೋಗಬೇಕಾದರೆ, ನೀವು ಪಾಕಿಸ್ತಾನದ ಪೌರನೆಂಬುದನ್ನು ದಾಖಲೆ ಸಮೇತ ರುಜುವಾತುಪಡಿಸಬೇಕು. ಈ ದಾಖಲೆಗಳನ್ನು ನೀವು ಪಾಕಿಸ್ತಾನದಿಂದ ತರಬೇಕು

ಅಥವಾ ಪಡೆದುಕೊಂಡಿರಬೇಕು ಎಂದು ಹೇಳಲಾಯಿತಂತೆ. ಈ ಪ್ರಮಾಣ ಪತ್ರವನ್ನು ಅಲ್ಲಿ ಪಾಕಿಸ್ತಾನದ ಯೂನಿಯನ್ ಬೋರ್ಡ್ ಪ್ರೆಸಿಡೆಂಟ್ ಅಥವಾ ಗೆಜೆಟೆಡ್ ಆಫೀಸರ್ ಕೊಡುತ್ತಾರೆ. ಆ ದಾಖಲೆಗಳನ್ನು ತರದಿದ್ದರೆ, ರಹದಾರಿ ಪತ್ರ ಸಿಗುವುದೇ ಇಲ್ಲ. ಮೂರು ದಿನಗಳ ಹಿಂದೆ ಈ ನಿಯಮವನ್ನು ತರಲಾಗಿದೆಯೆಂದು ಆತ ಹೇಳಿದ್ದಾರೆ.

ದಿನೇಶ್‌ಚಂದ್ರ ಸುರ್ ಎಂಬಾತ ಪ್ರಧಾನ ಮಂತ್ರಿಗಳಿಗೆ ಬರೆದಿರುವ ಪತ್ರದ ಪ್ರತಿಯಿಂದ ನನಗೆ ಬಂದಿದೆ. ನನಗೆ ಆತನ ಪರಿಚಯ ಇಲ್ಲ. ಪೂರ್ವ ಬಂಗಾಳದಲ್ಲಿ ತನ್ನ ತಾಯಿಯನ್ನು ಹೇಗೆ ತಡೆಹಿಡಿಯಲಾಗಿದೆ ಎಂಬ ಹೃದಯವಿದ್ರಾವಕ ಸಂಗತಿಯನ್ನು ಆತ ಹೇಳಿದ್ದಾನೆ. ಆತನ ತಂದೆ ಹೊರ ಬಂದಿದ್ದಾರೆ. ಅವರು ಅವರ ಆಸ್ತಿಪಾಸ್ತಿಯನ್ನು ಮಾರಿದ್ದಾರೆ-ಪಶ್ಚಿಮ ಬಂಗಾಳದಲ್ಲಿರುವ ಒಬ್ಬ ಮುಸ್ಲಿಂ ಮತ್ತು ಪೂರ್ವ ಬಂಗಾಳದಲ್ಲಿರುವ ಈ ಹಿಂದೂಗಳ ನಡುವೆ ಆದ ಒಂದು ರೀತಿಯ ವಿನಿಮಯ ಅದು. ಮನೆ ಕೊಟ್ಟಮೇಲೆ ನಗದು ಹಣ ಕೇಳಿದರು. ಅವರಲ್ಲಿ ಕೊಡಲು ಹಣ ಇರಲಿಲ್ಲ. ತಾಯಿಯನ್ನು ತಡೆಹಿಡಿಯಲಾಯಿತು. ತಮ್ಮ ಹಣವನ್ನು ವಸೂಲು ಮಾಡಿಕೊಡಲು ಶೀಘ್ರಕ್ರಮ ತೆಗೆದುಕೊಳ್ಳಬೇಕೆಂದು ಈ ಜನರು ಪ್ರಧಾನ ಮಂತ್ರಿಗಳಿಗೆ ನೋವಿನಿಂದ ಮನವಿ ಮಾಡಿಕೊಂಡಿದ್ದಾರೆ. ಮೂಲ ಪತ್ರ ಪ್ರಧಾನ ಮಂತ್ರಿಗಳ ಬಳಿ ಇದೆ.

ಸುಮಾರು 8000 ಹಿಂದೂಗಳು ಇಕ್ಕಟ್ಟಿನಲ್ಲಿರುವ ಬಗ್ಗೆ ಒಂದು ವರದಿ ಬಂದಿದೆ. ಈ ವಿಷಯವನ್ನು ಕಲ್ಕತ್ತಾದಲ್ಲಿ ನಾನು ಪ್ರಧಾನ ಮಂತ್ರಿಗಳಿಗೆ ಹೇಳಿದೆ. ನಿಮಗೆ ಗೊತ್ತಿರುವಂತೆ, ಜಲ್‌ಪುಗುರು ಸಮೀಪದಲ್ಲಿ ಪೂರ್ವ ಬಂಗಾಳದೊಳಗೆ ಕೆಲವೊಂದು ಸಣ್ಣ ಸಣ್ಣ ಭಾರತೀಯ ಪ್ರದೇಶಗಳಿವೆ. ಅಲ್ಲಿ ಸುಮಾರು 8000 ಹಿಂದೂಗಳು ವಾಸಿಸುತ್ತಿದ್ದಾರೆ. ಅವರಿಗೆ ಹೊರಬರಲು ಆಗುತ್ತಿಲ್ಲ. ಏಕೆಂದರೆ ಅವರುಗಳು ಪಾಕಿಸ್ತಾನದ ಗಡಿ ದಾಟಿ ಬರಬೇಕಾಗುತ್ತದೆ. ರಹದಾರಿ ಪತ್ರ ಇಲ್ಲದೆಯೇ ಅವರು ಬರುವಂತಿಲ್ಲ. ಆ ಪ್ರದೇಶದೊಳಗೆ ಯಾರನ್ನೂ ಬಿಡುತ್ತಿಲ್ಲ. ಸರ್ಕಾರ ಪ್ರತಿಭಟಿಸಿದೆ. ಅವರ ಅತಂತ್ರ ಸ್ಥಿತಿ ಬಗ್ಗೆ ಆ ಜನರು ನೋವಿನಿಂದ ತಂತಿ ಸಂದೇಶ ಕಳುಹಿಸಿದ್ದಾರೆ. ನಾನು ಅಂಥ ನೂರಾರು ದೃಷ್ಟಾಂತ ಕೊಡಬಲ್ಲೆ, ಕೊಡುವ ಅವಶ್ಯಕತೆ ಇಲ್ಲ. ಎಲ್ಲವೂ ಸರಿಯಾಗಿದೆ, ರಹದಾರಿ ವ್ಯವಸ್ಥೆ ಇದೆ, ಜನರು ಇಚ್ಛಿಸಿದರೆ ಬರಬಹುದು, ಇಚ್ಛೆ ಇಲ್ಲದಿದ್ದರೆ, ಬರಬೇಕಾಗಿಲ್ಲವೆಂಬ ಪ್ರಧಾನ ಮಂತ್ರಿಗಳ ಹುರುಳಿಲ್ಲದ ವಾದವನ್ನು ಕಿತ್ತೊಗೆಯುವುದೇ ನನ್ನ ಉದ್ದೇಶ. ಅಲ್ಲಿ ಎಲ್ಲವೂ ಸರಿಯಾಗಿಲ್ಲ. ಅಲ್ಲೇನಾಗತ್ತಿದೆಯೆಂದರೆ, ಈ ಜನರು ಬರಲು ಕಷ್ಟವಾಗುವಂತಹ ಕ್ರಮಗಳನ್ನು ಪಾಕಿಸ್ತಾನ ಸರ್ಕಾರ ಕೈಗೆತ್ತಿಕೊಳ್ಳುತ್ತಿದೆ. ಈ ಜನರ ನೈತಿಕ ಕುಸಿತವನ್ನು ಮರೆತು ಬಿಡಬೇಡಿ. ಈಗ

ಅವರ ಮನಸ್ಸಿನ ಸ್ಥಿತಿ ಹೇಗಿದೆ? ಅವರಲ್ಲಿ ಅನೇಕರು ಬಡವರು, ಅನಕ್ಷರಸ್ಥರು. ಅವರು ಅತ್ತ ಇತ್ತ ಓಡಾಡುತ್ತಿದ್ದಾರೆ. ಇಂದು ಅವರುಗಳು, ಕಷ್ಟಕರ ಪರಿಸ್ಥಿತಿಗಳಲ್ಲಿ ರಹದಾರಿ ಪತ್ರ ಪಡೆಯುವ ಈ ಜಟಿಲ ಸಮಸ್ಯೆಯನ್ನು ಮುಖಾಮುಖಿ ಎದುರಿಸುತ್ತಿದ್ದಾರೆ.

ನಾವು ಹರಿಜನರ ಬಗ್ಗೆ ಮಾತನಾಡುತ್ತೇವೆ. ಅವರಿಗಾಗಿ ನಮ್ಮ ರಾಜ್ಯಾಂಗದಲ್ಲಿ ವಿಶೇಷ ವಿಧಿ ಇದೆ. ಪೂರ್ವ ಬಂಗಾಳದಲ್ಲಿರುವ 95 ಲಕ್ಷ ಹಿಂದೂಗಳಲ್ಲಿ 50 ಲಕ್ಷ ಜನರು ಹರಿಜನರು ಎಂಬುದು ಸದನಕ್ಕೆ ಗೊತ್ತಿದೆಯೇ? ಅವರ ಕೆಲವರು ಪ್ರತಿನಿಧಿಗಳನ್ನು ನಾನು ಭೇಟಿ ಮಾಡಿದೆ. ಅವರಲ್ಲಿ ಕೆಲವರು, ಅವರ ಹೀನಾಯ ಸ್ಥಿತಿಗತಿಗಳನ್ನು ನನಗೆ ವಿವರಿಸಿದರು. ನಾಮ ಶೂದ್ರರಿದ್ದಾರೆ. ಅವರು ಹೋರಾಡಬಲ್ಲರು. ಆದರೆ, ಅವರನ್ನು ಎಷ್ಟೊಂದು ತುಳಿದಿದ್ದಾರೆಂದರೆ ಬದುಕುವುದಕ್ಕೇ ಕಷ್ಟವಾಗಿದೆ. ನಿಯಮ ನಿಬಂಧನೆಗಳಿಗೆ ಅವರು ಹೆದರುವಂಥವರಲ್ಲ. ಅವರ ಜನ್ಮಸಿದ್ಧ ಹಕ್ಕನ್ನು ಪಡೆದುಕೊಳ್ಳುವುದು ಹೇಗೆಂದು ಅವರಿಗೆ ಗೊತ್ತಿದೆ. ಆದರೆ ಅವರು ಇಂದು ಸಂಪೂರ್ಣವಾಗಿ ಅವಮಾನದಿಂದ ಕುಗ್ಗಿ ಹೋಗಿದ್ದಾರೆ, ದುರ್ಬಲರಾಗಿದ್ದಾರೆ.

ಅಲ್ಲಿಗೆ ಹೋದರೆ ಅವರ ಗತಿ ಏನಾಗುತ್ತದೆ? ಅವರು ಹೇಳುತ್ತಾರೆ: ಪುನರ್ ವಸತಿಗಾಗಿ ನಾವು ಭಾರತಕ್ಕೆ ಬಂದೆವು. ನಮಗೆ ಆ ಸೌಕರ್ಯ ಸಿಕ್ಕಿದೆ. ನಮ್ಮ ಮಕ್ಕಳು ಸತ್ತಿದ್ದಾರೆ. ನಾವು ವಾಪಸ್ಸು ಹೋಗುತ್ತಿದ್ದೇವೆ. ನಾವು ಯಾವ ಅಪರಾಧ ಮಾಡಿದ್ದೇವೆ? ನಮಗೆ ಪಾಕಿಸ್ತಾನ ಬೇಕಿಲ್ಲ. ಅಲ್ಲಿಗೆ ಹೋಗಬೇಕೆಂದು ನೀವು ಹೇಳಿದ್ದೀರಿ. ನಾವು ಹಿಂದೂಗಳೆಂಬ ಕಾರಣದಿಂದ ಮಾತ್ರವೇ ನಾವು ಈ ಬಿಕ್ಕಟ್ಟನ್ನು ಎದುರಿಸುತ್ತಿದ್ದೇವೆ. ನಾವು ಇಸ್ಲಾಂಗೆ ಮತಾಂತರಗೊಂಡರೆ ನಮ್ಮತನವನ್ನು ಬಿಟ್ಟುಕೊಟ್ಟರೆ ಅದರಿಂದ ಭಾರತಕ್ಕೆ ಕೀರ್ತಿ ಬರುತ್ತದೆಯೇ? ಅದು ಭಾರತವು ಹೆಮ್ಮೆಪಟ್ಟುಕೊಳ್ಳುವಂಥ ವಿಷಯವೇ?

ಹರಿಜನರ ಏಳಿಗೆಗಾಗಿ ಗಾಂಧೀಜಿಯುವರನ್ನು ನಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದರು. ಎಲ್ಲರೂ ಗಾಂಧೀಜಿಯವರ ಹೆಸರೆತ್ತಿ ಮಾತನಾಡುತ್ತಾರೆ. ಗಾಂಧಿ ವಿಚಾರಧಾರೆ, ಗಾಂಧಿ ಸಿದ್ಧಾಂತ, ಗಾಂಧಿ ತತ್ವಗಳ ಬಗ್ಗೆ ಮಾತನಾಡುತ್ತಾರೆ. ಗಾಂಧೀಜಿಯವರು ನೌಖಾಲಿಗೆ ಹೋಗಬೇಕಾದ್ದಕ್ಕೆ ಯಾವ ಸನ್ನಿವೇಶಗಳು ಕಾರಣ ಎಂಬುದು ನನಗೆ ಗೊತ್ತಿದೆ. ಏಕೆಂದರೆ ಅಲ್ಲಿನ ಬಹುತೇಕ ಜನರು ಅಸ್ಪೃಶ್ಯರು. ಈಗ ನೀವು ಈ 50 ಲಕ್ಷ ಜನರನ್ನು ತನ್ನ ಪ್ರಾಥಮಿಕ ಕರ್ತವ್ಯವನ್ನು ಹೇಗೆ ನೆರವೇರಿಸಬೇಕೆಂಬುದೇ ಗೊತ್ತಿಲ್ಲದ ರಾಜ್‌ಗೆ ನೀವು ಒಪ್ಪಿಸಿದ್ದೀರಿ, ಅವರು ನಿಧಾನವಾಗಿ ಸಾಯುತ್ತಿದ್ದಾರೆ.

ಪಶ್ಚಿಮ ಪಾಕಿಸ್ಥಾನದಿಂದಲೂ ಜನರು ಬಂದಿದ್ದಾರೆ, 65 ಲಕ್ಷ ಜನ. ನೀವು 130 ಕೋಟಿ ರೂಪಾಯಿ ಖರ್ಚು ಮಾಡಿದ್ದೀರಿ. ಅವರಿಗೆ ಸಂಪೂರ್ಣವಾಗಿ ಪುನರ್‌ವಸತಿ

ಕಲ್ಪಿಸಲು ನಿಮಗೆ ಆಗುತ್ತದೆಯೇ? ಅವರಿಗೆ ಪರಿಹಾರ ಕೊಡುವ ವಿಷಯ ಏನಾಯಿತು? ಪರಿಶೀಲಿಸಿದ್ದ ಬೇಡಿಕೆಗಳ ವಿಷಯ ಏನಾಯಿತು? ರೂ. 500 ಕೋಟಿಯಷ್ಟು ಖರ್ಚಾಗುವುದೆಂದು ನನಗೆ ತಿಳಿದುಬಂದಿದೆ. ಅವರಿಗೆ ವ್ಯವಸಾಯ ಭೂಮಿ ಕೊಡುವ ವಿಚಾರ ಇದೆ. ಮಾಡಬೇಕಾದುದು ಇನ್ನೂ ಬೇಕಾದಷ್ಟಿದೆ. ನಾನು ಯಾರನ್ನೂ ದೂಷಿಸುತ್ತಿಲ್ಲ. ಅದು ಮಹತ್ತರ ಕಾರ್ಯ, 65 ಲಕ್ಷ ಜನರ ಪಾಲನೆ, ಪೋಷಣೆ ಮಾಡಬೇಕಾಗಿದೆ. ಜನರ ಮತ್ತು ಆಸ್ತಿಪಾಸ್ತಿಯ ಈ ಗುರುತರವಾದ ವಿನಿಮಯ ಕಾರ್ಯದಲ್ಲಿ ಬಹುತೇಕ ಜನರಿಗೆ ಭೂಮಿ ಕಾಣಿ ಒದಗಿಸಿದೆಯಾದರೂ ಮಾಡಬೇಕಾದ ಕಾರ್ಯ ಇನ್ನೂ ಬಹಳ ಇದೆ. ಹಿಂದೂಗಳು ಬಂದಿದ್ದಾರೆ. ಮುಸ್ಲಿಮರು ಹೋಗಿದಾರೆ. ನಾನೂ ಸರ್ಕಾರದಲ್ಲಿದ್ದೆ. ಈ ಕೆಲಸ ಮಾಡಬೇಕೆಂಬ ಅಪೇಕ್ಷೆ ಇತ್ತು. ಸರ್ಕಾರ ನಿರೀಕ್ಷಿಸದಿದ್ದಂಥ ವಿದ್ಯಾಮಾನಗಳು ಸಂಭವಿಸಿದವು. ಯಾವುದೇ ಸನ್ನಿವೇಶಗಳಲ್ಲಿ ಜನರ ವಿನಿಮಯ ಆಗಲಾರದು ಎಂದುಕೊಂಡಿದ್ದ ಸರ್ಕಾರವೇ ಈ ಆಗಾಧ ಒತ್ತಡಕ್ಕೆ ಮಣಿದಿದೆ. ಹಿಂದೂಗಳು ಮತ್ತು ಮುಸ್ಲಿಮರು ಇಬ್ಬರೂ ಅನುಭವಿಸಿದ ದುರ್ದಿನಗಳು ನಿಮಗೆ ಗೊತ್ತಿದೆ. ಇಷ್ಟೆಲ್ಲಾ ಆಗಿದ್ದರೂ, ಪಶ್ಚಿಮ ಪಾಕಿಸ್ತಾನದಿಂದ ಬಂದ ಈ ಭಾರಿ ಸಂಖ್ಯೆ ವಲಸಿಗರ ಬಗ್ಗೆ ನಮ್ಮ ಕರ್ತವ್ಯವನ್ನು ನೆರವೇರಿಸಲು ನಮಗೆ ಸಾಧ್ಯವಾಗಿಲ್ಲ. ಪೂರ್ವ ಪಾಕಿಸ್ತಾನದಿಂದ 30 ಲಕ್ಷ ಜನರು ಬಂದಿದ್ದಾರೆ. ಪಶ್ಚಿಮ ಬಂಗಾಳ ಸರ್ಕಾರವು ಮತ್ತೆ 30 ಕೋಟಿ ರೂಪಾಯಿ ಕೇಳಿದೆಯೆಂದು ನಿನ್ನೆ ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾಗಿದೆ. ನೀವು ರೂಪಿಸಿದ್ದ ಕಾರ್ಯಕ್ರಮಗಳೆಲ್ಲಾ ಏನಾದವು? ಪಾಕಿಸ್ತಾನವು ಪುನಃ ಐವತ್ತು ಅಥವಾ ಅರವತ್ತು ಲಕ್ಷ ಜನರನ್ನು ಹೊರದೂಡಿದರೆ, ಅವರು ಭಾರತಕ್ಕೆ ಬಂದರೆ ಆಗ ನೀವೇನು ಮಾಡುತ್ತೀರಿ? ಅವರ ಪುನರ್ ಸೌಕರ್ಯಕಷ್ಟೇ ನೀವು ಇನ್ನೂ ಮುನ್ನೂರು ಕೋಟಿ ರೂಪಾಯಿ ಖರ್ಚು ಮಾಡಬೇಕಾಗುತ್ತದೆ. ನೀವು ಪರಿಹಾರ ಕೊಡಬೇಕಾದರೆ, ಪೂರ್ವ ಪಾಕಿಸ್ತಾನದಲ್ಲಿ ಹಿಂದೂಗಳಿಗೆ ಸೇರಿದ ಕೊನೇಪಕ್ಷ 100 ಕೋಟಿ ರೂಪಾಯಿ ಆಸ್ತಿಪಾಸ್ತಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ ನೀವು ಅವರಿಗೆ ಪುನರ್ ಸೌಕರ್ಯ ಕೊಡಬಲ್ಲಿರಾ ಅಥವಾ ಅವರ ಪಾಲನೆ ಪೋಷಣೆ ನೋಡಿಕೊಳ್ಳಬಲ್ಲಿರಾ? ಭಾರತವನ್ನು ಈ ದುರ್ಬಲ ಪರಿಸ್ಥಿತಿಗೆ ಏಕೆ ನೂಕಬೇಕು ಮತ್ತು ಅದರ ಆರ್ಥಿಕ ವ್ಯವಸ್ಥೆ ಹಾಳಾಗುವುದಕ್ಕೆ ಏಕೆ ಆಸ್ಪದ ಕೊಡಬೇಕು?

ಕೆಲವೊಂದು ಮೂಲಭೂತ ಷರತ್ತುಗಳ ಮೇಲೆ ನಾವು ವಿಭಜನೆಯನ್ನು ಒಪ್ಪಿದ್ದೆವು. ಅಂಥ ಷರತ್ತುಗಳನ್ನು ಪಾಕಿಸ್ತಾನವು ಪಾಲಿಸಿಲ್ಲವೆಂದ ಮೇಲೆ ವಿಭಜನೆಯ ಮೂಲಾಧಾರವೇ ಇಲ್ಲದಂತಾಗುತ್ತದೆ. ಆ ದೃಷ್ಟಿಯಿಂದ, ವಿಭಜನೆ ನಿರರ್ಥಕವಾಗುತ್ತದೆ. ಹಾಗಾಗಿ, ಭಾರತ ತನ್ನ ವಚನಕ್ಕೆ ಬದ್ಧವಾಗಬೇಕಿಲ್ಲ. ಇದು ನಾನು ಹೇಳುವ ಮಾತಲ್ಲ. ಪ್ರಧಾನ ಮಂತ್ರಿಗಳೇ ಸ್ವತಃ ಪಾಕಿಸ್ತಾನವು ಅಲ್ಪ ಸಂಖ್ಯಾತರಿಗೆ ರಕ್ಷಣೆ ಕೊಡುವುದೇ ಮೂಲ ಷರತ್ತೆಂದು ಹೇಳಿದ್ದಾರೆ. ನಾವು ನಮ್ಮ ಕರ್ತವ್ಯ ಮಾಡಿದ್ದೇವೆ. ಹಲವಾರು ಕಷ್ಟ, ತೊಂದರೆಗಳಿದ್ದರೂ ಭಾರತ ಅಲ್ಪ

ಸಂಖ್ಯಾತರಿಗೆ ರಕ್ಷಣೆ ಕೊಟ್ಟಿದೆ. ನಾವು ಈ ಸಮಸ್ಯೆಯನ್ನು ಇಷ್ಟೊಂದು ಗಹನವಾಗಿ ಚರ್ಚಿಸುತ್ತಿರುವ ಆಧಾರದ ಮೇಲೆಯೇ ಯಾರಾದರೂ ತಿಳಿದುಕೊಳ್ಳಬಹುದಾಗಿದೆ. ನಾವು ಈ ಸಮಸ್ಯೆಯನ್ನು ಯಾವಾಗಲೂ ಕೋಮು ದೃಷ್ಟಿಯಿಂದ ನೋಡಿಲ್ಲ. ಇದು ರಾಜಕೀಯ ಸಮಸ್ಯೆ. ಇದು ಪ್ರಾಂತೀಯ ಸಮಸ್ಯೆ ಅಲ್ಲ. ಅದು ರಾಷ್ಟ್ರೀಯ ಸಮಸ್ಯೆ. ಇದಕ್ಕೆ ನೀವು ರಾಷ್ಟ್ರೀಯ ಪರಿಹಾರ ಕಂಡುಕೊಳ್ಳಬೇಕು. ಪಾಕಿಸ್ತಾನದಲ್ಲಿ ಹಿಂದೂಗಳ ಕೊಲೆ ಆಗುತ್ತಿದೆಯೆಂಬ ಕಾರಣಕ್ಕೆ ಕೆಲವರು ಮುಗ್ಧ ಮುಸ್ಲಿಮರನ್ನು ಕೊಲ್ಲಬಾರದು. ಅದೊಂದು ವಿಷಮ ಚಕ್ರವಾಗಿ ಬಿಡುತ್ತದೆ. ಅದು ಅತ್ಯಂತ ಅಮಾನವೀಯ. ಹಿಂದೂ ತತ್ವದ ತಿರುಳು ಏನೆಂದರೆ, ತಪ್ಪು ಮಾಡಿದವನಿಗೆ ಶಿಕ್ಷೆಯಾಗಬೇಕೇ ಹೊರತು ತಪ್ಪೇ ಮಾಡದ ಮುಗ್ಧನಿಗಲ್ಲ. ಅದು ಬಿಟ್ಟು, ನೀವು ಮುಗ್ಧನ ಕತ್ತು ಕೊಯ್ದರೆ, ಅದರಿಂದ ಪರಿಸರ ಕೆಟ್ಟು ಹೋಗುತ್ತದೆ. ಅದು ಜನರನ್ನು ಉಳಿಸುವುದಿಲ್ಲ.

ಆದ್ದರಿಂದಲೇ, ನಾವು, ಪ್ರಧಾನಮಂತ್ರಿಗಳೇ ಜಾಗೃತರಾಗಿ, ನಿಮಗಿರುವ ಜವಾಬ್ದಾರಿಯನ್ನು ಅರ್ಥ ಮಾಡಿಕೊಳ್ಳಿ, ಪರಿಸ್ಥಿತಿ ಈಗಾಗಲೇ ಹದಗೆಟ್ಟಿದೆ, ತೀರಾ ಹದಗೆಡಲು ಆಸ್ಪದ ಕೊಡಬೇಡಿ, ಮಾನವನ ಸ್ವಭಾವಸಿದ್ಧ ಕೋಪತಾಪಗಳಿಗೆ ಈ ಪರಿಸ್ಥಿತಿ ಒಳಗಾಗುವುದಕ್ಕೆ ಆಸ್ಪದ ಕೊಡಬೇಡಿ, ಜವಾಬ್ದಾರಿ ಸರ್ಕಾರವಾಗಿ ಕೆಲಸ ಮಾಡಿ, ನೀವೇ ಕೊಟ್ಟಿರುವ ವಾಗ್ದಾನಗಳನ್ನು ಈಡೇರಿಸಿ ಎಂದು ಪದೇ ಪದೇ ಒತ್ತಾಯಿಸುತ್ತಲೇ ಇದ್ದೇವೆ.

ಪುನರ್ ಸೌಕರ್ಯ ಕಲ್ಪಿಸಲೇಬೇಕು. ಆದರೆ, ಪುನರ್ ಸೌಕರ್ಯ ಒಂದೇ ಸಮಸ್ಯೆ ಅಲ್ಲ. ಮನೆ ಮಠದಲ್ಲಿ ನೆಮ್ಮದಿಯಿಂದ ಬಾಳುವಂತೆ ಈ ಜನರ ರಕ್ಷಣೆಯ ಮಾರ್ಗೋಪಾಯ ಕಂಡುಕೊಳ್ಳುವ ಸಮಸ್ಯೆ ಸಹ ಇದೆ.

ಪಾಕಿಸ್ತಾನದಲ್ಲಿ ಯಾವ ಪರಿಸ್ಥಿತಿ ಇದೆ? ಹಿಂದೂಗಳಿಗೆ ಅಲ್ಲಿ ಜಾಗ ಅಥವಾ ಸ್ಥಾನಮಾನ ಇಲ್ಲ. ಕಳೆದ ಮಾರ್ಚ್ ತಿಂಗಳಲ್ಲಿ ಪಾಕಿಸ್ತಾನ ರಾಜ್ಯಾಂಗ ಸಭೆಯ ಸದಸ್ಯರೊಬ್ಬರು, ರಾಜ್ಯಾಂಗ ಸಭೆಯಲ್ಲಿ ಮಾಡಿದ ಭಾಷಣದಿಂದ ಒಂದೆರಡು ವಾಕ್ಯಗಳನ್ನು ಓದಿ ಹೇಳುತ್ತೇನೆ. ಆ ಸದಸ್ಯರ ಹೆಸರು ಭೂಪೇಂದ್ರ ಕುಮಾರ ದತ್ತ. ಅವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗಿದ್ದವರು. ಭಾರತದ ಸ್ವಾತಂತ್ರ್ಯಕ್ಕಾಗಿ ಅವರ ಜೀವಮಾನದ ಇಪ್ಪತ ಮೂರು ವರ್ಷಗಳನ್ನು ಜೈಲಿನಲ್ಲಿ ಕಳೆದವರು. ಅವರು ಪಾಕಿಸ್ತಾನದಿಂದ ಹೊರ ಬರಲಿಲ್ಲ. ಅವರು ಅಲ್ಲೇ ಉಳಿಯಲು ನಿರ್ಧರಿಸಿದರು. ಕಳೆದ ಐದು ವರ್ಷಗಳಲ್ಲಿ ಪಾಕಿಸ್ತಾನದಲ್ಲಿ ಏನೇನು ಆಗುತ್ತಿದೆ ಎಂಬುದನ್ನು ಕಂಡಿದ್ದ ಅವರು, ಪಾಕಿಸ್ತಾನದ ರಾಜ್ಯಾಂಗ ಸಭೆಯಲ್ಲಿ ಎದ್ದು ನಿಂತು ಪಾಕಿಸ್ತಾನ ಸರ್ಕಾರದ ಮೇಲೆ ಆರೋಪ ಮಾಡಿದರು. ಭಾರತಕ್ಕೆ ಓಡಿಬರುವ ತರಾತುರಿಯಿಂದ ಅವರು ಹಾಗೆ ಮಾಡಲಿಲ್ಲ. ಅವರ ಎದೆಗಾರಿಕೆಯನ್ನು

ನಾನು ಮೆಚ್ಚುತ್ತೇನೆ. ಈ ಸಂಭಾವವಿತ ವ್ಯಕ್ತಿ ಕಂಡಿದ್ದಂತಹ ವಿದ್ಯಮಾನಗಳನ್ನು ನೋಡಿದಂತಹ ಹೆಚ್ಚು ಹೆಚ್ಚು ಜನರು ಆ ಎದೆಗಾರಿಕೆ ತೋರಲೆಂದು ನಾನು ಹಾರೈಸುತ್ತೇನೆ. ಅವರು ಏನು ಹೇಳಿದ್ದಾರೆ ಗೊತ್ತೇ? ಕೆಲವು ವಾಕ್ಯಗಳನ್ನು ಓದಿ ಹೇಳುತ್ತೇನೆ. ಏಕೆಂದರೆ ಪೂರ್ವ ಪಾಕಿಸ್ತಾನದಲ್ಲಿ ಏನೇನು ಆಗುತ್ತಿದೆ, ಅಧಿಕಾರಿಗಳಿಗೆ ಸಂಪೂರ್ಣವಾಗಿ ಶರಣಾಗದ ಹೊರತು ಅಲ್ಲಿ ಬದುಕಲು ಯಾರಿಗೂ ಸಾಧ್ಯವಿಲ್ಲವೆಂಬ ನೈಜ ಚಿತ್ರಣವನ್ನು ಅವು ಸದನಕ್ಕೆ, ಈ ದೇಶಕ್ಕೆ ಕೊಡುತ್ತವೆ:

> "ಪಾಕಿಸ್ತಾನದ ಈ ಭಾಗದ ಬಗ್ಗೆ ಹೇಳುವುದಾದರೆ, ಅಲ್ಪ ಸಂಖ್ಯಾತರನ್ನು ಬಹುಮಟ್ಟಿಗೆ ಹೊರದೂಡಲಾಗಿದೆ. ಸುಮಾರು ಒಂದು ಕೋಟಿ ಜನರನ್ನು ಇಲ್ಲಿ ಪ್ರತಿನಿಧಿಸುತ್ತಿರುವ ನಾವು ಪೂರ್ವ ಬಂಗಾಳದಲ್ಲಿ ಇದ್ದೇವೆ, ಸಂಪೂರ್ಣ ಹತಾಶೆಯಿಂದ ಬಾಳುತ್ತಿದ್ದೇವೆ. ಆ ಹತಾಶೆಯ ಜನರ ಪ್ರತಿನಿಧಿಯಾಗಿ ನಾನು ಇಲ್ಲಿ ನಿಂತಿದ್ದೇನೆ".

1950ರ ಫೆಬ್ರವರಿ ನಂತರ ಏನಾಯಿತೆಂಬುದನ್ನು ಅವರು ಹೇಳಿದ್ದಾರೆ. ನಾನು ಹಿಂದಿನ ಇತಿಹಾಸಕ್ಕೆ ಹೋಗುವುದಿಲ್ಲ. ಪಾಕಿಸ್ತಾನದ ಅಧಿಕಾರಿಗಳು ಉದ್ದೇಶಪೂರ್ವಕವಾಗಿಯೇ ದೆಹಲಿ ಒಪ್ಪಂದವನ್ನು ನುಚ್ಚುನೂರು ಮಾಡಿದ ರೀತಿಯನ್ನು ನಾನು ಹೇಳುತ್ತಿದ್ದೇನೆ. ನಾನು ಪಾಕಿಸ್ತಾನದ ಜನರ ಮೇಲೆ ಆರೋಪ ಮಾಡುತ್ತಿಲ್ಲ. ನನ್ನ ಎಲ್ಲಾ ಭಾಷಣಗಳಲ್ಲಿ, ಹೇಳಿಕೆಗಳಲ್ಲಿ ನಾನು ಪಾಕಿಸ್ತಾನದ ಸರ್ಕಾರದ ಮತ್ತು ಪಾಕಿಸ್ತಾನದ ಜನರ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಿದ್ದೇನೆ. ಭಾರತದ ಜನರೆಲ್ಲರೂ ಒಳ್ಳೆಯವರೆಂದು ಹೇಳುವುದು ಹೇಗೆ ಸಾಧ್ಯವಿಲ್ಲವೋ, ಪಾಕಿಸ್ತಾನದ ಜನರೆಲ್ಲರೂ ಕೆಟ್ಟವರೆಂದು ಹೇಳುವ ಉದ್ಧಟತನ ನನ್ನಲಿಲ್ಲ. ಒಳ್ಳೆಯವರೂ ಇರುತ್ತಾರೆ, ಕೆಟ್ಟವರೂ ಇರುತ್ತಾರೆ. ಆದರೆ ಅಲ್ಲಿನ ಸರ್ಕಾರ, ನಿರ್ದಯೆಯಿಂದ ದಬ್ಬಾಳಿಕೆಯಿಂದ, ಜನರು ಅದರಲ್ಲೂ ಹಿಂದೂಗಳು ತಮ್ಮ ಮೂಲಭೂತ ಹಕ್ಕುಗಳನ್ನು ಚಲಾಯಿಸಲು ಆಸ್ಪದ ಕೊಡದಂತೆ ರೀತಿಯಲ್ಲಿ ಕೆಲಸ ಮಾಡುತ್ತಿದೆ. 1950ರ ನಂತರ ಏನಾಯಿತೆಂದು ಅವರು ಹೇಳಿರುವುದನ್ನು ಇದನ್ನೇ. 1950ರ ನಂತರ ರಹಸ್ಯ ಸುತ್ತೋಲೆಗಳನ್ನು ಆ ಸರ್ಕಾರ ಹೊರಡಿಸಿದೆ.

> "ಅಲ್ಪ ಸಂಖ್ಯಾತ (ಹಿಂದೂ) ಸಮುದಾಯದ ಕೆಲವು ವ್ಯಕ್ತಿಗಳು ತರುತ್ತಿರುವ ಪ್ರಭಾವದ ವ್ಯಾಪ್ತಿ, ಸ್ವರೂಪ ಮತ್ತು ಮೂಲದ ಬಗ್ಗೆ ಮತ್ತು ಅಂಥವರ ವಿರುದ್ಧ ಕೆಲಸ ಮಾಡಬಹುದಾದ ಶಕ್ತಿಗಳು ಮತ್ತು ಜನರ ಬಗ್ಗೆ ವರದಿ" ಮಾಡುವಂತೆ ಎಲ್ಲ ಠಾಣೆಗಳ ಅಧಿಕಾರಿಗಳಿಗೆ ಸುತ್ತೋಲೆ

ಹೋಗಿದೆ. ಇದು ವರದಿ ತರಿಸಿಕೊಳ್ಳಲು ಕಳುಹಿಸಿರುವ ಪರಿಪೂರ್ಣ ಸುತ್ತೋಲೆ. "ಯಾರೇ ಮುಸ್ಲಿಮೇತರರಿಗೆ (ಪೂರ್ವ ಬಂಗಾಳದಲ್ಲಿರುವ) ನೌಕರಿ ಕೊಡುವುದಕ್ಕೂ ಮೊದಲು ಜಿಲ್ಲಾ ನ್ಯಾಯಾಧೀಶರ ಅಪ್ಪಣೆ ಪಡೆಯಬೇಕೆಂದು ಹಲವಾರು ವಾಣಿಜ್ಯ ಸಂಸ್ಥೆಗಳ ಮುಖ್ಯಸ್ಥರಿಗೆ ತಾಕೀತು ಮಾಡಿರುವ ಇನ್ನೊಂದು ಸುತ್ತೋಲೆ ಹೋಗಿದೆ. ಮುಸ್ಲಿಮೇತರ ವ್ಯಕ್ತಿಗೆ ನೌಕರಿ ಕೊಡುವುದಕ್ಕಾಗಿ ಕೆಲವು ಸಂಸ್ಥೆಗಳು ಜಿಲ್ಲಾ ನ್ಯಾಯಾಧೀಶರ ಅಪ್ಪಣೆ ಪಡೆಯುವ ಕಷ್ಟ ಹೊರಬಲ್ಲವು.

ಈ ಸುತ್ತೋಲೆ ಬಗ್ಗೆ ಸಭೆಯಲ್ಲಿ ಹೇಳಿದಾಗ, ಹಾಗೆ ಮಾಡಿಯೇ ಇಲ್ಲವೆಂದು ಹೇಳಲಾಯಿತು. ಆ ತರುವಾಯ, ಆ ಸುತ್ತೋಲೆಯ ಪ್ರತಿಯೊಂದನ್ನು ವಾಣಿಜ್ಯ ಸಂಸ್ಥೆಯ ಯೂರೋಪಿಯನ್ ಕಾರ್ಯದರ್ಶಿಯು ಸ್ಪೀಕರ್‌ಗೆ ಕಳುಹಿಸಿಕೊಟ್ಟರು. ಆ ಪ್ರತಿ ಆತನ ಬಳಿ ಇದೆ.

ಅದು ಆತನ ಹೇಳಿಕೆಯ ಎರಡನೇ ಭಾಗ. ಈಗ, ಆತನ ಹೇಳಿಕೆಯ ಕೊನೆಯ ಆದರೆ ಆತ್ಯಾಶ್ಚರ್ಯಕರವಾದ ಭಾಗವನ್ನು ಓದಿ ಹೇಳುತ್ತೇನೆ. ಅದಕ್ಕೂ ದೆಹಲಿ ಒಪ್ಪಂದಕ್ಕೂ ನೇರ ಸಂಬಂಧ ಇದೆ:

"ಕೆಲವು ತಿಂಗಳ ಹಿಂದೆ, ಇತ್ತೀಚಿನ ಸುತ್ತೋಲೆ ಹೊರಟಿದೆ. ಅದನ್ನು ಎಲ್ಲಾ ಜಿಲ್ಲಾ ನ್ಯಾಯಾಧೀಶರಿಗೆ ಕಳುಹಿಸಲಾಗಿದೆ. ಹದಿನಾಲ್ಕು ಪುಟಗಳ ಸುತ್ತೋಲೆ. ವಾಪಸ್ಸು ಬರುತ್ತಿರುವ ವಲಸಿಗರಿಗೆ ಭೂಮಿ ಮತ್ತು ಆಸ್ತಿಪಾಸ್ತಿಗಳನ್ನು ಯಾವ ರೀತಿಯಿಂದಾದರೂ ಹಿಂದಿರುಗಿಸಲೇಬಾರದು. ಅವುಗಳನ್ನು ನಿರಾಶ್ರಿತರಿಗೆ (ಮುಸ್ಲಿಂ) ಹಂಚಬೇಕೆಂದು ಅದು ಸೂಚನೆ ಇತ್ತಿದೆ. ವಾಪಸ್ಸು ಬರುತ್ತಿರುವ ವಲಸಿಗರ ಮೇಲೆ ಏನೋ ಆರೋಪ ಹೊರಿಸಿ ನುಣುಚಿಕೊಳ್ಳಬೇಕು. ಪ್ರತಿಯೊಂದು ಪ್ರಕರಣದಲ್ಲಿ ಕಾನೂನುಗಳ, ಆದೇಶಗಳ ಮತ್ತು ಕಾನೂನು ನಿರ್ಬಂಧನೆಗಳ ಪಟ್ಟಿಯನ್ನೇ ಒಂದಾದ ಮೇಲೊಂದನ್ನು ಮುಂದಿಡಬೇಕು. ತುಂಬಾ ಮಹತ್ವದ ಸಾಲು ಹೀಗಿದೆ; ಇತರ ಎಲ್ಲಾ ವಿಷಯಗಳಿಗೆ ಸಂಬಂಧಪಟ್ಟಂತೆ ಕಾರ್ಯ ನಿರ್ವಹಿಸುವಾಗ ಜಿಲ್ಲಾ ನ್ಯಾಯಾಧೀಶರುಗಳು ಈ ಮುಂದೆ ಹೇಳಿರುವ ಸೂಚನೆ

> ಯನ್ನು ಮನಸ್ಸಿನಲ್ಲಿಟುಕೊಂಡಿರಬೇಕು: "ಅಲ್ಪ ಸಂಖ್ಯಾತರೊಂದಿಗೆ ಮತ್ತು ಅವರ ಪ್ರತಿನಿಧಿಗಳೊಂದಿಗೆ ವಿನಯದಿಂದಲೇ ಮಾತನಾಡಿ, ತುಟಿಗಳ ಮೇಲೆ ನಗುವನ್ನು ತಂದುಕೊಂಡು ಮಾತನಾಡಿ, ಈ ತೊಂದರೆಗಳಿಗೆ ಕೆಲವೆ ಕೆಲವರು ಅಧೀನ ಅಧಿಕಾರಿಗಳು ಜವಾಬ್ದಾರರೇ ಹೊರತು ಬೇರಾರು ಅಲ್ಲವೆಂದು ಸನ್ಮಾನ್ಯ ಶ್ರೀ ಸಿ.ಸಿ. ಬಿಸ್ವಾಸ್ ಅವರಂಥ ವ್ಯಕ್ತಿಗಳಿಂದ ನೀವು ಪ್ರಶಂಸೆಗಳಿಸಿದ್ದಿರಿ, (ನನ್ನ ಸನ್ಮಾನ್ಯ ಮಿತ್ರ ಶ್ರೀ ಸಿ.ಸಿ. ಬಿಸ್ವಾಸ್‌ರ ಹದ್ದಿನ ಕಣ್ಣಿಗೆ ಮಣ್ಣೆರಚುತ್ತಿದ್ದಾರೆ), ನಿಮ್ಮ ಘನತೆಯನ್ನು ಉಳಿಸಿಕೊಳ್ಳಲು ಎಲ್ಲಾ ರೀತಿಯ ಪ್ರಯತ್ನ ಮಾಡಿ. ಈ ಸೂಚನೆಯನ್ನು ರಹಸ್ಯವಾಗಿಡಿ. ಇತರ ಅಧಿಕಾರಿಗಳನ್ನು ವಿಶ್ವಾಸಕ್ಕೆ ತೆಗೆದು ಕೊಳ್ಳಬೇಡಿ. ಅವರು ಕೆಲವೊಮ್ಮೆ ಕೆಲಸವನ್ನು ಅವ್ಯವಸ್ಥಿತಗೊಳಿಸುತ್ತಾರೆ ಮತ್ತು ಸರಿಯಾಗಿ ಮಾಡುವುದಿಲ್ಲ".

ದೆಹಲಿ ಒಪ್ಪಂದದ ನಿಬಂಧನೆಗಳನ್ನು ಕಾರ್ಯರೂಪಕ್ಕೆ ತರುತ್ತಿರುವ ಪಾಕಿಸ್ತಾನ ಸರ್ಕಾರದ ಪ್ರಾಮಾಣಿಕತೆ ಬಗ್ಗೆ ಇದಕ್ಕಿಂತಲೂ ಬೇರೆ ಇನ್ನೊಂದು ಪುರಾವೆ ನಿಮಗೆ ಬೇಕೆ? ಅದು ಭಾರತದಲ್ಲಿನ ಕೋಮುವಾದಿಗಳ ಮತ್ತು ಟೀಕಾಕಾರರ ಹೇಳಿಕೆಯಲ್ಲ. ಅದು, ಪಾಕಿಸ್ತಾನನದಲ್ಲಿ ರಾಜ್ಯಾಂಗ ಸಭೆಯಲ್ಲಿ ಖ್ವಾಜಾ ನಿಜಾಮುದ್ದೀನ್ ಹಾಗೂ ಇತರರ ಸಮ್ಮುಖದಲ್ಲಿ ಓದಿ ಹೇಳಿದ ಹೇಳಿಕೆ. ಆತ, ತನ್ನ ಪ್ರಾಣ ಲೆಕ್ಕಿಸದೆ ಹಾಗೆ ಮಾಡಿದ್ದಾನೆ. ಪಾಕಿಸ್ತಾನ ರಾಜ್ಯಾಂಗ ಸಭೆಯನ್ನು ಎದುರಿಸುವ ಕೆಚ್ಚು ಆತನಲ್ಲಿತ್ತು. ಆತನನ್ನು ಸಾಯಿಸಲೂಬಹುದು. ಆದರೂ, ಆತ ಪಾಕಿಸ್ತಾನ ಸರ್ಕಾರದ ಮುಖವಾಡವನ್ನು, ಅದರಲ್ಲೂ ಅವರುಗಳು ಆ ದೇಶದ ಆಡಳಿತವನ್ನು ನಡೆಸುತ್ತಿರುವ ರೀತಿಯನ್ನು ಬಯಲಿಗೆಳೆದಿದ್ದಾನೆ.

ಆ ವಿವರಗಳ್ನು ನಾನು ಓದ ಬಯಸುವುದಿಲ್ಲ. ಆದರೆ ಆತ ಯಾವ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ, ನೋಡಿ:

> "ದೆಹಲಿ ಒಪ್ಪಂದದ ಅಂತಸ್ಸತ್ವ ಫಲಿಸಲೇ ಇಲ್ಲ. (ಪಾಕಿಸ್ತಾನದಲ್ಲಿರುವ) (ಎರಡು) ಸಮುದಾಯಗಳ ನಡುವೆ ಇರುವ ಯಾವುದೇ ಸಂಬಂಧಗಳು ಅದಕ್ಕೆ ಕಾರಣ ಅಲ್ಲ. ಅಧಿಕಾರಿಗಳ ವಂಚನೆಗಳು, ಕುತಂತ್ರಗಳು ಮತ್ತು ಕೈವಾಡಗಳೇ ಹಾಗೆ ಮಾಡುವುದಕ್ಕೆ ಕಾರಣ. ಈ ಸುತ್ತೋಲೆಗಳು ಮತ್ತು ನಿರ್ಣಯಗಳೇ ಕಾರಣ".

ನಾನು ಈ ಹೇಳಿಕೆಯ ಆ ಭಾಗವನ್ನು ಓದಿ ಹೇಳಿದ್ದೇನೆ. ನೀವು ಆಗಾಗ ಕೊಡುತ್ತಿದ್ದ ಸೂಚನೆ ಪ್ರಕಾರ, ಆ ಇಡೀ ಹೇಳಿಕೆಯನ್ನು ಸದನದ ಮುಂದಿಡುವುದು ನನ್ನ ಕರ್ತವ್ಯ ಸನ್ಮಾನ್ಯರೇ, ತಾವು ಅನುಮತಿ ಕೊಟ್ಟರೆ, ನಾನು ಅದನ್ನು ಸದನದ ಮುಂದಿಡುತ್ತೇನೆ. ಯಾರೇ ಸದಸ್ಯರಿಗೆ ಆ ಇಡೀ ಹೇಳಿಕೆಯನ್ನು ಓದುವ ಆಸಕ್ತಿ ಇದ್ದರೆ, ಓದಿಕೊಳ್ಳಲಿ.

ನಾನು ಬೇರೆ ಬೇರೆ ದೃಷ್ಟಾಂತಗಳನ್ನು ಕೊಡಬಲ್ಲೆ. ಆದರೆ, ನಾನು ಕೂಡ ಬಯಸುವುದಿಲ್ಲ. ದಬ್ಬಾಳಿಕೆ ಸ್ವರೂಪ ಎಂಥಾದ್ದು? ಹಿಂದೊಂದು ದಿನ ನನ್ನ ಮಿತ್ರ, ಸನ್ಮಾನ್ಯ ಶ್ರೀ ಜೈನ್ ಅವರು "ಈಗ, ದಬ್ಬಾಲಿಕೆಯ ಅಂತಹ ದೃಷ್ಟಾಂತಗಳು ನಮಗೆ ಕಾಣುತ್ತಿಲ್ಲ" ಎಂದು ಹೇಳಿದ್ದರು. ಅವರು ಹೇಗೆ ದೃಢಪಡಿಸಿಕೊಂಡರು? ಅವರಿಗೆ, ಹೌದೆಂದು ಹೇಳುವುದಕ್ಕೂ ಆಗುವುದಿಲ್ಲ. ಅಲ್ಲವೆಂದು ಹೇಳುವುದಕ್ಕೂ ಆಗುವುದಿಲ್ಲ. ಆದರೂ, ನನ್ನ ಮಿತ್ರ ಶ್ರೀ ಜೈನ್ ಅವರು ಆ ರೀತಿಯ ಹೇಳಿಕೆ ಇತ್ತರು. ತನ್ನ ಹಾಸ್ಯಸ್ಪದ ಹೇಳಿಕೆಗೆ ಈಗ ನಗುತ್ತಿದ್ದಾರೆ ನನ್ನಲ್ಲಿ ಐದು ನೂರು ದೃಷ್ಟಾಂತಗಳಿವೆ. ಅವನ್ನೆಲ್ಲಾ ಓದಲಿಕ್ಕೆ ನನಗೆ ಸಾಧ್ಯವಾಗಿಲ್ಲ.

ನಾನು, ಈ ಸದನಕ್ಕೆ ಬೇಸರ ಉಂಟು ಮಾಡಬಯಸುವುದಿಲ್ಲ. ಆದರೆ, ಈ ದೌರ್ಜನ್ಯಗಳ ಅತ್ಯಂತ ನೋವಿನ ಹಾಗೂ ಅತ್ಯಂತ ಹೃದಯವಿದ್ರಾವಕ ಅಂಶ ಎಂದರೆ ಹಿಂದೂ ಮಹಿಳೆಯರ ಬಗ್ಗೆ ಘೋರವಾಗಿ ವರ್ತಿಸಿರುವ ರೀತಿ. ಇಂಥದೊಂದು ವಿಷಯದ ಮೇಲೆ ಸಾರ್ವಜನಿಕವಾಗಿ ಯಾರೇ ಮಾತನಾಡ ಹೊರಟರೂ ಅವರ ಗಂಟಲು ಕಟ್ಟುತ್ತದೆ. ಆ ಹೆಣ್ಣು ಮಕ್ಕಳ ಹೆಸರು, ವಿಳಾಸ, ಅವರುಗಳ ಮೇಲಾಗಿರುವ ಅನಾಚಾರದ ರೀತಿ ನೋಡಿದರೆ, ಯಾರೇ ಆಗಲಿ ದಿಗ್ಭ್ರಾಂತರಾಗುತ್ತಾರೆ. ಸನ್ಮಾನ್ಯರೇ, ಒಬ್ಬಳೇ ಒಬ್ಬಳು ಸೀತೆಯ ಅಪರಹಣದಿಂದ ರಾಮಾಯಣ ಆಗಿದೆ. ಒಬ್ಬಳೇ ಒಬ್ಬಳು ದ್ರೌಪದಿಯಿಂದ ಮಹಾಭಾರತವೇ ಆಗಿ ಹೋಗಿದೆ. ಇಂದು ಭಾರಿ ಪ್ರಮಾಣದಲ್ಲಿ ಅತಿರೇಕಗಳು ಆಗಿದ್ದರೂ ನಾವು ಕೈಕಟ್ಟಿಕೊಂಡು ಕುಳಿತಿದ್ದೇವೆ, ಅಸಹಾಯಕರಾಗಿದ್ದೇವೆ. ನಪುಂಸಕರಾಗಿದ್ದೇವೆ. ಇದನ್ನು ಸರ್ಕಾರದ ಗಮನಕ್ಕೆ ಬಂದರೆ, " ನಮಗೆ ವಾಸ್ತವಿಕ ಪುರಾವೆ ಬೇಕು" ಎನ್ನುತ್ತಾರೆ. ಇದನ್ನು ಯಾರು ರುಜುವಾತುಪಡಿಸುತ್ತಾರೆ? ಅಂಥ ಘಟನೆಗಳು ಜನರು ನ್ಯಾಯಾಲಯಕ್ಕೆ ಹೋಗಿ ರುಜುವಾತುಪಡಿಸಲು ಎಂದೆಂದಿಗೂ ಸಾಧ್ಯವೆ? ಪಾಕಿಸ್ತಾನ ಸರ್ಕಾರಕ್ಕೆ ಆ ಬಗ್ಗೆ ತಿಳಿಸಿರುವುದಾಗಿ ಹೇಳಲಾಗಿದೆ. ಪಾಕಿಸ್ತಾನ ಸರ್ಕಾರದ ಉತ್ತರ. "ಇಲ್ಲ, ಹಾಗೇನೂ ಆಗಿಲ್ಲ. ಆ ವಿವರಗಳನ್ನು ನಾನು ಹೇಳಬಯಸುವುದಿಲ್ಲ. ಅಂಥವು ಬಹಳಷ್ಟಿವೆ. ಪಟ್ಟಿ ಕೊಡಬಲ್ಲೆ. ಏನಾಗುತ್ತದೆ? ಹೆಚ್ಚೆಂದರೆ, ಅದು ಭಾರತ ಸರ್ಕಾರದ ದಾಖಲೆ ಇಲಾಖೆಗೆ ಹೋಗಿ ಬೀಳುತ್ತದೆ. ಅದರಿಂದ ನತದೃಷ್ಟ ಜನರಿಗೆ ಏನೂ ಸಹಾಯ ಆಗುವುದಿಲ್ಲ. ನಾನು, ನಿಮಗೆ ನಾಲ್ಕು ಅಥವಾ ಐದು ದೌರ್ಜನ್ಯಗಳನ್ನು ಹೇಳುತ್ತೇನೆ. ಒಂದು, ಚಿತ್ತಗಾಂಗ್ ಗುಡ್ಡಗಾಡು ಜನರಿಗೆ ಸಂಬಂಧಿಸಿದ್ದು. ಪ್ರಧಾನ ಮಂತ್ರಿಗಳಿಗೆ ಅದು ನೆನಪಿರಬಹುದು.

ಒಂದು ಸಣ್ಣ ಪ್ರದೇಶದಲ್ಲಿ ಶೇ. 95 ರಷ್ಟಿದ್ದ ಬೌದ್ಧರ ಮತ್ತು ಗುಡ್ಡಗಾಡು ಜನರ ಗತಿ ಬಗ್ಗೆ ನಾವು ಚರ್ಚಿಸಿದ್ದೆವು. ಅಲ್ಲಿ ಮುಸ್ಲಿಮರ ಸಂಖ್ಯೆ ಕೇವಲ ಶೇ. 2 ರಿಂದ 5 ರಷ್ಟಿದ್ದರೂ ಅದು ದುರದೃಷ್ಟವಶಾತ್ ಭಾರತದ ಕೈಬಿಟ್ಟು ಹೋಯಿತು. ಸನ್ಯಾನ್ಯರೇ ಅವರನ್ನು ಹೊರಹಾಕಿದ್ದು ತಮಗೆ ಗೊತ್ತಿಲ್ಲವೇ? 500ರ ಜನ ಇಡೀ ಪ್ರದೇಶವನ್ನು ತೆರವು ಮಾಡಲಾಗಿದೆ. 500 ಚಿತ್ತಗಾಂಗ್ ಗುಡ್ಡಗಾಡು ಜನರನ್ನು ಇತ್ತೀಚೆಗೆ ಬಲವಂತವಾಗಿ ಹೊರಹಾಕಲಾಗಿದೆ. ಅವರನ್ನು ಯಾವ ರೀತಿ ಉದ್ದೇಶಪೂರ್ವಕವಾಗಿ ಹೊರಹಾಕಲಾಯಿತು, ಗೊತ್ತೇ. ಈಗ ಅವರೆಲ್ಲಾ ಅಸ್ಸಾಂನಲ್ಲಿ ಭಿಕ್ಷುಕರಾಗಿ ಅಲೆದಾಡುತ್ತಿದ್ದಾರೆ. ಪಶ್ಚಿಮ ದಿನಜ್‌ಪುರದ ಉತ್ತರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಇತ್ತಿರುವ ಹೇಳಿಕೆಯನ್ನು ನಾನು ಈಗ ಪ್ರಧಾನ ಮಂತ್ರಿಗಳು ಗಮನಕ್ಕೆ ತರುತ್ತೇನೆ. ಮುಸ್ಲಿಮರು ಮತ್ತು ಕಾಂಗ್ರೆಸ್ ನಾಯಕ ಇತ್ತಿರುವ ಹೇಳಿಕೆಗಳನ್ನು ವಿಶೇಷ ಅಸ್ಥೆ ವಹಿಸಿ ಸಂಗ್ರಹಿಸಿದ್ದೇನೆ. ಅವರ ಬಗ್ಗೆ ಪ್ರಧಾನ ಮಂತ್ರಿಗಳು ಶೀಘ್ರ ನಿರ್ಧಾರ ತೆಗೆದುಕೊಳ್ಳಲಿ ಎಂಬುದು ನನ್ನ ಆಶಯ. ಕಳೆದ ಕೆಲವು ವಾರಗಳಲ್ಲಿ ಪೂರ್ವ ಬಂಗಾಳದಿಂದ ಪಶ್ಚಿಮ ಬಂಗಾಳಕ್ಕೆ ಬರುತ್ತಿದ್ದಾಗ ಅವರುಗಳ ಮೇಲೆ ಯಾವ ರೀತಿಯ ದೌರ್ಜನ್ಯಗಳಾಗಿವೆ ಎಂಬ ಬಗ್ಗೆ ಕೆಲವರು ಮುಸ್ಲಿಮರ ಸಂಗಡ ದಿನಜ್‌ಪುರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ವಿಚಾರಣೆ ಮಾಡಿದ್ದಾರೆ. ಅದರ ವರದಿ ಪ್ರಕಟವಾಗಿದೆ. ಭಾರತ ಸರ್ಕಾರದ ಕೆಲವರು ಅಧಿಕಾರಿಗಳಿಗೆ-ಶ್ರೀ ಬರ್ಮನ್, ಕಲೆಕ್ಟರ್ ಆಫ್ ಸೆಂಟ್ರಲ್ ಎಕ್ಸೈಜ್, ಶಿಲ್ಲಾಂಗ್ ಅವರ ಬಗ್ಗೆ ಹೇಗೆ ನಿರ್ದಯದಿಂದ ವರ್ತಿಸಲಾಗಿದೆ, ಅವಮಾನ ಮಾಡಲಾಗಿದೆ? ಪಾಕಿಸ್ತಾನದಿಂದ ಹೊರಬರುತ್ತಿದ್ದಾಗ ಅವರು ಅದೇ ಬಗೆಯ ಕಿರುಕುಳದ ಘಟನೆಗಳನ್ನು ಸ್ವತಃ ನೋಡಿದ್ದಾರೆ-ಯಾವ ರೀತಿಯ ಕಿರುಕುಳ ಕೊಡಲಾಗಿದೆ ಮತ್ತು ಅವಮಾನ ಮಾಡಲಾಗಿದೆ ಎಂಬುದನ್ನು ನಾನು ಪ್ರಧಾನ ಮಂತ್ರಿಗಳಿಗೆ ಹೇಳುತ್ತಿದ್ದೇನೆ. ಅಸ್ಸಾಂ ಸರ್ಕಾರ, ಪೂರ್ವ ಬಂಗಾಳ ಸರ್ಕಾರಕ್ಕೆ ಕಟುವಾದ ತೀವ್ರ ಪ್ರತಿಭಟನೆ ಕಳುಹಿಸಿದೆಯೆಂಬ ಹೇಳಿಕೆಯನ್ನು ಓದಿ ನನ್ನ ಮನಸ್ಸು ತುಂಬಾ ಹಗುರವಾಯಿತು. ಅದು ಕೇವಲ ತೀವ್ರ ಪ್ರತಿಭಟನೆ. ಬಹುಷಃ ಈಗ ಅಲ್ಲಿ ಎಲ್ಲವೂ ಸರಿಯಾಗಿರಬಹುದು.

ಇನ್ನು ಮತಾಂತರ, ಮತಾಂತರ ಹೆಚ್ಚು ಸಂಖ್ಯೆಯಲ್ಲಿ ಆಗಿದೆ. ನೂರಾರು ಸಂಗತಿಗಳು ವರದಿಯಾಗಿವೆ. ಪಾಕಿಸ್ತಾನದ ಪತ್ರಿಕೆ 'ಆಜಾದ್'ನಿಂದ ಒಂದು ತುಣುಕನ್ನು ನಾನು ಹೇಳುತ್ತೇನೆ. ಆ ಪತ್ರಿಕೆಯ ಆ ಭಾಗವನ್ನು ನಾನು ಕತ್ತರಿಸಿ ಇಟ್ಟುಕೊಂಡಿದ್ದೇನೆ ಇಲ್ಲೇ ಇದೆ. ಹಿಂದೆ, ಮಹಾನ್ ಕಾಂಗ್ರೆಸ್ ನಾಯಕರಾಗಿದ್ದ ಮೌಲಾನ ಅಕ್ರಂ ಖಾನ್ ಅವರು ನೇತೃತ್ವದಲ್ಲಿ ನಡೆದಿದೆ. ಪ್ರಾಯದ ಹಿಂದೂ ಹೆಣ್ಣು ಮಕ್ಕಳು ಹೇಗೆ ಇಸ್ಲಾಂಗೆ ಮತಾಂತರಗೊಳ್ಳುತ್ತಿದ್ದಾರೆಂಬುದನ್ನು ಅವರು ವಿವರಿಸಿದ್ದಾರೆ. ಹುಡುಗಿಯರು ಮನಸ್ಸಿಲ್ಲದಿದ್ದರೂ ಮತಾಂತರಗೊಳ್ಳುತ್ತಿದ್ದಾರೆಂದು ಅವರು ಒತ್ತಿ ಹೇಳಿದ್ದಾರೆ. ಆ ಹುಡುಗಿಯರು ಮತಾಂತರಗೊಳ್ಳಲು ಪದೇ ಪದೇ ಒತ್ತಾಯ ತರುತ್ತಿದ್ದಾರೆಂದರೆ, ಮುಸ್ಲಿಂ

ನಾಯಕರು ಒಪ್ಪಿಕೊಳ್ಳದೇ ಬೇರ ಮಾರ್ಗವೇ ಇಲ್ಲವಂತೆ. ಅವರುಗಳ ಹೆಸರುಗಳು ಪತ್ರಿಕೆಯಲ್ಲಿ ಬಂದಿದೆ. ಅಲ್ಲಿನ ಬಹುಸಂಖ್ಯಾತ ಸಮುದಾಯದವರು ದಾನಶೀಲರು ದಯಾಶೀಲರಾದ್ದರಿಂದ, ಮದುವೆಗಳಿಗೆ ಬೇಗನೆ ಸಿದ್ಧತೆಯಾಗುತ್ತವಂತೆ. ಹುಡುಗಿಯರ ಇಸ್ಲಾಂಗೆ ಮತಾಂತರ ಗೊಂಡರೆ ಮಾತ್ರವೇ ನಾನು ಮದುವೆಯಾಗುತ್ತೇವೆಂದು ಮುಸ್ಲಿಂ ಹುಡುಗರು ಮುಂದೆ ಬರುತ್ತಾರಂತೆ. ಕೊನೆಯ ಅಂಕ ನೋಡಿ. ಪುನರ್ ವಸತಿಗಾಗಿ ಪಶ್ಚಿಮ ಬಂಗಾಳಕ್ಕೆ ಬಂದಿದ್ದ, ಈ ಮತಾಂತರಗೊಂಡವರ ಬಂಧುಗಳು ಅಲ್ಲಿಗೆ ವಾಪಸು ಹೋಗಿದ್ದಾರೆ. ಅವರೂ ಸಹ ಸ್ವಯಿಚ್ಛೆಯಿಂದ ಇಸ್ಲಾಂಗೆ ಮತಾಂತರಗೊಳ್ಳುತ್ತಿದ್ದಾರಂತೆ.

ನಾನು ಇನ್ನೆರಡು ದೃಷ್ಟಾಂತಗಳನ್ನು ಹೇಳುತ್ತೇನೆ. ಶ್ರೀ ಪಿ.ಸಿ. ರಾಯ್, ಭಾರತದ ಶ್ರೇಷ್ಠ ವಿಜ್ಞಾನಿಗಳಲ್ಲಿ ಒಬ್ಬರು. ಜೆ.ಸಿ. ಬೋಸ್, ಸಿ.ಆರ್. ದಾಸ್‌ರಂಥ ಬಂಗಾಳದ ಶ್ರೇಷ್ಠ ಮಹನೀಯರು, ಎಲ್ಲರೂ ಪೂರ್ವ ಬಂಗಾಳದಿಂದ ಬಂದವರೇ. ಸರ್ ಪಿ.ಸಿ. ರಾಯ್ ಅವರ ಹಳ್ಳಿಯಲ್ಲಿ ಕೆಲವು ವಾರಗಳ ಹಿಂದೆ, ರಹದಾರಿ ವ್ಯವಸ್ಥೆಯನ್ನು ಜಾರಿಗೆ ತಂದ ನಂತರ, ಭಯ ಹುಟ್ಟಿಸುವ ಘಟನೆಯೊಂದು ನಡೆದಿದೆ. ಅಲ್ಲಿನ ಹೆಸರುವಾಸಿ ವೈದ್ಯ ಶ್ರೀ ಬಿಹಾರಿ ಲಾಲರ ಬಳಿಗೆ ಕೆಲವರು ಮುಸ್ಲಿಮರು ಬಂದು ನಮ್ಮನ್ನೆಲ್ಲಾ ಊಟಕ್ಕೆ ಕರೆಯಲೇಬೇಕೆಂದು ಹೇಳಿದರು. ವೈದ್ಯರು ಒಪ್ಪಿಕೊಂಡರು. ನಾವು 50 ಜನರಿದ್ದೇವೆ. ಆದರೆ 80 ಜನ ಬರುತ್ತಾರೆ ಎಂದು ಹೇಳಿದರು. ಸಹಜವಾಗಿಯೇ ವೈದ್ಯರಿಗೆ ಕಸಿವಿಸಿಯಾಯಿತು. ಇಷ್ಟೊಂದು ಜನಕ್ಕೆ ಊಟಕ್ಕೆ ವ್ಯವಸ್ಥೆ ಹೇಗೆ ಮಾಡುವುದು ಎಂದು ಚಿಂತಿಸಿದರು. ಆ ಮುಸ್ಲಿಮರು "ನೀವೇನೂ ಚಿಂತಿಸಬೇಡಿ, ನಾವು, ಎಲ್ಲಾ ವ್ಯವಸ್ಥೆ ಮಾಡುತ್ತೇವೆ ಎಂದು ಹೇಳಿದರು. ಆ ಮುಸ್ಲಿಮರು ಗೋಶಾಲೆಗೆ ಹೋಗಿ ಒಂದು ಕರು ತಂದು, ಕೊಯ್ದು ಆಹಾರ ಸಿದ್ಧಪಡಿಸಿದರು. ವೈದ್ಯರನ್ನೂ ತಿನ್ನುವಂತೆ ಹೇಳಿದರು. ವೈದ್ಯರು ತಿನ್ನಲೇ ಬೇಕಾಯಿತು. ಊಟ ಮುಗಿದು ಎಲ್ಲರೂ ಹೋದ ಮೇಲೆ ವೈದ್ಯರೂ ತನ್ನ ರೂಮಿಗೆ ಹೋಗಿ ಆತ್ಮಹತ್ಯೆ ಮಾಡಿಕೊಂಡರು. ಕೆಲವು ಗಂಟೆಗಳಾದ ಮೇಲೆ ಮನೆಗೆ ಬಂದ ಅವರ ಹೆಂಡತಿ ತನ್ನ ಗಂಡನ ಶವವನ್ನು ನೋಡಿ ತಾನೂ ಆತ್ಮಹತ್ಯೆ ಮಾಡಿಕೊಂಡಳು. ಆ ಕುಟುಂಬದವರು ಪಶ್ಚಿಮ ಬಂಗಾಳಕ್ಕೆ ಬಂದಿದ್ದಾರೆ. ವಿವರಗಳು ಪ್ರಕಟ ಆಗಿವೆ.

ಇನ್ನೊಂದು ಘಟನೆ ರಂಗಪುರದಲ್ಲಿ ನಡೆದಿದೆ. ಅದೂ, ಒಬ್ಬ ವೈದ್ಯರಿಗೆ ಸಂಬಂಧಿಸಿದ್ದು, ಅಲ್ಲೊಬ್ಬ ಮುಸ್ಲಿಮನಿಗೆ ಆ ವೈದ್ಯರ ಮಗಳನ್ನು ಲಪಟಾಯಿಸುವ ಉದ್ದೇಶ ಇತ್ತು. ಆ ಮುಸ್ಲಿಂ, ಆ ವೈದ್ಯರ ಮನೆಗೆ ಹೋಗಿ ನಮ್ಮ ಮನೆಗೆ ಬರಬೇಕೆಂದು ಕರೆದ. ವೈದ್ಯರನ್ನು ಅಲ್ಲೇ ಕೂಡಿ ಹಾಕಿ, ಅವರ ಕುಟುಂಬದವರನ್ನು ತನ್ನ ಮನೆಗೆ ಕರೆದುಕೊಂಡು ಬಂದ. ಪರಿಸ್ಥಿತಿ ಬಿಗಡಾಯಿಸಿದ್ದನ್ನು ನೋಡುತ್ತಿದ್ದ ಹುಡುಗಿ ತನ್ನ ತಂದೆಯ ಜೀವ ಉಳಿಸಲು ಮದುವೆಗೆ ಒಪ್ಪಿದಳು. ತಂದೆಯನ್ನು ಬಿಟ್ಟರು. ಮರು ದಿನ ಮದುವೆ ಆಯಿತು. ಸಾಯಂಕಾಲ ಹುಡುಗಿ ಆತ್ಮಹತ್ಯೆ ಮಾಡಿಕೊಂಡಳು.

ಇಂಥ ದಾರುಣ ವೃತ್ತಾಂತಗಳು ಇನ್ನೆಷ್ಟಿವೆಯೋ ಗೊತ್ತಿಲ್ಲ. ಅಂಥವಲ್ಲಿ ಕೆಲವು ಘಟನೆಗಳ ವಿಳಾಸಗಳು, ಹೆಸರುಗಳು ನನ್ನ ಬಳಿ ಇವೆ. ತೆರೆಮರೆಯಲ್ಲಿ ಕ್ರೌರ್ಯ ತುಂಬಿ ತುಳುಕಾಡುತ್ತಿದೆ. ಆ ದೇಶದ ಆಡಳಿತ ನೈತಿಕವಾಗಿ ಕುಸಿದಿದೆ. ದಿನದಿನವು ಭಾರಿ ಸಂಖ್ಯೆಯಲ್ಲಿ ಜನರು ಬರುತ್ತಿದ್ದಾರೆ. ಅಷ್ಟೊಂದು ದೀರ್ಘ ಕಾಲದಿಂದಲೂ ಆಗುತ್ತಿರುವ ಅವನ್ನೆಲ್ಲಾ ಆ ಜನರು ತಡೆದುಕೊಳ್ಳುವುದು ಎಷ್ಟು ಕಷ್ಟ ಎಂಬುದನ್ನು ನಾನು ಊಹಿಸಬಲ್ಲೆ. ರಂಗಪುರ ಹಳ್ಳಿಯಲ್ಲಿ ಸೆಪ್ಟೆಂಬರ್ 28 ರಂದು ಆಗಷ್ಟೇ ಹೆರಿಗೆ ಆಗಿದ್ದ ಹಿಂದು ಹೆಣ್ಣು ಮಗಳೊಬ್ಬಳನ್ನು ಬಲವಂತದಿಂದ ರಾತ್ರಿ ಹೊತ್ತು ಎತ್ತಿಕೊಂಡು ಹೋಗಲಾಗಿದೆ. ಮರು ದಿನ ಹೊಲದಲ್ಲಿ ಆಕೆಯ ರಕ್ತಸಿಕ್ತ ಶವ ಕಂಡುಬಂತು. ಇವೆಲ್ಲಾ ತೀರಾ ಭಯಂಕರ ಘಟನೆಗಳು. ಅಂಥ ಹಲವಾರು ದೃಷ್ಟಾಂತಗಳು ನಮ್ಮ ಬಳಿ ಇವೆ.

ಗಡಿಯಲ್ಲಿ ಚಕಮಕಿಗಳು ಆಗುತ್ತಿವೆ. ಇಂದು ಈ ಅಭದ್ರತೆ ಏಕಾಗುತ್ತಿದೆ? ಇಂದಿನ, ಹಿಂದೂಸ್ತಾನ್ ಟೈಮ್ಸ್ ಪತ್ರಿಕೆಯಲ್ಲಿ ಗಡಿಯಲ್ಲಾಗುತ್ತಿರುವ ಚಕಮಕಿಯ ವಿವರಗಳು ಬಂದಿವೆ. ಅಸ್ಸಾಂ ಗಡಿಯಲ್ಲಿ ಪಾಕಿಸ್ತಾನವು ಎರಡು ದಿನಗಳಿಂದ ಗುಂಡು ಹಾರಿಸುತ್ತಿದೆ. ತಮಾಷೆ ಎಂದರೆ, ಆ ಪ್ರದೇಶದಲ್ಲಿ ಶಾಂತಿಯನ್ನು ಹೇಗೆ ನೆಲೆ ಗೊಳಿಸಬೇಕೆಂದು ಶಿಲ್ಲಾಂಗ್‌ನಲ್ಲಿ ಮುಖ್ಯ ಕಾರ್ಯದರ್ಶಿಗಳ ಸಭೆ ನಡೆಯುತ್ತಿರುವಾಗಲೇ ಆ ಘಟನೆಗಳು ಆಗುತ್ತಿವೆ. ಪೂರ್ವ ಬಂಗಾಳ ಸರ್ಕಾರಕ್ಕೆ ಕಟುವಾದ ತೀವ್ರ ಪ್ರತಿಭಟನೆ ಕಳುಹಿಸಲಾಗಿದೆ. ತ್ರಿಪುರಾ ಗಡಿಯಲ್ಲಿ, ಪ್ರಧಾನ ಮಂತ್ರಿಗಳಿಗೆ ಗೊತ್ತಿರುವಂತೆ- ತಂತಿ ಸಂದೇಶದ ಒಂದು ಪ್ರತಿ ಅವರಿಗೂ ಕಳುಹಿಸಲಾಗಿದೆ-ಕೆಲವು ದಿನಗಳ ಹಿಂದೆ, ಜನರ ದೊಡ್ಡಸಂಖ್ಯೆಯೊಂದು ನಮ್ಮ ಗಡಿಯ ಒಳಗಡೆಗೆ ಒಂದು ಭಾರತದ ಭಾಗದಲ್ಲಿ ಪಾಕಿಸ್ತಾನದ ಧ್ವಜವನ್ನು ಹಾರಿಸಿದೆ. ಅದು ಒಂದು ಸಣ್ಣ ವಿಷಯ ಇರಬಹುದು. ಆದರೆ, ಈ ಬಗ್ಗೆ ಘಟನೆಗಳೂ ಆಗುತ್ತಿವೆ. ಪ್ರಧಾನ ಮಂತ್ರಿಗಳು 'ಕೆಲವೊಂದು ಅಂಥ ಘಟನೆಗಳು ಹೊರತು ಎಲ್ಲವೂ ಸರಿ ಇದೆ'ಯೆಂದು ಹೇಳುತ್ತಿದ್ದಾರೆ ಜನರ ಮನಸ್ಸಿನಲ್ಲಿ ಅದು ಯಾವ ಭಾವನೆ ಮೂಡಿಸುತ್ತದೆ? ತನ್ನ ಅಸಹಾಯಕತೆಯನ್ನು ಅವರು ಹೇಳಬಹುದು, ಆದರೆ ನಿಮ್ಮ ದಮ್ಮಯ್ಯ ಯಾವುದು ನಿಜ ಅಲ್ಲವೋ ಅದನ್ನು ಮಾತ್ರ ಹೇಳಬೇಡಿ. ಅದು ಸೀಳು ಗಾಯಕ್ಕೆ ಉಪ್ಪು ಸುರಿದಂತಾಗುತ್ತದೆ. ಅವರಿಗೆ ರಕ್ಷಣೆ ಕೊಡಲು ನಿಮಗೆ ಆಗದಿರಬಹುದು, ಅವರಿಗೆ ಸಹಾಯ ಮಾಡಲು ನಿಮಗೆ ಆಗದಿರಬಹುದು, ಆದರೆ ಪರಿಸ್ಥಿತಿಯ ತೀವ್ರತೆಯನ್ನು ಸಣ್ಣದೆಂದು ಹೇಳಬೇಡಿ. ದುರಾದೃಷ್ಟವಶಾತ್, ಕಳೆದ ಕೆಲವು ದನಗಳಲ್ಲಿ ಪ್ರಧಾನ ಮಂತ್ರಿಗಳು ಇತ್ತಿರುವ ಹೇಳಿಕೆಗಳನ್ನು ಪಾಕಿಸ್ತಾನ ತನ್ನ ಪ್ರಚಾರಕ್ಕಾಗಿ ಬಳಸಿಕೊಳ್ಳುತ್ತಿದೆ. "ಭಾರತದ ಪ್ರಧಾನ ಮಂತ್ರಿಗಳೇ ಸ್ವತಃ ಅಲ್ಲೊಂದು ಇಲ್ಲೊಂದು ಸಣ್ಣಪುಟ್ಟ ಘಟನೆಗಳನ್ನು ಬಿಟ್ಟರೆ ಬೇರೇನೂ ಇಲ್ಲ" ಎಂದು ಹೇಳಿದ್ದಾರೆಂದು ಪ್ರಚಾರ ಮಾಡುತ್ತಿದ್ದಾರೆ. ಕಿರುಕುಳ ಮತ್ತು ದಬ್ಬಾಳಿಕೆ ಮುಂದುವರಿದೇ ಇದೆ.

ಪರಿಹಾರ ಏನು? ನಾವು ಕೆಲವೊಂದು ಪರಿಹಾರಗಳನ್ನು ಸಲಹೆ ಮಾಡಿದ್ದೇವೆ. ನಮ್ಮ ಮೇಲೆ ಯಾವ ವಾಗ್ಬಾಣಗಳನ್ನು ಬೀಸಿದ್ದಾರೆ:, "ವಿಚಿತ್ರ", "ಬಡಿವಾರ". ಕೆಲವನ್ನು ನಾನು ಮರೆತಿದ್ದೇನೆ. ಒಂದು ಮೇಲೊಂದು ಬಂದವು. ಪ್ರಧಾನ ಮಂತ್ರಿಗಳು ಸ್ಪಂದಿಸಬೇಕಾದ ರೀತಿ ಇದಲ್ಲ. ನಮ್ಮನ್ನೇನೂ ಅವರು ಕರೆದಿಲ್ಲ. ಎಲ್ಲಾ ನಾಯಕರನ್ನು ಕರೆದು ಒಟ್ಟಿಗೆ ಕುಳಿತುಕೊಂಡು ಈ ವಿಷಯವನ್ನು ಚರ್ಚಿಸುತ್ತಾರೆಂದುಕೊಂಡಿದ್ದೆ. ಇಂದು ಒಂದು ಪಕ್ಷದ ವಿಷಯವಾಗಕೂಡದು. ನಾವು ಬೆಂಕಿಯೊಂದಿಗೆ ಚೆಲ್ಲಾಟ ಆಡಕೂಡದು ಇಂದಿನ ಪರಿಸ್ಥಿತಿಯಲ್ಲಿ ಅಂತರ್ಗತವಾಗಿರುವ ಅಪಾಯಗಳು ನಮಗೆ ಗೊತ್ತಿವೆ. ಇದು, ಸರ್ಕಾರ ಒಂದೇ ಬಗೆಹರಿಸಬಹುದಾದ ವಿಷಯ ಅಲ್ಲ. ಸಹಕಾರದ ಹಸ್ತ ನೀಡಲು ನಾವಿಲ್ಲಿದ್ದೇವೆ. ಆದರೆ, ನಮಗೆ ಪರಿಹಾರ ಬೇಕು. ಜನರನ್ನು ಚಿಂದಿ ಚಿಂದಿ ಮಾಡಿ ಕೊಲ್ಲುವುದು ಆಗಬಾರದು. ಸಾಯುವುದಾದರೆ ಒಮ್ಮೆಗೆ ಸಾಯಬೇಕು. ಆದರೆ, ಭಯಂಕರ ಕಿರುಕುಳದ ಮತ್ತು ಯಾತನೆಯ ಈ ಘಟನೆಗಳು ಕೇವಲ ಜನರ ಮೇಲಷ್ಟೇ ಪರಿಣಾಮ ಬೀರುವುದಿಲ್ಲ. ದೇಶದ ಸ್ಥಾನಮಾನ ಮತ್ತು ಘನತೆಯ ಮೇಲೂ ಪರಿಣಾಮ ಉಂಟಾಗುತ್ತದೆ. ನಾವು ಕೆಲವನ್ನು ಸಲಹೆ ಮಾಡಿದ್ದೇವೆ. ಇತರ ಸಲಹೆಗಳೂ ಬರಬಹುದು ಆರ್ಥಿಕ ನಿರ್ಬಂಧ ಒಂದು. ಸಹಜವಾಗಿಯೇ, ಭೂಮಿಗೆ ತಗಾದೆ ಇನ್ನೊಂದು. ಅದು ಸರ್ದಾರ್ ಪಟೇಲರ ಸಲಹೆ ಜನಸಂಖ್ಯೆ ಮೂರನೇ ಒಂದು ಭಾಗವನ್ನು ಹೊರದೂಡಿದರೆ, ಪಾಕಿಸ್ತಾನ, ಮೂರನೇ ಒಂದು ಭಾಗದಷ್ಟು ಪ್ರದೇಶವನ್ನು ಕೊಡಲೇಬೇಕು. ಪಾಕಿಸಾನದ ದುರಾಚಾರ, ಅನಾಚಾರಗಳಿಗಾಗಿ ಇಡೀ ಭಾರತವನ್ನು ಹಾಳು ಗೆಡವಲಿಕ್ಕೆ ಆಗುವುದಿಲ್ಲ. ಪಾಕಿಸ್ತಾನ ಅಷ್ಟು ಪ್ರದೇಶ ಕೊಡಲೇಬೇಕು, ಪಾಕಿಸ್ತಾನದ ಪ್ರದೇಶದ ಮರು ವಿಭಜನೆ ಆಗಲೇಬೇಕು. ಈ ಜನರನ್ನು ಅಲ್ಲೇ ನೆಲೆಗೊಳಿಸಬೇಕು ಜನರ ವಿನಿಮಯ ಆಗಲೇಬೇಕೆಂದು ಕೆಲವರು ಹೇಳುತ್ತಾರೆ. ಅದು ಅಷ್ಟೊಂದು ಸುಲಭದ ವಿಷಯ ಅಲ್ಲ. ಪುನರ್ ವಸತಿ ವಿಷಯ ಸಹ ಉದ್ಭವವಾಗುತ್ತದೆ. ನಾನು ಪ್ರದೇಶವನ್ನು ಹೇಗೆ ಪಡೆದುಕೊಳ್ಳಲಿ ಎಂದು ಪ್ರಧಾನ ಮಂತ್ರಿಗಳು ಮರು ಪ್ರಶ್ನೆ ಹಾಕುತ್ತಾರೆ. ಪಾಕಿಸ್ತಾನವು ನಾಲ್ಕು ಕೋಟಿ ಮುಸ್ಲಿಮರನ್ನು ಕರಿಸಿಕೊಂಡರೆ ಹೆಚ್ಚು ಪ್ರದೇಶವನ್ನು ಅದು ಕೇಳಬಹುದು. ಹೆಚ್ಚು ಹೆಚ್ಚು ಮುಸ್ಲಿಮರು ಬರುತ್ತಿದ್ದಾರೆಂದು ಅದು ಹೇಳಬಹುದು. ಆದರೆ ಕೆಲವರು ಮುಸ್ಲಿಮರು, ಅಲ್ಲಿಗೆ ಹೋಗಲೇಬಾರದೆಂಬ ಗಟ್ಟಿ ಮನಸ್ಸಿನವರಾಗಿದ್ದರೆ, ಪಾಕಿಸ್ತಾನಕ್ಕೆ ಹೋಗಿ ಬಾಳಲು ಇಷ್ಟಪಡುವುದೇ ಇಲ್ಲ. ಕೆಲವರು, ಕಾಶ್ಮೀರದ ಮೂರನೇ ಒಂದು ಭಾಗ ಅವರ ವಶದಲ್ಲಿದೆ ಎನ್ನುವ ವಾದ ಮುಂದಿಡಬಹುದು. ಆ 'ಪ್ರಮಾದ' ಆಗಬಹುದು. ಆದರೆ, ಅದು ಅರ್ಧ ಬಂಗಾಳದಷ್ಟು ದೊಡ್ಡದಿದೆ. ಅದು ವಾದ ವಿವಾದದ ವಿಷಯ. ಸರ್ಕಾರಗಳ ಮಟ್ಟದಲ್ಲಿ ಜನರ ಮತ್ತು ಆಸ್ತಿಪಾಸ್ತಿಯ ವಿನಿಮಯ ಆಗಲಿ, ಆದರೆ, ಜನರಿಂದ ಆ ಕೆಲಸ ಆಗಕೂಡದು: ಇದನ್ನು ಕೆಲವು ಕಾಲದ ಹಿಂದೆ ಸಲಹೆ ಮಾಡಲಾಗಿತ್ತು. ಆದಕ್ಕೂ ಪ್ರಧಾನ ಮಂತ್ರಿಗಳು

ಸುಲಭವಾಗಿ ಉತ್ತರ ಕೊಟ್ಟು ಬಿಡುತ್ತಾರೆ. ದೇಶ ಬಿಟ್ಟು ಹೋಗಬಯಸದ ಜನರನ್ನು ನಾನು ಹೇಗೆ ಹೊರ ಹಾಕಲಿ? ಅವರು ರಾಜ್ಯಾಂಗದ ಅಡಿಯಲ್ಲಿ ಬಾಳುತ್ತಿದ್ದಾರೆ. ನಾನು ಹೇಗೆ ಮಾಡಲು ಸಾಧ್ಯ? ಮುಖ್ಯ ಸಮಸ್ಯೆ ಬಗೆಹರಿಯುವುದಿಲ್ಲ. ವಿನಿಮಯ ಆದರೂ, ಅವರನ್ನು ಹೊರ ಹಾಕದಿದ್ದರೂ, ಸಮಸ್ಯೆ ಅಂತಿಮವಾಗಿ ಬಗೆಹರಿಯುವುದಿಲ್ಲ. ಪುನರ್‌ವಸತಿಯ ಆಗಾಧ ಸಮಸ್ಯೆ ತಲೆದೋರುತ್ತದೆ. ಪೂರ್ವ ಮತ್ತು ಪಶ್ಚಿಮದಿಂದ ಲಕ್ಷಾಂತರ ಜನರು ಬರುತ್ತಿರುವುದನ್ನು ನೋಡಿ ದಿಗಿಲುಪಟ್ಟಿದ್ದೇವೆ. ಆದರಿಂದ ಆಗುತ್ತಿರುವ ಪರಿಣಾಮಗಳನ್ನು ನೋಡಿದ್ದೇವೆ. ನಾವು ಮತ್ತೆ ಅಂಥ ಪರಿಣಾಮಗಳನ್ನು ಎದುರಿಸಬೇಕಾಗಬಹುದು. ಆದ್ದರಿಂದಲೇ ನಾವು, ಸರ್ಕಾರವು, ಆ ಪ್ರದೇಶದಲ್ಲಿರುವ ಅಲ್ಪ ಸಂಖ್ಯಾತರ ಸುರಕ್ಷತೆ ಮತ್ತು ರಕ್ಷಣೆಯ ಜವಾಬ್ದಾರಿ ಹೊರಲೇಬೇಕೆಂದು ಮತ್ತು ನಮಗೆ ರಾಜಕೀಯ ಪರಿಹಾರ ಕೊಡಬೇಕೆಂದು ಹೇಳಿದ್ದೇವೆ.

ಹಿಂದೆ ಒಮ್ಮೆ ನಾನು ರಣದಾಹಿ ಎಂದು ಹೇಳಲಾಗಿತ್ತು. ಪೂರ್ವ ಬಂಗಾಳವನ್ನು ನಾನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು ಸಾಧ್ಯವೆ? ಅದು, ನಿಜವಾಗಿಯೂ ನಾನು ಹೇಳಿದ ಪರಿಹಾರ ಅಲ್ಲ. ಈ ಪರಿಹಾರಗಳನ್ನು ದೊಡ್ಡ ದೊಡ್ಡವರೇ ಸಮರ್ಥಿಸಿದ್ದಾರೆಂದು ನಾನು ಯಾವಾಗಲೂ ಹೇಳುತ್ತಲೇ ಇದ್ದೇನೆ. ಗಾಂಧೀಜಿಯವರು ಸಹಾ ಅದೇ ಪರಿಹಾರವನ್ನು ಸಲಹೆ ಮಾಡಿದ್ದರು. ರಾಜಕುಮಾರಿ ಅಮೃತ ಕೌರ್‌ರವರಿಗೆ ಗೊತ್ತಿದೆ. ಗಾಂಧೀಜಿಯವರು ಮರಣ ಹೊಂದುವುದಕ್ಕೆ ಮುಂಚಿನ ಕೆಲವು ವಾರಗಳ ಹಿಂದೆ, ಆಕೆ ಮತ್ತು ನಾನು ಅವರನ್ನು ಕಂಡಿದ್ದೆವು. ಈ ವಿಷಯವನ್ನು ನಾವು ಚರ್ಚಿಸಿದ್ದೆವು. ಅವರು ಕಿಡಿಕಿಡಿಯಾದರು. "ಲಕ್ಷಾಂತರ ಜನರಿಗೆ ಗೋಳುಂಟು ಮಾಡುವ ಅಗಾಧ ಸಮಸ್ಯೆಯನ್ನು ಅರಿತೇ ನಾವು ಭಾರತದ ವಿಭಜನೆಗೆ ಒಪ್ಪಿರಲಿಲ್ಲ. ಕೆಲವೊಂದು ಮೂಲಭೂತ ಆಧಾರದ ಮೇಲೆ ವಿಭಜನೆ ಆಯಿತು. ಅಲ್ಪ ಸಂಖ್ಯಾತರಿಗೆ ರಕ್ಷಣೆ ಕೊಡಲೇಬೇಕು. ಅವರು ಅವರ ತಾಯ್ನಾಡಿನಲ್ಲಿ ಬಾಳಬೇಕು. ಅವರನ್ನು ಭಿಕ್ಷುಕರೆಂದು ಪರಿಗಣಿಸುವ ಪ್ರಶ್ನೆಯೇ ಇಲ್ಲ" ಎಂದು ಹೇಳಿದರು. ಅವರು ಸಲಹೆ ಮಾಡಿದ ಪರಿಹಾರ ಯಾವುದು? "ಭಾರತ ತನ್ನ ಕರ್ತವ್ಯ ಮಾಡಲಿ. ನೀವು ಅಲ್ಪ ಸಂಖ್ಯಾತರಿಗೆ ರಕ್ಷಣೆ ಕೊಡಿ. ಒಬ್ಬರೂ ಇಲ್ಲಿಂದ ಹೋಗದಿರಲಿ. ನಂತರ ಪಾಕಿಸ್ತಾನದ ಮುಖಕ್ಕೆ ಹೇಳಿ ನಾವು ನಮ್ಮ ಕರ್ತವ್ಯ ಮಾಡಿದ್ದೇವೆ. ನೀವು ಮಾಡಿಲ್ಲ. ಅದು ವಿಶ್ವದ ಸಮಸ್ಯೆಯಾಗುತ್ತದೆ. ನೈತಿಕ ಸಮಸ್ಯೆಯಾಗುತ್ತಿದೆ" ಎಂದು ಹೇಳಿದರು. ಅವರು ಆಡಿದ ಮಾತುಗಳು ಇನ್ನೂ ನನ್ನ ಕಿವಿಗಳಲ್ಲಿ ಧ್ವನಿಸುತ್ತಿವೆ. ಮುಂದುವರಿದು ಅವರು "ಪಾಕಿಸ್ತಾನ ಹಾಗೆ ಮಾಡಲು ತಪ್ಪಿದರೆ, ಬೇರೆ ಯಾವ ಪರಿಹಾರವೂ ಕಂಡು ಬರದಿದ್ದರೆ ಪೂರ್ವ ಬಂಗಾಳವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಸರ್ಕಾರ, ಸ್ವಾಧೀನಪಡಿಸಿಕೊಳ್ಳಲಿ ಮತ್ತು ಜನರ ರಕ್ಷಣೆ ಮಾಡಲಿ" ಎಂದು ಹೇಳಿದರು. ಮುಂದುವರಿದು ಅವರು "ನಾನು ಯುದ್ಧದಲ್ಲಿ

ಭಾಗಿಯಾಗಲಾರೆ. ಅದರಲ್ಲಿ ನನಗೆ ನಂಬಿಕೆ ಇಲ್ಲ. ನಿಮಗೆ ಆ ನೈತಿಕ ಸ್ಥೈರ್ಯ ಇರಲೆಂದು ನಾನು ಹಾರೈಸುತ್ತೇನೆ" ಎಂದು ಹೇಳಿದರು. ರಾಜಕುಮಾರಿ ಅಮೃತ್‌ಕೌರ್ ಅವರಿಗೆ ಗೊತ್ತಿದೆ. ಗಾಂಧೀಜಿಯವರು ತಮ್ಮ ಒಂದು ಭಾಷಣದಲ್ಲಿ ಅದನ್ನು ಹೇಳಿದ್ದಾರೆ. ನಾನು ಯುದ್ಧ ಆಗಬೇಕೆಂದು ಹೇಳುತ್ತಿಲ್ಲ. ಆದರೆ, ಪೂರ್ವ ಪಾಕಿಸ್ತಾನವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದರ ಹೊರತು ಅಲ್ಪ ಸಂಖ್ಯಾತರನ್ನು ರಕ್ಷಿಸುವ ಬೇರೆ ಯಾವ ಮಾರ್ಗವೂ ಇಲ್ಲದಿದ್ದರೆ, ಮುಂದೊಂದು ದಿನ ಅದನ್ನು ಭಾರತ ಸರ್ಕಾರ ಪರಿಗಣಿಸಲೇ ಬೇಕಾಗುತ್ತದೆ. ನಾನು ಈ ಮಾತನ್ನು ಹಗುರವಾಗಿ ಹೇಳುತ್ತಿಲ್ಲ ಈ ಕೂಡಲೇ ಯುದ್ಧವನ್ನು ಘೋಷಿಸಬೇಕು ಎಂದು ನಾನು ಹೇಳುತ್ತಿಲ್ಲ ಅದರ ಅವಶ್ಯಕತೆಯೂ ಇಲ್ಲ. ಹೈದರಾಬಾದ್‌ನಲ್ಲಿ ಯುದ್ಧ ಆಗಲಿಲ್ಲ. ಯುದ್ಧಕ್ಕೆ ಅವರು ಸಿದ್ಧರಿರಲಿಲ್ಲ. ಗೂಂಡಾಗಿರಿ ಯುದ್ಧವನ್ನು ಎದುರಿಸ ಬಯಸುವುದಿಲ್ಲ. ತ್ಯಾಗ ಮಾಡದೆಯೇ ಏನನ್ನೋ ಪಡೆಯಬಯಸುತ್ತಾರೆ. ಸರ್ಕಾರವು ದೃಢ ನಿರ್ಧಾರ ತೆಗೆದುಕೊಳ್ಳುತ್ತದೆ, ದುರ್ಬಲ ನೀತಿಯನ್ನಲ್ಲ, ಸಮಾಧಾನಪಡಿಸುವ ನೀತಿಯನ್ನು ಅನುಸರಿಸುತ್ತದೆ ಎಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ, ಏನಾಗುತ್ತದೆಯೆಂಬುದನ್ನು ನೀವೇ ನೋಡುತ್ತೀರಿ. ಸಮಾಧಾನಪಡಿಸುವ ನೀತಿ ಬಗ್ಗೆ ಅವರು ಹೆಮ್ಮೆಪಟ್ಟುಕೊಂಡಿದ್ದಾರೆ. ಅದನ್ನು ಕಂಡು ನನಗಂತೂ ತುಂಬಾ ಆಶ್ಚರ್ಯ ಆಗಿದೆ. ಪರಿಹಾರ ನನಗೆ ಕಾಣುತ್ತಿಲ್ಲ ಎಂದು ಅವರು ಹೇಳಬಹುದು. ನಾನು ಅನುಕಂಪ ತೋರಬಲ್ಲೆ. ಆದರೆ, ಸಮಾಧಾನ ಪಡಿಸುವ ನೀತಿಯನ್ನು ವೈಭವೀಕರಿಸುತ್ತಿದ್ದಾರೆ. ಸಮಾಧಾನಪಡಿಸುತ್ತಲೇ ಇದ್ದಾರೆ. ಹಾನಿ, ಯಾರಿಗೆ ಆಗುತ್ತಿದೆ? ಅವರು ಅವರದೇ ಜವಾಬ್ದಾರಿಯಿಂದ ಹಾಗೆ ಮಾಡಿದರೆ ನನ್ನ ಅಭ್ಯಂತರವೇನಿಲ್ಲ, ಅಯ್ಯೋ ಪಾಪ ಎನ್ನುತ್ತೇನೆ. ದೇಶಕ್ಕೆ ಹಾನಿ ಉಂಟು ಮಾಡುವಂಥ ಸಮಾಧಾನಪಡಿಸುವ ನೀತಿ ಅನುಸರಿಸಲು ಅವರಿಗೆ ಯಾವ ಹಕ್ಕಿದೆ? ಇದು, ಭಾರತದ ಘನತೆಯ, ಆತ್ಮಗೌರವದ ವಿಷಯ. ಭಾರಿ ವಿಪತ್ತನ್ನು ತಪ್ಪಿಸಲು ಏನಾದರೂ ಮಾಡಲೇಬೇಕು.

ಪರಿಹಾರಗಳನ್ನು ಸಲಹೆ ಮಾಡುವುದು ನಮಗೆ ಸೇರಿದ್ದಲ್ಲ ಅಥವಾ ಹಲವಾರು ಪರಿಹಾರಗಳನ್ನು ಬಹಿರಂಗವಾಗಿ ಚರ್ಚಿಸಬಹುದು ಅಂತಲ್ಲ. ಸರ್ಕಾರ ಸುಮ್ಮನೆ ಕುಳಿತಿದೆ. ಅವರು ಎಲ್ಲಾ ವಿಷಯಗಳಲ್ಲಿ ತಮಗಿಷ್ಟ ಬಂದಂತೆ ಮಾಡುತ್ತಿದ್ದಾರೆ. ವಿರೋಧ ಪಕ್ಷವು ಸಲಹೆ ಕೊಡುತ್ತಲೇ ಇರಬೇಕೇ? ಅದನ್ನು ಒಪ್ಪಿಕೊಳ್ಳುವ ನೈತಿಕ ಹೊಣೆಗಾರಿಕೆ ಸರ್ಕಾರಕ್ಕೆ ಇದೆಯೇ? ಕೆಲವೊಂದು ಸಲಹೆಗಳನ್ನು ನೀಡುವ ವಿಶೇಷಾಧಿಕಾರ ನಮಗಿದೆ. ಬೇಕಿದ್ದರೆ, ಅವರು ಸಂತೋಷದಿಂದ ಅವನ್ನು ತಿರಸ್ಕರಿಸಲಿ, ಆದರೆ, ಅವರು ವಿಚಿತ್ರ, ಅದು, ಇದು ಅಂತ ಹೇಳಿದರಷ್ಟೇ ಸಾಲದು, ಅವರು ಪರಿಹಾರವನ್ನು ಕಂಡುಕೊಳ್ಳಲಿ ಅದರಿಂದ ಸಮಸ್ಯೆ ಪರಿಹಾರವಾಗಲಿ. ನಾವೆಲ್ಲರೂ ಅವರೊಂದಿಗಿರುತ್ತೇವೆ. ಪರಿಹಾರ ಹೊಮ್ಮಲಿ. ಈ ವಿಷಯವನ್ನು ಶಾಂತಿ ವಿಧಾನಗಳಿಂದ ಬಗೆಹರಿಸಬೇಕೆಂಬುದು ನಮ್ಮ ಹಾರೈಕೆ. ನಮ್ಮ ಕಮ್ಯೂನಿಸ್ಟ್ ಮಿತ್ರರು ಮಾತನಾಡಲಿದ್ದಾರೆ.

ನಮ್ಮ ಸಲಹೆಗಳನ್ನು ಅವರು ಒಪ್ಪಿಲ್ಲ. ಕಮ್ಯುನಿಸ್ಟರನ್ನು ಬಿಟ್ಟರೆ ಎಲ್ಲ ಪಕ್ಷಗಳೂ ಈ ವಿಷಯದಲ್ಲಿ ಒಗ್ಗಟ್ಟಿನಿಂದಿವೆ. ಕಾಂಗ್ರೆಸ್ ಬರಲಾರದು. ನಮ್ಮಂತೆಯೇ ಲಕ್ಷೋಪಲಕ್ಷ ಕಾಂಗ್ರೆಸ್ಸಿಗರು ಭಾವಿಸುತ್ತಿರುವುದು ನನಗೆ ಗೊತ್ತಿದೆ. ಯಾವುದೇ ಶಾಂತಿಯುತ ವಿಧಾನ ಕಂಡುಬಂದರೆ, ಕಾರ್ಯರೂಪಕ್ಕೆ ತನ್ನಿ. ಯುದ್ಧ ಯಾರಿಗೆ ಬೇಕಿದೆ? ಯಾರಿಗೆ ತೊಂದರೆ ಬೇಕಿದೆ? ಯುದ್ಧದ ಅನಿಷ್ಟಗಳೇನೆಂಬುದು ನನಗೆ ಗೊತ್ತಿದೆ. ನಾಳೆಯೇ ಯುದ್ಧದ ಘೋಷಣೆ ಮಾಡಿ ಎಂದು ಯಾರೂ ಹೇಳುತ್ತಿಲ್ಲ. ಪರಿಣಾಮಕಾರಿ ಪರಿಹಾರವನ್ನು ಕಂಡು ಹಿಡಿಯಿರಿ. ಜನರು ನಿರಾಶ್ರಿತರಾಗಿಯೋ, ಭಿಕ್ಷುಕರಾಗಿಯೋ, ಗುಲಾಮರಾಗಿಯೋ ಹಾಳಾಗದಂತೆ ಮಾಡಿ. ತಮ್ಮ ತಮ್ಮ ಮೂಲ ಹಕ್ಕುಗಳನ್ನು ಚಲಾಯಿಸಿ ಬಾಳುವುದಕ್ಕೆ ಅವಕಾಶ ಮಾಡಿಕೊಡಿ.

ಪ್ರಧಾನ ಮಂತ್ರಿಗಳು. ವಾಸಿ ಮಾಡುವುದರಲ್ಲಿ ತನಗೆ ನಂಬಿಕೆ ಇರುವುದಾಗಿ ಆಗಾಗ ಹೇಳುತ್ತಾರೆ. ಯಾವುದರಿಂದ ವಾಸಿ ಮಾಡಬೇಕು? ಕಾಯಿಲೆಗೆ ಔಷಧಿ ಕೊಟ್ಟು ವಾಸಿ ಮಾಡುವುದೇ? ಕ್ಯಾನ್ಸರ್ ದುರ್ಮಾಂಸ ಬೆಳೆದಿದ್ದರೆ, ನೀವು ಅದರ ಮೇಲೆ ಗಂಧದ ಎಣ್ಣೆ ಸವರಿ ವಾಸಿ ಮಾಡುತ್ತೀರಾ? ಅದನ್ನು ಬೇರು ಸಹಿತ ಕಿತ್ತು ಹಾಕಬೇಕಾಗುತ್ತದೆ. ಕಾಯಿಲೆ ಏನೆಂಬುದನ್ನು ನೀವು ಸೂಕ್ಷ್ಮವಾಗಿ ಗ್ರಹಿಸಬೇಕಾಗುತ್ತದೆ. ಈಗ, ಸರ್ಕಾರ, ನೈಜ ಸಮಸ್ಯೆಯಿಂದ ದೂರ ಸರಿಯುತ್ತಿದೆ. ನನಗೆ ಆಘಾತ, ನೋವು ಉಂಟು ಮಾಡಿರುವ ಸಂಗತಿ ಅದೇ. ಅವರು, ಯಾವ ಸಮಸ್ಯೆಯೂ ಇಲ್ಲ, ಜನರು ಬರುತ್ತಿಲ್ಲ ಎಂದಷ್ಟೇ ಹೇಳಿಬಿಡುತ್ತಾರೆ. ಆದರೆ, ಬರುತ್ತಿದ್ದಾರೋ, ಬರುತ್ತಿಲ್ಲವೋ ಕಾಯಿಲೆ ಇದ್ದೇ ಇದೆ. ಇಲ್ಲಿ ಕುಳಿತಿರುವ ಜನರು ಅಲ್ಲಿಗೆ ಹೋಗಿ ಬದುಕಬಲ್ಲರೇ? 1950ರಲ್ಲಿ ನಾನು ಒಂದು ಸಲಹೆ ಮಾಡಿದ್ದೆ. ನಿಮ್ಮ ಹೆಂಡತಿಯರು, ನಿಮ್ಮ ಮಕ್ಕಳ ಜತೆ ಅಲ್ಲಿಗೆ ಹೋಗಿ ವಾಸಿಸುವ ತನಕ ಲಕ್ಷಾಂತರ ಜನರ ಬವಣೆ ನಿಮಗೆ ಗೊತ್ತಾಗುವುದಿಲ್ಲ ಎಂದು ಹೇಳಿದ್ದೆ. ದೂರದಲ್ಲಿ ಇಲ್ಲಿ ಕುಳಿತು, ಕೇವಲ ಕಲ್ಪಿಸಿಕೊಂಡು ಮಾತನಾಡುವುದು ತುಂಬಾ ಸುಲಭ. ಆ ಜನರ ಸ್ಥಿತಿಗತಿ ನಿಮಗೆ ಬಂದರೇನೇ ನಿಮಗೆ ನೋವು ಕಾಯಿಲೆ ಎಲ್ಲಿದೆ ಎಂಬುದು ಗೊತ್ತಾಗುತ್ತದೆ. ಈ ಜನರು ವಿಭಜನೆಯನ್ನು ಎಂದು ಬಯಸಿರಲಿಲ್ಲ. ಹಿಂದೆ ಕೊಟ್ಟಿದ್ದ ವಾಗ್ದಾನಗಳನ್ನು ಈಡೇರಿಸಿ ಎಂದು ಕೇಳುತ್ತಿದ್ದಾರೆ. ನಮಗೂ ವಾಸಿ ಮಾಡುವ ವಿಧಾನ ಬೇಕಿದೆ. ನಾವು, ಗಾಂಧಿ ಸಿದ್ಧಾಂತದ ಬಗ್ಗೆ ಮಾತನಾಡದಿರೋಣ. ಗಾಂಧೀಜಿ ಎಂಥವರಿದ್ದರೂ, ಹೇಡಿತನ ಅವರ ಸಿದ್ಧಾಂತದಲ್ಲಿರಲಿಲ್ಲ. ಸೋಮಾರಿತನ ಅವರ ಸಿದ್ಧಾಂತದಲ್ಲಿರಲಿಲ್ಲ. ಅಸಹಾಯಕತೆಯಿಂದ ಅವರು ಎಂದು ಕುಳಿತವರಲ್ಲ. ನಾನು ದೆಹಲಿಗೆ ಬಂದು ನೌಖಾಲಿಯಲ್ಲಿ ಆಗುತ್ತಿರುವ ವಿದ್ಯಮಾನಗಳ ಬಗ್ಗೆ ಹೇಳಿದಾಗ ಅವರಿಗೆ ಬೇರೆಲ್ಲವುಗಳಿಗಿಂತ ಅದೇ ಮುಖ್ಯವಾಯಿತು. ಅವರು ಕಲ್ಕತ್ತಾಕ್ಕೆ ಬಂದರು. ನಾವು ಎಲ್ಲ ವಿವರಗಳನ್ನು ಕೊಟ್ಟೆವು. ಅವರಿಗೇ ತಮ್ಮದೇ ಆದ ಕಾರ್ಯ ವೈಖರಿ ಇತ್ತು. ನಾವು ಒಪ್ಪಬಹುದು ಅಥವಾ ಒಪ್ಪದಿರಬಹುದು. ಢಾಕ ದೊಂಬಿಯ ಸಮಯದಲ್ಲಿ ನಾನು ಬಂದು ವರದಿ ಮಾಡಿದೆ. ಮರುವಾರ, ಅವರು

'ಹರಿಜನ' ಪತ್ರಿಕೆಯಲ್ಲಿ, "ನನ್ನ ಮೊದಲನೇ ಸಲಹೆ ಏನೆಂದರೆ, ಜನರು ಕೈಮಾಡುವವರ ಬಳಿಗೆ ಹೋಗಬೇಕು, ಪ್ರಾಣ ಕೊಡಬೇಕು, ತ್ಯಾಗ ಮಾಡಬೇಕು" ಎಂದು ಸಾರ್ವಜನಿಕವಾಗಿ ಹೇಳಿದರು. ಅದಾಗದು ಎಂದು ನಾನು ಹೇಳಿದೆ. ಗೂಂಡಾ ನನ್ನ ಮೇಲೆ ಹಲ್ಲೆ ಮಾಡಿದರೆ, ಅವರನ್ನು ಸಾಯಿಸಲು ಪೀನಲ್ ಕೋಡ್ ನನಗೆ ಅವಕಾಶ ಕಲ್ಪಿಸಿದೆ. ನಾನು ಮುಗ್ಧನನ್ನು ಸಾಯಿಸುವುದಿಲ್ಲ. ಆದರೆ, ಯಾವನು ನನಗೆ ಕೆಡಕು ಮಾಡಬಯಸುತ್ತಾನೋ ಅವನ ಮೇಲೆ ಕೈಮಾಡುವ ಹಕ್ಕು ನನಗಿದೆ, ಅದು ಕಾನೂನು ಪ್ರಕಾರ ನನಗಿರುವ ಹಕ್ಕು ಎಂದೆ ಗಾಂಧೀಜಿಯವರು, ಹೌದು ನೀವು ಹಾಗೂ ಮಾಡಬಹುದು ಎಂದು ಹೇಳಿದರು. ಮುಂದುವರಿದು ಅವರು "ಸಾಧ್ಯವಾದಷ್ಟೂ ಅಹಿಂಸಾ ರೀತಿಯಿಂದ ಎದುರಿಸಿ, ಅಗತ್ಯಬಿದ್ದರೆ ಬಲ ಪ್ರಯೋಗಿಸಿ ತಡೆಗಟ್ಟಿ, ಆದರೆ, ಎಂದೂ ಕೆಟ್ಟದ್ದಕ್ಕೆ ಶರಣಾಗಬೇಡಿ" ಎಂದು ಹೇಳಿದರು. ಅದನ್ನೇ ನೀತಿಯೆಂದು ಒಪ್ಪಿಕೊಳ್ಳಬೇಕೆಂದು ನಾನು ಸರ್ಕಾರವನ್ನು ಕೇಳುತ್ತೇನೆ. ಈ ರಾಷ್ಟ್ರೀಯ ಕೆಡುಕನ್ನು ತಡೆಗಟ್ಟಿ,

ನಾಲ್ಕು ದಿನಗಳ ಹಿಂದೆ ಪ್ರಧಾನ ಮಂತ್ರಿಗಳು ತಮ್ಮ ಹೇಳಿಕೆಯಲ್ಲಿ

> "ಭಾರತ-ಪಾಕಿಸ್ತಾನದ ನಡುವಣ ಸಂಬಂಧಗಳಲ್ಲಿ ಕಾಣಿಸಿಕೊಂಡಿರುವ ಕಾಯಿಲೆಗೆ ಸಿದ್ಧ ಔಷಧ ಎಂದರೆ ವಾಸಿ ಮಾಡುವ ವಿಧಾನವನ್ನು ಪ್ರಯೋಗಿಸುವುದೇ ಹೊರತು ಅಬ್ಬರದ ಮಾತುಗಳಲ್ಲ. ಮಾತು ಕಡಿಮೆ ಮಾಡಿ, ಖಾಯಿಲೆ ವಾಸಿ ಮಾಡೋಣ ಇದರರ್ಥ, ಕೆಟ್ಟದ್ದಕ್ಕೆ ಶರಣಾಗಬೇಕು ಅಂದಲ್ಲ"

ನಾನು ಈ ಮಾತುಗಳಿಗೆ ಅಡಿಗೆರೆ ಹಾಕಿದ್ದೇನೆ. ಅದನ್ನೇ ನಾನು ಇಂದು ಕೇಳುತ್ತಿದ್ದೇನೆ. ಅವರು ಕೆಟ್ಟದ್ದಕ್ಕೆ ಶರಣಾಗುತ್ತಿದ್ದಾರೆ ಎಂಬುದೇ ಅವರ ಮೇಲೆ ನಾನು ಮಾಡುತ್ತಿರುವ ಆರೋಪ.

ನೀವಷ್ಟೇ ಶರಣಾಗುತ್ತಿಲ್ಲ. ಕೆಟ್ಟದ್ದಕ್ಕೆ ಜನರೂ ಶರಣಾಗುವಂತೆ ಮಾಡುತ್ತಿದ್ದೀರಿ. ಇಡೀ ದೇಶದ ತೇಜೋವಧೆ ಮಾಡುತ್ತಿದ್ದೀರಿ. ಕೆಡುಕುಗಳನ್ನು ಎಂದೆಂದಿಗೂ ನಿಗ್ರಹಿಸಬೇಕು. ಅದೆಂಥಾ ತುರ್ತು ಪರಿಸ್ಥಿತಿ ಬಂದರೂ ನಿಭಾಯಿಸಲು ಸನ್ನದ್ಧರಾಗಿರಬೇಕು ಎಂದು ಅವರು ಹೇಳುತ್ತಾರೆ. ನಾನು ಕೇಳುತ್ತಿದ್ದೇನೆ, ಅದು ಯಾವಾಗ ಬರುತ್ತದೆ? ಸಾವಿರಾರು ಜನ ಕೊಲೆಗೀಡಾಗಿದ್ದಾರೆ. ನೂರಾರು ಮಹಿಳೆಯರನ್ನು ಅಪಹರಿಸಲಾಗಿದೆ, ಅತ್ಯಾಚಾರ ಆಗಿದೆ. ಹಲವಾರು ಆಗಿವೆ. ಲಕ್ಷ ರೂಪಾಯಿ ಬೆಲೆ ಬಾಳುವ ಆಸ್ತಿಪಾಸ್ತಿಯ ಲೂಟಿ ಆಗಿದೆ, ನಾಶ ಆಗಿದೆ. ಜನರ ನೈತಿಕ ಸ್ಥೈರ್ಯ ಸತ್ತು ಹೋಗಿದೆ. ಇನ್ನೆಂಥಾ ತುರ್ತು ಪರಿಸ್ಥಿತಿ ಉಂಟಾಗಬೇಕು? ಇನ್ನೂ ಏನೇನೂ ಆಗಬೇಕು?

ಹೇಳಿ. ಇನ್ನೂ ಹೆಚ್ಚು ಜನರು ಕೊಲೆಗೀಡಾಗಬೇಕು. ಇನ್ನು ಹೆಚ್ಚು ತಪ್ಪುಗಳನ್ನು ಆಗಬೇಕು. ಅಂಥ ವರದಿ ಬಂದಾಗ, ನಾನು ತುರ್ತು ಪರಿಸ್ಥಿತಿಯನ್ನು ಘೋಷಿಸುತ್ತೇನೆ" ಎಂದು ಹೇಳಿ. ಕಾಲಾವಧಿ ನಮಗೂ ಗೊತ್ತಾಗಲಿ. ನಾವು ಅಲ್ಲಿಯವರೆಗೆ ಕಾದು ನೋಡುತ್ತೇವೆ. ಆದರೆ, ಇಂಥದೊಂದು ಜರೂರು ಕಾರ್ಯ ಪ್ರಧಾನ ಮಂತ್ರಿಗಳ ನಾಯಕತ್ವದಲ್ಲಿ ಎಂದೂ ಆಗುವುದಿಲ್ಲ.

ಕೊನೆಯದಾಗಿ ಕೆಲವು ಮಾತು ಹೇಳಿ ಮುಗಿಸುತ್ತೇನೆ. ಶಾಂತಿ ಬೇಕು, ನಿಜ ಆದರೆ, ಗೌರವ ಸಹಿತ ಶಾಂತಿ ಬೇಕು. ನಾವು ಶಾಂತಿ ಮಾರ್ಗವನ್ನೇ ಅನುಸರಿಸೋಣ. ಶಾಂತಿಯುತವಾಗಿ ಈ ಸಮಸ್ಯೆಯನ್ನು ಅಂತಿಮವಾಗಿ ನಾವು ಬಗೆಹರಿಸಲು ಸಾಧ್ಯವಾಗುವಂತಹ ಒಂದು ರೂಪುರೇಷೆಯನ್ನು ನಾವು ಕಂಡುಕೊಂಡವೆಂದರೆ, ನಾವು ಆ ಮಾರ್ಗದಲ್ಲೇ ಹೋಗೋಣ. ಆದಾಗದಿದ್ದರೆ, ಕೆಟ್ಟದ್ದಕ್ಕಂತೂ ಶರಣಾಗಕೂಡದು. ಸಮಸ್ಯೆಯನ್ನು ಬಗೆಹರಿಸುವಲ್ಲಿ ಸರ್ಕಾರವು ತಡಮಾಡಿದಷ್ಟು ದೇಶದ ಒಳಗೆ ಪ್ರತಿಧ್ವನಿಯ ಸಾಧ್ಯತೆ ಹೆಚ್ಚುತ್ತಾ ಹೋಗುತ್ತದೆ. ಏನಾದರಾಗಲಿ, ಇದನ್ನು ತಪ್ಪಿಸಲೇಬೇಕು. ಈಗ ಏನೂ ಆಗಿಲ್ಲ. ಆದರೆ, ಮಾಲ್ದಾದಲ್ಲಿ 400 ಮುಸ್ಲಿಮರನ್ನು ಕೊಂದು ಹಾಕಲಾಗಿದೆ ಎಂದು ಪಾಕಿಸ್ತಾನವು ಪ್ರಚಾರ ಮಾಡುತ್ತಿದೆ. ಭಾರತ ಸರ್ಕಾರದ ಪ್ರತಿಭಟನೆ ಇಂದು ಪತ್ರಿಕೆಗಳಲ್ಲಿ ವರದಿಯಾಗಿದೆ. ನನಗೆ ಸಂತೋಷವಾಯಿತು. ಭಾರತವನ್ನು ರಕ್ಷಣಾತ್ಮಕ ಸ್ಥಿತಿಯಲ್ಲಿಟ್ಟಿರಲು ಪಾಕಿಸ್ತಾನ, ಯಾವಾಗಲೂ ಮಾಡುತ್ತಿರುವುದೇನೆಂದರೆ ಅದೇ. ಅಂತಹ ಅನೇಕ ಸುಳ್ಳು ಪ್ರಚಾರಗಳಲ್ಲಿ ಮಾಲ್ದಾದಲ್ಲಿ 400 ಮುಸ್ಲಿಮರು ಕೊಲೆಗೀಡಾಗಿದಾರೆಂಬುದೂ ಒಂದು ಕಟ್ಟು ಕತೆ. ಸರ್ಕಾರ ತುಂಬ, ತುಂಬಾ ಕಟುವಾಗಿ ಪ್ರತಿಭಟಿಸಿರುವುದು ಇಂದಿನ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಆದರೆ, ಭಾರತದ ನೀತಿಯಲ್ಲಿ ಗಣನೀಯ ಬದಲಾವಣೆ ಆಗದಿದ್ದರೆ ಪ್ರಚಾರ ನಡೆದೇ ಇರುತ್ತದೆ. ಈ ಸಮಸ್ಯೆ ಮಹತ್ವವನ್ನು ತಿಳಿದುಕೊಂಡು ನಮ್ಮ ಮುಂದಿನ ಹೆಜ್ಜೆಯನ್ನು ನಿರ್ಧರಿಸಿಕೊಳ್ಳಬೇಕು. ಹಾಗಾದಾಗ ಮಾತ್ರವೇ, ರಾಷ್ಟ್ರೀಯ ವಿಪತ್ತನ್ನು ತಪ್ಪಿಸಲು ಸರ್ಕಾರಕ್ಕೆ ಭಾರತದ ಕೋಟ್ಯಾಂತರ ಜನರ ಮನಃಪೂರ್ವಕ ಬೆಂಬಲ ಗಳಿಸಲು ಸಾಧ್ಯವಾಗುತ್ತದೆ.

## * ಭಾರತದ ವಿದೇಶಾಂಗ ನೀತಿ

ನಮ್ಮ ವಿದೇಶ ನೀತಿಯನ್ನು ನಾನು, ಹೊರ ರಾಷ್ಟ್ರಗಳಲ್ಲಿ ಏನಾಗುತ್ತಿದೆಯೆಂಬ ದೃಷ್ಟಿಕೋನದಿಂದಷ್ಟೇ ಅಲ್ಲ ಇನ್ನೊಂದು ಒರೆಗೆ ಹಚ್ಚಿ ತೀರ್ಮಾನಕ್ಕೆ ಬರಬಯಸುತ್ತೇನೆ. ಯಾವ ದೇಶವೂ ತಾನು ಇಂದು ಸಮರ ಸನ್ನಾಹದಲ್ಲಿದ್ದೇನೆ ಎಂದು ಹೇಳಲಾರದು. ಅನುಮಾನವೇ ಇಲ್ಲ. ನಾವು ಇಂದು ಸ್ಟಾಲಿನ್ ಉತ್ತರಾಧಿಕಾರಿಯು ಇತ್ತಿರುವ ಹೇಳಿಕೆಯನ್ನು ಓದ್ದಿದ್ದೇವೆ. ವಿಶ್ವದ ಇಂದಿನ ಅತ್ಯಂತ ಅವಶ್ಯಕತೆ ಎಂದರೆ ಶಾಂತಿ ಮತ್ತು ಶಾಂತಿಯುತ ವಿಧಾನಗಳಿಂದ ಬಗೆಹರಿಸಲಾಗದಂತಹ ಯಾವ ಸಮಸ್ಯೆಯೂ ಇರಲಾರದು ಎಂದು ಅವರು ಹೇಳಿದ್ದಾರೆ. ರಾಷ್ಟ್ರಗಳ ಪರವಾಗಿ ಹೇಳಿಕೆ ಇತ್ತಾಗಲೆಲ್ಲ ಅವು ಹೆಚ್ಚು ಕಮ್ಮಿ ಒಂದೇ ರೀತಿ ಇರುತ್ತವೆ. ಹೀಗೆಲ್ಲಾ ಪ್ರಯತ್ನ ಆಗುತ್ತಿದ್ದರೂ, ವಿಶ್ವದಲ್ಲಿ ಜರುಗುತ್ತಿರುವ ವಿದ್ಯಮಾನಗಳು ನಮಗೆ ಆತಂಕ ತರುತ್ತಿವೆ. ಈ ಪರಿಸ್ಥಿತಿಗಳಲ್ಲಿ ನಾವೇನು ಮಾಡಬಹುದು? ಮನೆ ಮೇಲ್ಭಾಗದಲ್ಲಿ ನಿಂತು, ನಮಗೆ ಶಾಂತಿ ಬೇಕು, ನಮಗೆ ಶಾಂತಿ ಬೇಕು ಎಂದು ಜೋರು ಜೋರಾಗಿ ಕೂಗುತ್ತಿದ್ದರೆ ಶಾಂತಿ ಬರುತ್ತದೆಯೇ, ಇಲ್ಲ,. ನಮ್ಮದೂ ಕೊಡುಗೆ ಇರಬೇಕು. ನಮಗೆ ಯುದ್ಧ ಬೇಕಿಲ್ಲ ಎಂಬುದನ್ನು ತೋರಿಸುವ ಕೆಲವೊಂದು ಕ್ರಮ ತೆಗೆದುಕೊಳ್ಳಲಾಗುತ್ತಿದೆಯೆಂದು ಕಾಣುತ್ತದೆ. ಏಕೆಂದರೆ, ಯುದ್ಧ ಪ್ರಾರಂಭವಾದರೆ, ಅದು ಈ ಭೂಮಂಡಲದ ಒಂದು ನಿರ್ದಿಷ್ಟ ಭಾಗಕ್ಕಷ್ಟೇ ಸೀಮಿತಗೊಳ್ಳುವುದಿಲ್ಲ, ಎಲ್ಲ ಭಾಗಗಳಿಗೂ ಹಬ್ಬುತ್ತದೆ. ಆ ದೃಷ್ಟಿಯಿಂದ ನಮ್ಮ ವಿದೇಶ ನೀತಿ ಮೆಚ್ಚುಗೆ ಗಳಿಸಿದೆ. ಆ ಶಾಂತಿ ನೀತಿಗೆ ಬದ್ಧವಾಗಿರಲು ಪ್ರಯತ್ನಿಸುತ್ತಿದ್ದಾರೆಂದು ಪ್ರಧಾನ ಮಂತ್ರಿಗಳಿಗೆ ಪ್ರಶಂಸೆ ತಂದಿದೆ.

ಈ ವಿಚಾರವನ್ನು ನಾನು ವಿಸ್ತರಿಸಿ ಹೇಳುವುದಿಲ್ಲ. ಆರ್ಥಿಕ ವಿಚಾರಗಳಲ್ಲಿ ಹೊರ ರಾಷ್ಟ್ರಗಳನ್ನು ತೀರಾ ಅವಲಂಬಿಸಿದರೆ ಅದರಿಂದ ತೀವ್ರ ಪರಿಣಾಮಗಳು ಉಂಟಾಗುವುದಕ್ಕೆ ದಾರಿಯಾಗಬಹುದು ಎಂದು ವ್ಯಕ್ತವಾಗಿರುವ ಭಯ ತೀರಾ ನಿರಾಧಾರದ್ದಲ್ಲ. ನಾವು ಅನುಸರಿಸುತ್ತಿರುವ ನೀತಿಯಿಂದ ಅಂತಹ ಪರಿಣಾಮಗಳು ಉಂಟಾಗುತ್ತಿವೆಯೇ ಎಂಬುದನ್ನು ಕಂಡುಕೊಳ್ಳಲು ಮನಃ ಪೂರ್ವಕ ಪ್ರಯತ್ನ ಆಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಹೇಳಲು ನಮಗೆ ಸಾಧ್ಯವಾಗುತ್ತಿಲ್ಲ ಆದರೆ, ಅದು ಸಾಧ್ಯವಾದ ಪ್ರತಿಯೊಂದು ಹಂತದಲ್ಲೂ ಗಮನದಲ್ಲಿಟ್ಟುಕೊಳ್ಳಬೇಕಾದ ವಿಷಯ. ಅಂತರ ರಾಷ್ಟ್ರೀಯ ಸಂಬಂಧದಲ್ಲಿ ಭಾರತ ಹಿತಾಸಕ್ತಿ ಅಡಕವಾಗಿರುವ ವಿಷಯಗಳಲ್ಲಿ ಉಂಟಾಗಿರುವ ಯಶಸ್ಸು ಅಥವಾ ವಿಫಲತೆಯ ಆಧಾರದ ಮೇಲೆ ನಾನು ನಮ್ಮ ವಿದೇಶ ನೀತಿಯ ಆಗುಹೋಗುಗಳನ್ನು ನೋಡಬಯಸುತ್ತೇನೆ. ಕಳೆದ ಆರು ವರ್ಷಗಳಲ್ಲಿ ಭಾರತದ ಮುಂದೆ ನೆನೆಗುದಿಗೆ ಬಿದ್ದಿರುವ ಐದು ಅಥವಾ ಆರು

---

* ಲೋಕಸಭಾ ಚರ್ಚೆಗಳು 16 ಮಾರ್ಚ್ 1953 (ಕಾಲಂ 2096-2106)

ಪ್ರಮುಖ ವಿಷಯಗಳನ್ನು ನಾವು ಪರಿಶೀಲಿಸಿದರೆ, ನಿಸ್ಸಂದೇಹವಾಗಿ ನಮ್ಮದು ವಿಷಾದಕರ ಮತ್ತು ತುಂಬಾ ವಿಫಲತೆಯ ಇತಿಹಾಸ. ಈ ವಿಷಯಗಳು ಯಾವುವು? ದಕ್ಷಿಣ ಆಫ್ರಿಕಾದಲ್ಲಿರುವ ಭಾರತೀಯರ ವಿಷಯ. ದಬ್ಬಾಳಿಕೆಗೆ ಒಳಗಾಗುತ್ತಿರುವ ಆ ಜನರ ಹಿತಾಸಕ್ತಿಗಳನ್ನು ರಕ್ಷಿಸಲು ಏನಾನ್ನಾದರೂ ಮಾಡಲು ನಮಗೆ ಸಾಧ್ಯವಾಗಿದೆಯೇ? ಸಿಲೋನಿನಲ್ಲಿರುವ ಭಾರತೀಯರ ವಿಷಯ. ಆ ಬಗ್ಗೆ ಏನನ್ನಾದರೂ ಮಾಡುವಲ್ಲಿ ನಾವು ಸಫಲರಾಗಿದ್ದೇವೆಯೇ? ಭಾರತದಲ್ಲಿರುವ ವಿದೇಶಿ ವಸಾಹತುಗಳ ವಿಮೋಚನೆ ವಿಷಯ ಏನಾಗಿದೆ? ಕೆಲವು ತಿಂಗಳ ಹಿಂದೆ ಈ ಸದನದಲ್ಲಿ ಪ್ರಧಾನ ಮಂತ್ರಿಗಳು ಸಂಧಾನಕ್ಕೆ ಇರುವ ಒಂದೇ ಒಂದು ಆಧಾರವೆಂದರೆ ಭಾರತಕ್ಕೆ ಅವು ಪುನ ಸೇರಬೇಕು ಎಂಬುದೆಂದು ಹೇಳಿದರು. ಅಂಥದೊಂದು ದಿಟ್ಟ ಹೇಳಿಕೆಯನ್ನು ಕೇಳಿ ನಮಗೆ ತುಂಬಾ ಸಂತೋಷವಾಯಿತು. ಆದರೆ, ಮಾಡಿರುವುದೇನು? ನಮಗೆ ಕಳುಹಿಸಿ ಕೊಟ್ಟಿರುವ ವರದಿಯಲ್ಲಿ ಸ್ವಲ್ಪವೇ ಸ್ವಲ್ಪ ಮಾಹಿತಿ ಇದೆ. ಅದು ವೇಳಾ ಪಟ್ಟಿಗಿಂತಲೂ ಹೆಚ್ಚಿನದೇನಲ್ಲ. ಆದರಿಂದ ಯಾವುದೇ ಮಾಹಿತಿ ನಮಗೆ ಸಿಗುವುದಿಲ್ಲ. ರಾಯಭಾರ ಕಾರ್ಯಾಲಯಗಳ ಕೆಲಸದ ಬಗ್ಗೆ ಮತ್ತು ಹಲವಾರು ಇತರ ವಿಷಯಗಳ ಬಗ್ಗೆ ನಾವು ಸ್ವಲ್ಪ ತಿಳಿದುಕೊಳ್ಳಬಯಸಿದ್ದವು. ವಿದೇಶ ನೀತಿಯ ಬಗ್ಗೆ ಬಹಿರಂಗವಾಗಿ ಚರ್ಚೆ ಮಾಡಬಾರದಂತಹ ಅನೇಕ ವಿಷಯಗಳಿವೆಯೆಂದು ಪ್ರಧಾನ ಮಂತ್ರಿಗಳು ಹೇಳಿದ್ದನ್ನು ನಾನು ಒಪ್ಪುತ್ತೇನೆ. ಆದರೂ, ಈ ವರದಿಯು ಸ್ವಲ್ಪಮಟ್ಟಿನ ಮಾಹಿತಿ ಒದಗಿಸುತ್ತದೆ ಮತ್ತು ಕುತೂಹಲಕರವಾಗಿದೆ. ಬೇರೆಲ್ಲ ವಿಷಯಗಳ ಬಗ್ಗೆ ಈ ವರದಿಯಿಂದ, ಭಾರತದಲ್ಲಿರುವ ಆ ವಸಾಹತುಗಳ ವಿಮೋಚನೆಗೆ ಪತ್ರ ವ್ಯವಹಾರ ಮಾಡಲಾಗಿದೆ ಎಂಬುದನ್ನು ಬಿಟ್ಟರೆ, ನಮಗೆ ಬೇರೇನೂ ಮಾಹಿತಿ ಸಿಗುವುದಿಲ್ಲ.

ಭಾರತ-ಪಾಕಿಸ್ತಾನ ನಡುವಣ ಸಂಬಂಧದ ವಿಷಯ. ಮೊನ್ನೆ ದಿನ ನಾನು ಸದನದಲ್ಲಿರಲಿಲ್ಲ - ಪ್ರಧಾನ ಮಂತ್ರಿಗಳು, ನಮ್ಮನ್ನು ವೈರಿ ದೇಶಕ್ಕೆ ಸಹಾಯ ಮಾಡುತ್ತಿರುವವರೆಂದು ಜರಿದಿದ್ದಾರೆ. ಅವರು ಯಾವ ವೈರಿಯ ಬಗ್ಗೆ ಚಿಂತಿಸುತ್ತಿದ್ದಾರೋ ನನಗೆ ಗೊತ್ತಿಲ್ಲ. ಅದು ಪಾಕಿಸ್ತಾನ ಆಗಿದ್ದರೆ, ಕೊನೇ ಪಕ್ಷ ನಮ್ಮನ್ನು ತರಾಟೆಗೆ ತೆಗೆದುಕೊಳ್ಳುವಾಗಲಾದರೂ ಅವರು ಪಾಕಿಸ್ತಾನವನ್ನು ಭಾರತದ ವೈರಿ ಎಂದು ಭಾವಿಸಿದ್ದನ್ನು ಕಂಡು ನನಗೆ ಸಂತೋಷವಾಗಿದೆ. ಭಾರತ - ಪಾಕಿಸ್ತಾನದ ನಡುವಣ ನಮ್ಮ ಸಂಬಂಧಕ್ಕೆ ಯಾವುದು ನಿಜವಾದ ಆಧಾರ? ಅನೇಕ ವಿಷಯಗಳು ಪರಿಹಾರ ಕಾಣದೆ ಉಳಿದಿವೆ. ಪೂರ್ವ ಬಂಗಾಳದ ಅಲ್ಪ ಸಂಖ್ಯಾತರ ಸಮಸ್ಯೆ ಇದೆ. ಪ್ರಮುಖ ಸಮಸ್ಯೆಗಳಲ್ಲಿ ಅದೂ ಒಂದು, ಅದನ್ನು ಪಾಕಿಸ್ತಾನದೊಂದಿಗೆ ಇತ್ಯರ್ಥ ಮಾಡಿಕೊಳ್ಳಬೇಕಾಗಿದೆ ಎಂದು ಪ್ರಧಾನ ಮಂತ್ರಿಗಳೇ ಹೇಳಿದ್ದಾರೆ. ರಹದಾರಿ ಪದ್ಧತಿ ಮತ್ತು ಅದರಿಂದಾಗುತ್ತಿರುವ ವಿಪರೀತ

ತೊಂದರೆಯ ಸಮಸ್ಯೆ ಇದೆ. ನಾಲಾ ನೀರು ಮತ್ತು ಆ ಬಗ್ಗೆ ಭಾರತದ ವಿರುದ್ಧ ನಡೆಯುತ್ತಿರುವ ಅವಮಾನಕರ ಚಳುವಳಿಯ ವಿಷಯ ಇದೆ. ನಿರ್ವಾಸೀತರ ಆಸ್ತಿಪಾಸ್ತಿ ವಿಷಯ ಇದೆ. ಕಾಶ್ಮೀರದ ವಿಷಯ ಇದೆ.

ಈ ಎಲ್ಲ ವಿಷಯಗಳಿಗೆ ಸಂಬಂಧಪಟ್ಟಂತೆ ನಮಗೆ ಕಂಡುಬಂದಿರುವುದೇನೆಂದರೆ ಕಾರ್ಯತಃ ನಮ್ಮ ನೀತಿ ವಿಫಲವಾಗಿದೆ. ಭಾರತಕ್ಕೆ ಅನ್ಯಾಯ ತೋರುತ್ತಿರುವ ಈ ಎಲ್ಲಾ ದೇಶಗಳ ಮೇಲೆ ನೀವು ಯುದ್ಧ ಸಾರಬೇಕೆಂದು ನಾನು ಹೇಳುವುದಿಲ್ಲ. ಅಂತರರಾಷ್ಟ್ರೀಯ ವ್ಯವಹಾರ ಚತುರತೆಯಲ್ಲೂ ಕೂಡ ಇನ್ನೂ ಹೆಚ್ಚಿನ ಕಲ್ಪನಾ ಶಕ್ತಿ ಮತ್ತು ಇನ್ನೂ ಹೆಚ್ಚಿನ ಸಂವರ್ಧನೆ ಇರಬೇಕಿತ್ತು ಹಾಗಿದ್ದಿದ್ದರೆ, ಯಾವುದನ್ನು ಪಡೆಯಲು ನಿಜವಾಗಿಯೂ ಭಾರತ ಅರ್ಹವಾಗಿತ್ತೋ, ಅದು ಭಾರತಕ್ಕೆ ಸಿಕುತ್ತಿತ್ತು. ಭಾರತದ ಆತ್ಮಗೌರವ, ಭಾರತದ ಘನತೆ, ಭಾರತದ ಗೌರವ ಮತ್ತು ಭಾರತದ ಹಿತಾಸಕ್ತಿಗೆ ಸಂಬಂಧಪಡುವ ಬಹುಮುಖ್ಯ ವಿಷಯುಗಳಲ್ಲಿ ನಮ್ಮ ವಿದೇಶ ನೀತಿಯನ್ನು ಪರಿಶೀಲಿಸಿದರೆ ದುರಾದೃಷ್ಟವಶಾತ್, ನಮ್ಮ ಸಾಧನೆ ಸೊನ್ನೆಯೆಂಬುದು ನಿಮಗೆ ಗೊತ್ತಾಗುತ್ತದೆ. ಭಾರತದ ವಿದೇಶ ನೀತಿ ಕೆಟ್ಟದ್ದೆಂದು ನಾನು ಹೇಳತ್ತಿದ್ದೇನೆಂಬುದು ವಿಷಯ ಅಲ್ಲ. ವಿದೇಶ ನೀತಿಯಲ್ಲಿ ಇಡೀ ಪ್ರಪಂಚದಲ್ಲಿ ಬದಲಾವಣೆ ಹೊಂದುತ್ತಿರುವ ವಿದ್ಯಮಾನಗಳಿಗೆ ತಕ್ಕಂತೆ ಬದಲಾವಣೆಯಾಗಬೇಕಾಗುತ್ತದೆ. ಪ್ರಪಂಚದ ಮಿಕ್ಕ ಭಾಗದ ಬಗ್ಗೆ ಹಗುರವಾಗಿ ಮಾತನಾಡುವುದರ ಬದಲು, ನಮ್ಮ ಒಳಗಿನ ಸಮಸ್ಯೆಗಳತ್ತ ಅಂತರರಾಷ್ಟ್ರೀಯ ಸಂಬಂಧವನ್ನು ಬಾಧಿಸುತ್ತಿರುವ ಸಮಸ್ಯೆಗಳು ಮತ್ತು ಅದರಿಂದಾಗುತ್ತಿರುವ ನಿಶ್ಚಿತ ಪರಿಣಾಮಗಳತ್ತ ನೋಡುವುದು ಒಳ್ಳೆಯದು. ಹಾಗಾದಾಗ, ಭಯದ, ಕುಂದು ಕೊರತೆಗಳ ಕಾರಣಗಳನ್ನು ಕಿತ್ತೊಗೆಯುವುದು ನಮಗೆ ಸಾಧ್ಯವಾಗುತ್ತದೆ. ಭಾರತ - ಪಾಕಿಸ್ತಾನದ ನಡುವಣ ಸಂಬಂಧದ ಬಗ್ಗೆ ಹೇಳುವುದಾದರೆ, "ಬ್ಯಾಗ್ಗೆ ಟ್ರೈಬ್ಯೂನಲ್" ಇದೆಯೆಂಬುದು ವರದಿಯಿಂದ ತಿಳಿದು ಬರುತ್ತದೆ. ನಿಮಗೇ ಗೊತ್ತಿರುವಂತೆ, ಸನ್ಮಾನ್ಯರೇ, ರ್‍ಯಾಡ್‌ಕ್ಲಿಫ್ ತೀರ್ಪು ಇದೆ. ರ್‍ಯಾಡ್ ಕ್ಲಿಫ್ ತೀರ್ಪಿನ ಕೆಲವೊಂದು ಶಿಫಾರಸುಗಳ ವಾಖ್ಯಾನ ಕಷ್ಟವಾಗಿತ್ತು. ಆದಕಾರಣ, ಬ್ಯಾಗ್ಗೆ ಟ್ರೈಬ್ಯೂನಲ್ ಬಂದಿದೆ. ಬ್ಯಾಗ್ಗೆ ಟ್ರೈಬ್ಯೂನಲ್‌ನ ಶಿಫಾರಸ್ಸುಗಳನ್ನು ಕಾರ್ಯರೂಪಕ್ಕೆ ತಂದೇ ಇಲ್ಲವೆಂಬುದು ನಮಗೆ ತಿಳಿದು ಬಂದಿದೆ. ಏಕೆಂದರೆ, ಪಾಕಿಸ್ತಾನ ತನ್ನ ಪಾಲಿನ ಕಾರ್ಯ ಮಾಡಿಲ್ಲ. ಹೀಗಾಗಿ, ಬ್ಯಾಗ್ಗೆ ನಂತರ ಮುಂದೇನು? ತಗ್ಗೆ ಅಥವಾ ರಗ್ಗೆ ಬರಬಹುದು. ಭಾರತ ಮತ್ತು ಪಾಕಿಸ್ತಾನದ ಪರಸ್ಪರ ವಿರುದ್ಧದ ಬೇಡಿಕೆಗಳ ವಾಸ್ತವಾಂಶಗಳನ್ನು ಅಧ್ಯಯನ ಮಾಡಿ ನ್ಯಾಯ ನಿರ್ಣಯ ಕೊಡುವ ಪುಣ್ಯಾತ್ಮಯಾರೆಂಬುದು ನನಗೆ ಗೊತ್ತಿಲ್ಲ. ಕಲ್ಕತ್ತಾ ಪತ್ರಿಕೆಗಳಲ್ಲಿ ಮತ್ತು ಪಶ್ಚಿಮ ಬಂಗಾಳದ ಶಾಸನ ಸಭೆಯ ನಡವಳಿಕೆಗಳಲ್ಲಿ ಹೆಚ್ಚು ಕಮ್ಮಿ ಪ್ರತಿ ದಿನವೂ ಪದೇ ಪದೇ ದಾಳಿ ಆಗುತ್ತಿದೆ, ನದಿಯಾ ಜಿಲ್ಲೆ ಮೇಲೆ ದಾಳಿ ಆಗುತ್ತಿದೆ, ಕೊಲೆಗಳು ಆಗುತ್ತಿವೆ, ಆಸ್ತಿಪಾಸ್ತಿಯನ್ನು

ಲಪಟಾಯಿಸಲಾಗುತ್ತಿದೆ, ಮಹಿಳೆಯರ ಅಪಹರಣ ಆಗುತ್ತಿದೆ. ಎಲ್ಲಾ ರೀತಿಯ ದೌರ್ಜನ್ಯಗಳೂ ಆಗುತ್ತಿವೆಯೆಂದು ಹೇಳಿರುವುದನ್ನು ನಾನು ಓದಿದ್ದೇನೆ. ನಾವು ಪ್ರತಿಭಟನೆ ಕಳುಹಿಸಿದ್ದೇವೆ, ದುರಾದೃಷ್ಟವಶಾತ್ ಪೂರ್ವ ಪಾಕಿಸ್ತಾನ ಹಾಗೆ ಮಾಡದಂತೆ ತಡೆಯಲು ನಮಗೆ ಆಗುತ್ತಿಲ್ಲ ಎಂದು ಹೇಳುತ್ತದೆ. ಪಾಕಿಸ್ತಾನದ ಬಜೆಟ್ ಪ್ರಕಟವಾಗಿದೆ. ಈ ವರ್ಷ ನಾವು ಪಾಕಿಸ್ತಾನದಿಂದ ಪಡೆಯಬೇಕಾದ 18 ಕೋಟಿ ರೂಪಾಯಿಯನ್ನು ಮೇಲೆ ನಮ್ಮ ಬಜೆಟ್ ಅವಲಂಬಿಸಿದೆ. ಆದರಿಂದ ನಮ್ಮ ಬಜೆಟ್‌ನಲ್ಲಿ ಸುಮಾರು 48 ಲಕ್ಷ ರೂಪಾಯಿ ಉಳಿತಾಯ ಆಗುವುದೆಂದು ನಾವು ನಿರೀಕ್ಷಿಸಿದ್ದೆವು. ಇಂದು ಪ್ರಕಟವಾದ ಪಾಕಿಸ್ತಾನದ ಬಜೆಟ್‌ನಲ್ಲಿ ಈ ವರ್ಷ ಭಾರತಕ್ಕೆ ಕೊಡಬೇಕಾದ ಹಣದ ಬಗ್ಗೆ ಯಾವುದೇ ಏರ್ಪಾಟು ಮಾಡಿಲ್ಲ. ನಾವು ಈ ಪ್ರಮುಖ ವಿಷಯಗಳ್ನು ಪರಿಶೀಲಿಸಬೇಕಾಗಿದೆ. ಭಾರತದ ನ್ಯಾಯೋಚಿತ ಹಕ್ಕುಗಳನ್ನು ಮತ್ತು ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಅನುಸರಿಸಬೇಕೆಂದಿರುವ ಸರಿಯಾದ ನೀತಿ ಯಾವುದೆಂದು ನಾನು ಪ್ರಧಾನ ಮಂತ್ರಿಗಳಿಂದ ತಿಳಿದುಕೊಳ್ಳಬಯಸುತ್ತೇನೆ.

ಅಪಹರಿಸಿದ ಮಹಿಳೆಯರ ಪೈಕಿ 1289 ಮಹಿಳೆಯರನ್ನು ಕಳೆದ ವರ್ಷ, ಭಾರತದಲ್ಲಿ ಮರಳಿ ಪಡೆಯಲಾಗಿದೆ, ಆದರೆ, ಪಾಕಿಸ್ತಾನದಿಂದ ಕೇವಲ 479 ಮಹಿಳೆಯರನ್ನು ಮರಳಿ ಪಡೆಯಲಾಗಿದೆಯಂದು ಹೇಳಲಾಗಿದೆ.

ಎಷ್ಟು ಸಾವಿರ ಮಹಿಳೆಯರ ಪೈಕಿ, ನಮಗೆ ಗೊತ್ತಿಲ್ಲ. ಆ ಅಂಕಿಯನ್ನು ಕೊಟ್ಟಿಲ್ಲ. ಎರಡು ವರ್ಷಗಳ ಹಿಂದೆ, ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರು ಹೇಳಿದಂತೆ ಅದು ಸುಮಾರು ಹತ್ತು ಸಾವಿರ ಅಥವಾ ಹದಿನೈದು ಸಾವಿರ ಇರಬಹುದು. ಅಲ್ಲಿಂದ ಮರಳಿ ಪಡೆಯಬೇಕಾದವರ ಸಂಖ್ಯೆ ಇನ್ನೂ ಎಷ್ಟು ಸಾವಿರ ಇದೆಯೋ ನನಗೆ ಗೊತ್ತಿಲ್ಲ. ಆದ್ದರಿಂದ ಆ ವಿಷಯದಲ್ಲಿ - ನಮಗೆ ಕಲುಹಿಸಿದ ವರದಿಯಿಂದ ಕೆಲವನ್ನು ಎತ್ತಿಕೊಂಡು ಹೇಳುತ್ತಿದ್ದೇನೆ - ಅದು ಬಹು ಮುಖ್ಯವಾಗಿದ್ದರೂ - ನಾವು ಸಂಪೂರ್ಣವಾಗಿ ವಿಫಲರಾಗಿದ್ದೇವೆ.

ನೇಪಾಳ ಕುರಿತಂತೆ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ನನ್ನ ಸನ್ಮಾನ್ಯ ಸ್ನೇಹಿತರು ನೇಪಾಳದ ಬಗ್ಗೆ ಮಾತನಾಡಿದರು. ಕ್ರಮೇಣಾಕ್ರಮಣದ ಸಾಧ್ಯತೆಯ ಒಂದು ದೃಷ್ಟಿ ಕೋನದಿಂದ ಅವರು ನೇಪಾಳವನ್ನು ಉಲ್ಲೇಖ ಮಾಡಿದರು. ಅಮೇರಿಕಾ ಒಂದರಿಂದಲೇ ಕ್ರಮೇಣಾಕ್ರಮಣವನ್ನು ನಾನು ಆಲೋಚಿಸುತ್ತಿಲ್ಲ. ಬೇರೆ ಕಡೆಯಿಂದಲೂ ಎಂದರೆ ಟಿಬೆಟ್ ಕಡೆಯಿಂದಲೂ ಕ್ರಮೇಣಾಕ್ರಮಣದ ಸಾಧ್ಯತೆ ಇದೆ. ಪತ್ರಿಕೆಗಳಲ್ಲಿ ಆ ಬಗ್ಗೆ ವರದಿಗಳು ಪ್ರಕಟ ಆಗಿವೆ. ನೇಪಾಳದ ಬಗ್ಗೆ ವ್ಯವಹಾರಗಳನ್ನು ನಾವು ನಿರ್ವಹಿಸುತ್ತಿರುವ ರೀತಿ ಅಷ್ಟೊಂದು ಸರಿ ಇಲ್ಲ. ನೇಪಾಳದ ಕಾಂಗ್ರೆಸ್ ಅಂಗೀಕರಿಸಿರುವ ನಿರ್ಣಯ ಇಂದು ಪ್ರಕಟವಾಗಿದೆ. ನೇಪಾಳದ ವ್ಯವಹಾರಗಳನ್ನು ನಾವು ನಿರ್ವಹಿಸಿದ ರೀತಿಗೆ ಅದು ಕೈಗನ್ನಡಿ.

ಏಕೋ ಏನೋ ಉತ್ತರ ಭಾಗದ ಗಡಿಗಳು, ಅದರಲ್ಲೂ ಅಬೇಧ್ಯ ಹಿಮಾಲಯದ ಗಡಿಗಳು ಇಂದು ಶಿಥಿಲವಾಗಿವೆ. ಆ ನಿರ್ದಿಷ್ಟ ಪ್ರದೇಶದ ಆಯಾಕಟ್ಟಿನ ಮಹತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ ಎಂಬ ಬಗ್ಗೆ ವರದಿಯಲ್ಲಿ ಏನನ್ನೂ ಹೇಳಿಲ್ಲ. ಇವೆಲ್ಲಾ ನಮಗೆ ಸಂಬಂಧಪಟ್ಟಿರುವ ಬಹು ಮುಖ್ಯ ವಿಷಯಗಳು, ನಿಸ್ಸಂದೇಹವಾಗಿ, ನಾವು ಅಂತರರಾಷ್ಟ್ರೀಯತ್ವದ ಬಗ್ಗೆ ಆಲೋಚಿಸುತ್ತೇವೆ. ಪ್ರಪಂಚದ ಇತರ ರಾಷ್ಟ್ರಗಳ ಬಗ್ಗೆ ಆಲೋಚಿಸುತ್ತೇವೆ. ನಮ್ಮ ಕಾಲ ಮೇಲೆ ನಾವು ನಿಂತುಕೊಳ್ಳದಿದ್ದರೆ, ನಮ್ಮ ದೇಶದ ಅಥವಾ ದೇಶದ ಹೊರಗಡೆ ವಾಸಿಸುತ್ತಿರುವ ಜನರ ನ್ಯಾಯಾಚಿತ ಹಕ್ಕುಗಳ ಮತ್ತು ಗೌರವಾದರಗಳ ಅತಿಕ್ರಮಣ ಆಗಂತಹ ವಾತಾವರಣವನ್ನು ನಿರ್ಮಿಸಲು ನಾವು ಸಿದ್ಧರಾಗದಿದ್ದರೆ, ಪ್ರಪಂಚದ ಇತರ ರಾಷ್ಟ್ರಗಳೊಂದಿಗೆ ನಮ್ಮ ಸಂಬಂಧವನ್ನು ರೂಪಿಸುವ ಯಾವುದೇ ಬಲವಾದ ವಿದೇಶ ನೀತಿಯನ್ನು ಅನುಸರಿಸಲು ಉತ್ಸಾಹ ತುಂಬುವಲ್ಲಿ ನಾವು ಸಂಪೂರ್ಣವಾಗಿ ವಿಫಲರಾಗುತ್ತೇವೆ.

ಈ ವರದಿಯಲ್ಲಿ ಕಾಶ್ಮೀರದ ಬಗ್ಗೆ ಹೇಳುತ್ತಿರುವುದನ್ನು ನಾನು ಓದಿದೆ. ಸುಂದರ ವಾಕ್ಯಗಳಲ್ಲಿ ಡಾ॥ ಗ್ರಹಾಂ ವರದಿ ಬಗ್ಗೆ ಹೇಳಲಾಗಿದೆ. ಯಾವ ದೇಶಗಳು ನಮ್ಮ ಬೆನ್ನಿಗೇ ಚೂರಿ ಹಾಕುತ್ತಿರುವವೋ ಮತ್ತು ಅವುಗಳನ್ನು ನಾವು ಸರಿಯಾಗಿ ನಿಭಾಯಿಸುತ್ತಿಲ್ಲರೋ ಆ ದೇಶಗಳಿಗೂ ನಮಗೂ ಇರುವ ಸಂಬಂಧ ಬಗ್ಗೆ ಕಲ್ಪಿಸಿಕೊಂಡಿರುವ ವಿಲಕ್ಷಣ ಮನೋಭಾವ ಆ ವಾಕ್ಯಗಳಲ್ಲಿ ವ್ಯಕ್ತವಾಗಿದೆ. ಆ ವಾಕ್ಯಗಳು ಹೀಗಿವೆ:

> "ಭಾರತವು ನಿರ್ಣಯವನ್ನು ಒಪ್ಪಿಕೊಂಡಿಲ್ಲ.........."
>
> ಒಳ್ಳೇದೆ ಆಯ್ತು
>
> "..........ಏಕೆಂದರೆ, ಮೂಲಭೂತ ವಿಷಯಗಳ ಬಗ್ಗೆ ತನ್ನ ಮೂಲ ನೆಲುವಿಗೆ ಅವು ಸಂಪೂರ್ಣವಾಗಿ ವಿರುದ್ಧವಾದವುಗಳೆಂದು ಭಾರತ ಹೇಳಿದೆ. ಆದರೆ, ಶಾಂತಿಯುತವಾಗಿ ಇತ್ಯರ್ಥ ಮಾಡಿಕೊಳ್ಳಲು ಇರಬಹುದಾದ ಎಲ್ಲ ಮಾರ್ಗಗಳನ್ನು ಕಂಡು ಕೊಳ್ಳುವ ದೃಷ್ಟಿಯಿಂದ ಸಂಧಾನಗಳನ್ನು ಮುಂದುವರಿಸುವ ತನ್ನ ಇಚ್ಛೆಯನ್ನು ಭಾರತ ವ್ಯಕ್ತಪಡಿಸಿದೆ".

ಈ ಮಧ್ಯಸ್ಥಗಾರ ರೂಪಿಸಿರುವ ನಿರ್ಣಯಗಳು ಮೂಲಭೂತ ತತ್ವಗಳಿಗೆ ಅಥವಾ ನಾವು ಯಾವುದನ್ನು ಮುಖ್ಯ ತತ್ವಗಳೆಂದು ಪರಿಗಣಿಸಿದ್ದೇವೆಯೋ ಆ ತತ್ವಗಳಿಗೆ ವಿರುದ್ಧವಾದವುಗಳೆಂದು ನಾವು ಪದೇ ಪದೇ ಹೇಳಿದ್ದೇವೆ. ಆದರೂ, ನಾವು, ಶಾಂತಿಯುತ ಇತ್ಯರ್ಥಕ್ಕಾಗಿ ಸಂಧಾನಗಳು ಮುಂದುವರಿಯಬೇಕು ಎನ್ನುತ್ತಿದ್ದೇವೆ. ತನ್ನ ಮೂಲ ನಿಲುವನ್ನು

ಮತ್ತು ಮೂಲಭೂತ ವಿಷಯಗಳ ಬಗ್ಗೆ ತನ್ನನ್ನು ವಿರೋಧಿಸುತ್ತಿರುವವರ ತಾನು ನಿಭಾಯಿಸಬೇಕಾಗಿದೆಯಾದರೂ, ಅವರೊಂದಿಗೆ ಜಗಳಕೂಡದು, ಶಾಂತಿಯುತ ಇತ್ಯರ್ಥಕ್ಕಾಗಿ ಮಾರ್ಗಗಳನ್ನು ಕಂಡುಕೊಳ್ಳುವ ಉದ್ದೇಶಕ್ಕಾಗಿ ಸಂಧಾನವನ್ನು ಮುಂದುವರಿಸುವುದಕ್ಕೆ ಪ್ರಯತ್ನಿಸಬೇಕು ಎಂಬುದೇ ಪ್ರಧಾನ ಮಂತ್ರಿಗಳ ನೀತಿಯಾದರೇ ಎಲ್ಲ ವಿಷಯಗಳಿಗೂ, ಅದರಲ್ಲೂ ದೇಶದ ಗಡಿಗೂ ಸಹ ಅವರ ನೀತಿಯನ್ನು ಅನ್ವಯಿಸಬೇಕೆಂದು ನಾನು ಹೇಳುತ್ತೇನೆ. ಕಾಶ್ಮೀರದ ವಿಷಯದಲ್ಲಿ ಅಂತಿಮ ಪರಿಹಾರ ಯಾವುದು? ಭದ್ರತಾ ಸಮಿತಿಯಿಂದ ನಮಗೆ ನ್ಯಾಯ ಸಿಗುವುದಿಲ್ಲವೆಂದು ನಾನು ಪದೇ ಪದೇ ಹೇಳುತ್ತಲೇ ಇದ್ದೇನೆ. ಅತಿಕ್ರಮಣದ ವಿಷಯದ ಮೇಲೆ ಭದ್ರತಾ ಸಮಿತಿಗೆ ಹೋದೆವೇ ಹೊರತು ವಿಲೀನದ ವಿಷಯದ ಮೇಲಲ್ಲ. ಅತಿಕ್ರಮದ ವಿಷಯದಲ್ಲಿ, ಅತಿಕ್ರಮಣ ರುಜುವಾತಾಗಿದ್ದರೂ ಭದ್ರತಾ ಸಮತಿ ನಮ್ಮನ್ನು ಸಮರ್ಥಿಸಲು ಸಿದ್ಧವಾಗಿಲ್ಲ. ವಿಲೀನದ ವಿಷಯದಲ್ಲಿ, ಮೊದಲಿನಿಂದಲೂ ನಾವು ಅದು ಕಾಶ್ಮೀರ ಮತ್ತು ಭಾರತದ ನಡುವಣ ವಿಷಯ ಎಂದು ಪದೇ ಪದೆ ಹೇಳುತ್ತಲೇ ಇದ್ದೇವೆ. ಜನ ಮತಗಣನೆ ಆಗಲೆಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ ನಿಜ. ಆದರೆ, ಈಗ ಜನ ಮತಗಣನೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಜಮ್ಮು ಮತ್ತು ಕಾಶ್ಮೀರದ ಜನರ ಸಂಕಲ್ಪವನ್ನು ತಿಳಿದುಕೊಳ್ಳುವ ಇಚ್ಛೆ ನಿಮಗಿದ್ದರೆ, ಅದು ಆ ರಾಜ್ಯದ ರಾಜ್ಯಾಂಗ ಸಭೆಯ ಮೂಲಕ ಆಗಬೇಕು, ಈ ನಾಟಕಕ್ಕೆ ಕೊನೆಯ ಪರದೆ ಬೀಳಲೇ ಬೇಕು. ಗ್ರಹಾಂ ವರದಿಯ ಮೇಲೆ ಅಥವಾ ಆ ವರದಿಯಲ್ಲಿ ಎತ್ತಿರುವ ಅಂಶಗಳ ಮೇಲೆ ಹೆಚ್ಚು ಹೆಚ್ಚು ವಿಚಾರ ಮಾಡುತ್ತಾ ಹೋದಷ್ಟು ಅವು ಹೆಚ್ಚು ಹೆಚ್ಚು ಜಟಿಲವಾಗುತ್ತಾ ಹೋಗುತ್ತವೆ ಮತ್ತು ಆ ಸಿಕ್ಕಿನಿಂದ ಬಿಡಿಸಿಕೊಳ್ಳಲು ಭಾರತಕ್ಕೆ ತುಂಬಾ ಕಷ್ಟವಾಗುತ್ತದೆ. ಆಡಿದ ಮಾತನ್ನು ಪ್ರಧಾನ ಮಂತ್ರಿಗಳು ಹಿಂತೆಗೆದುಕೊಳ್ಳಬೇಕೆಂದು ನಾನು ಸಲಹೆ ಮಾಡುತ್ತಿಲ್ಲ. ಜನರ ಸಂಕಲ್ಪಕ್ಕೆ ಅನುಸಾರವಾಗಿ ಕಾರ್ಯ ಪ್ರವೃತ್ತನಾಗುತ್ತೇನೆಂದು ಅವರು ಹೇಳಿದ್ದಾರೆ. ಆ ಸಂಕಲ್ಪವನ್ನು ಒಂದಕ್ಕಿಂತ ಹೆಚ್ಚು ವಿಧಾನದಿಂದ ಸಂಗ್ರಹಿಸಬಹುದಾಗಿದೆ. ಜನ ಮತಗಣನೆ ಒಂದು ವಿಧಾನ. ಭಾರತದ ವಿಭಜನೆ ಆದಾಗ, ಭಾರತದ ಜನರ ಇಚ್ಛೆಯನ್ನು ಯಾರು ಸಂಗ್ರಹಿಸಿದ್ದರು? ಜನ ಮತಗಣನೆ ಆಗಿರಲಿಲ್ಲ. ಬಂಗಾಳ, ಪಂಜಾಬ್, ಸಿಂಧ್ ಮತ್ತು ಇತರ ಪ್ರದೇಶಗಳಿಂದ ಶಾಸನ ಸಭೆಗಳಿಗೆ ಸೀಮಿತ ಮತಾಧಿಕಾರದ ನಿಯಮಗಳ ಪ್ರಕಾರ ಆಯ್ಕೆಗೊಂಡಿದ್ದ ಸದಸ್ಯರುಗಳ ಅಭಿಪ್ರಾಯ ಪಡೆದು ಜನರ ಇಚ್ಛೆಯನ್ನು ಕಂಡುಕೊಳ್ಳಲಾಗಿತ್ತು. ಸೀಮಿತ ಮತಾಧಿಕಾರದ ಅನ್ವಯ ಶಾಸನ ಸಭೆಗಳಿಗೆ ಆಯ್ಕೆಗೊಂಡಿದ್ದ ಜನರ ತೀರ್ಮಾನದ ಮೇಲೆ ಭಾರತದ ವಿಭಜನೆ ಆಗಿರುವಾಗ, ವಯಸ್ಕ ಮತದಾನದ ಅನ್ವಯ ರಚನೆಯಾಗಿರುವ ಆ ರಾಜ್ಯಾಂಗ ಸಭೆಯ ಮೂಲಕ ಜಮ್ಮು ಮತ್ತು ಕಾಶ್ಮೀರದ ವಿಲೀನದ ಅಂತ್ಯ ರೂಪ ಏಕಾಗಬಾರದು? ಇದು, ಸರ್ಕಾರವು ತೀವ್ರವಾಗಿ ಪರಿಗಣಿಸಬೇಕಾದ ವಿಷಯ. ಈ ಕಲಸು ಮೇಲಸಿನಿಂದ ನಾವು ಹೊರಬರಲೇಬೇಕು. ನಾನು ಯಾರನ್ನೂ ದೂಷಿಸುತ್ತಿಲ್ಲ. ನಾವು ಒಳ್ಳೆಯ

ಉದ್ದೇಶವನ್ನಿಟ್ಟುಕೊಂಡು ಭದ್ರತಾ ಸಮಿತಿಗೆ ಹೋಗಿದ್ದೆವು. ಆದರೆ, ಭದ್ರತಾ ಸಮಿತಿಯ ಬಾಗಿಲು ಸಂಪೂರ್ಣವಾಗಿ ಮುಚ್ಚಿದಾಗ, ಯಾವ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ. ಅಂದ ಮೇಲೆ, ಪರದೆ ಎಳೆಯಲೇ ಬೇಕು, ತೀರ್ಮಾನವನ್ನು, ದೃಢವಾದ ತೀರ್ಮಾನವನ್ನು ತೆಗೆದುಕೊಳ್ಳಲೇಬೇಕು. ಈ ವಿಷಯದಲ್ಲಿ ನಮ್ಮ ನಮ್ಮಲ್ಲೇ ಯಾವ ವಾದ ವಿವಾದಕ್ಕೂ ಆಸ್ಪದ ಇರಬಾರದು. ವಿಶ್ವಸಂಸ್ಥೆ ಬಗ್ಗೆ ಹೇಳುವುದಾದರೆ, ಪಾಕಿಸ್ತಾನದ ಬಗ್ಗೆ ಹೇಳುವುದಾದರೆ, ಕೆಲವೊಂದು ಇತರ ರೀತಿಯಲ್ಲಿ ಅಹಿತಕರ ಪರಿಸ್ಥಿತಿಯ ಬೆಳವಣಿಗೆಯಾಗಬಹುದು. ಅಂಥ ಪರಿಸ್ಥಿತಿ ಉದ್ಭವಿಸಿದರೆ, ನಾವು ಆ ಬೆಳವಣಿಗೆಗಳನ್ನು ಸಂಪೂರ್ಣವಾಗಿ ಗಮನಕ್ಕೆ ತೆಗೆದುಕೊಳ್ಳಲು ಸನ್ನದ್ಧರಾಗಿರಬೇಕು.

ಇನ್ನು ಜರುಗುತ್ತಿರುವ ಚಳುವಳಿ ವಿಷಯ. ನಾನು ವಿವರಗಳನ್ನು ಹೇಳಲು ಇದು ಸಂದರ್ಭ ಅಲ್ಲ. ಕೆಲವು ದಿನಗಳ ಹಿಂದೆ ಪ್ರಧಾನ ಮಂತ್ರಿಯವರು ತುಂಬಾ ದಯೆ ಇಟ್ಟು ಆ ವಿಷಯದ ಮೇಲೆ ಈ ಸದನದಲ್ಲಿ ವಿಶೇಷ ಚರ್ಚೆಗೆ ಅವಕಾಶ ಕಲ್ಪಿಸಿದ್ದರು. ಆದರೆ, ನಾವು ಆ ದಿನ ಸಭೆಯಲ್ಲಿ ಹಾಜರಿರಲಿಲ್ಲ. ನಿಜ ಹೇಳಬೇಕೆಂದರೆ, ವಿಶೇಷ ಚರ್ಚೆ ಆಗಬೇಕೆಂದು ನಾನೂ ಬಯಸಿದ್ದೆ ನಾವು ಸದನದಲ್ಲಿ ಹಾಜರಿದ್ದ ಕಾಲದಲ್ಲಿ ಅಂತ ಚರ್ಚೆ ಆಗಿದ್ದರೆ ಒಳಿಯದಿತ್ತು. ಖಾಸಗಿಯಾಗಲ್ಲ. ಈ ಸದನದಲ್ಲಿ ನಾವು ಮಾತನಾಡಬಹುದಿತ್ತು. ನಮ್ಮ ನಮ್ಮ ದೃಷ್ಟಿಕೋನಗಳನ್ನು ಅರ್ಥ ಮಾಡಿ ಕೊಳ್ಳಬಹುದಿತ್ತು. ಯಾವ ಸಮಸ್ಯೆಯ ಬಗ್ಗೆ ಚಳುವಳಿ ಆಗುತ್ತಿದೆಯೋ ಆ ಸಮಸ್ಯೆಯ್ನನು ಕ್ಲಿಷ್ಟ ಅಂಶ ಯಾವುದೆಂದರೆ, ಭಾರತಕ್ಕೆ ಜಮ್ಮು ಮತ್ತು ಕಾಶ್ಮೀರದ ಜನರಿಗಷ್ಟೇ ಅಲ್ಲ, ಭಾರತದ ಜನರಿಗೂ ನ್ಯಾಯೋಚಿತವೆನಿಸುವಂಥ ರೀತಿಯಲ್ಲಿ ಆ ಕ್ಲಿಷ್ಟ ಅಂಶವನ್ನು ಇತ್ಯರ್ಥಪಡಿಸಬೇಕಾಗುತ್ತದೆ.

ವಿಷಯದ ಒಂದು ಅಂಶಕ್ಕೆ ನಾನು ಒತ್ತು ಕೊಡಬಯಸುತ್ತೇನೆ. ಕೆಲ ಜನರು ಇಲ್ಲಿ ಬಾಳಲು ಇಷ್ಟಪಡದ ಕಾರಣದಿಂದಾಗಿ ದೇಶದ ವಿಭಜನೆ ಆಯಿತು. ಭಾರತದಿಂದ ಬ್ರಿಟಿಷ್ ಆಳ್ವಿಕೆಯನ್ನು ಕಿತ್ತೊಗೆದಿರುವಾಗ, ಈ ದೇಶದ ಯಾವುದೇ ವರ್ಗದ ಜನರು ಇಲ್ಲಿ ಬಾಳಲು ಇಷ್ಟ ಇರದಿದ್ದರೆ, ಅಂಥವರು ಪ್ರಪಂಚದಲ್ಲಿ ಅವರು ಬಯಸಿದ ಯಾವುದೇ ಭಾಗಕ್ಕೆ ಹೋಗಬಹುದು. ಆದರೆ, ಈ ದೇಶದ ಯಾವುದೇ ಭಾಗವನ್ನು ಹೊತ್ತುಕೊಂಡು ಹೋಗಲು ಅವರಿಗೆ ಆಗುವುದಿಲ್ಲ ಎಂಬುದನ್ನು ಹೇಳಬೇಕಾದ ಕಾಲ ಬಂದಿದೆ. ಈ ದೇಶ ಯಾವುದೇ ಒಂದು ರಾಜ್ಯಕ್ಕೆ ಸೇರಿದ್ದಲ್ಲ. ದೆಹಲಿಯದಲ್ಲ, ಉತ್ತರ ಪ್ರದೇಶದ್ದಲ್ಲ, ಬಂಗಾಳದ್ದಲ್ಲ ಅಥವಾ ಜಮ್ಮು ಮತ್ತು ಕಾಶ್ಮೀರದ್ದಲ್ಲ. ಈ ದೇಶ ಭಾರತದ ಜನರಿಗೇ ಸೇರಿದ್ದು, ಅಂದ ಮೇಲೆ ಆ ದೇಶದ ಯಾವುದೋ ಭಾಗದ ಯಾರೋ ಜನರು ಐಕ್ಯ ಭಾರತದಲ್ಲಿ ಇರಲು ತಮಗೆ ಇಚ್ಛೆಯಿಲ್ಲ ಎಂದಾಕ್ಷಣ, ಭಾರತದ್ದೇ ಯಾವುದೇ ಭಾಗ ಭಾರತದ ಕೈಯಿಂದ ಜಾರಿ ಹೋಗುವ ಪ್ರಮೇಯವೇ ಇಲ್ಲ. ಈ ನಿಲುವನ್ನು ನಾವು ತೆಗೆದುಕೊಳ್ಳಲೇಬೇಕು. ಈಗ

ಇಲ್ಲಿ ಬ್ರಿಟಿಷರ ಆಳ್ವಿಕೆ ಏನಿಲ್ಲ. ಜನರ ಇಚ್ಛೆ, ನಾಲ್ಕು ಗೋಡೆಗಳ ಮಧ್ಯೆ ಅರಳುತ್ತದೇನು? ಅಧಿರಾಜತ್ವವನ್ನು ತಪ್ಪಿಸಿದ ಕಾನೂನು ಪರಿಕಲ್ಪನೆಯಿಂದ ಇಚ್ಛೆಯ ಕಲ್ಪನೆ ಹೊಮ್ಮಿದೆ. ಭಾರತ ಅಖಂಡವಾಗಿತ್ತು. ಆದರೆ, ಪ್ರಧಾನ ಮಂತ್ರಿಗಳಿಗೇ ಗೊತ್ತಿರುವಂತೆ, ನಮಗೂ ಗೊತ್ತಿರುವಂತೆ, ಭಾರತದ ವಿಭಜನೆ ಆಗಬೇಕು ಎಂದಷ್ಟೇ ಅಲ್ಲ, 560ಕ್ಕೂ ಹೆಚ್ಚಿಗೆ ಇರುವ ಸಂಸ್ಥಾನಗಳಿಗೆ ಸಾರ್ವಭೌಮತ್ವ ಮತ್ತು ಸ್ವಾತಂತ್ರ್ಯ ತಕ್ಷಣವೇ ಮರಳಿ ದೊರಕುವುದೂ ಬ್ರಿಟಿಷ್ ಅಧಿಪತ್ಯದ ಹಸ್ತಾಂತರದ ಷರತ್ತುಗಳಲ್ಲಿ ಒಂದು. ಭಾರತಕ್ಕೆ ಅನುಕೂಲ ಮಾಡಿಕೊಡುವ ದೃಷ್ಟಿಯಿಂದೇನು ಆ ಷರತ್ತು ಹಾಕಿರಲಿಲ್ಲ. ಬದಲಿಗೆ, ಭಾರತದ ಏಕೀಕರಣದ ಹಾದಿಯಲ್ಲಿ ಮುಳ್ಳು ತುಂಬುವ ಉದ್ದೇಶದಿಂದ ಆ ಷರತ್ತು ಹಾಕಲಾಗಿತ್ತು. ಆದರೂ, ನಾವು ಆ ಆಧಾರದ ಮೇಲೆ ಮುಂದುವರಿದೆವು. ಏಕೆಂದರೆ, ಆ ಷರತ್ತಿನ ಮೇಲೆಯೇ ಬ್ರಿಟಿಷ್ ಅಧಿಪತ್ಯದ ಹಸ್ತಾಂತರ ಆಯಿತು. ಈಗ ಆ ವಿಷಯದಲ್ಲಿ, ಪರಿಸ್ಥಿತಿಯ ಬಗ್ಗೆ ತಪ್ಪು ಅಭಿಪ್ರಾಯಪಡುವುದರಿಂದ ಏನೂ ಪ್ರಯೋಜನವಾಗುವುದಿಲ್ಲ. ಚಳುವಳಿಯನ್ನು ಹತ್ತಿಕ್ಕುವ ಉದ್ದೇಶಕ್ಕಾಗಿ ಸರ್ಕಾರವು ದಮನ ನೀತಿಯನ್ನು ಅನುಸರಿಸಲು ಪ್ರಯತ್ನ ಮಾಡಿದ ಅಥವಾ ಮಾಡುತ್ತಿರುವ ರೀತಿ ಸಫಲವಾಗುವುದಿಲ್ಲ. ಇಲ್ಲಿ ನಾನು ಬೇರೆನನ್ನು ಹೇಳುತ್ತಿಲ್ಲ. ಏಕೆಂದರೆ, ನನಗೆ ಯಾರೊಂದಿಗೂ ಜಗಳ ಬೇಕಿಲ್ಲ. ಆದರೆ, ಗುರುತರ ವಿಷಯಗಳು ಉದ್ಭವಿಸಿವೆ. ನಾವು ಪರಸ್ಪರ ದೂಷಿಸುವುದರಿಂದ ಏನೂ ಪ್ರಯೋಜನವಿಲ್ಲ. ಯಾರೋ ನನ್ನನ್ನು, ನಾನು ಯಾರನ್ನೋ ದೂಷಿಸಬಹುದು. ನಾವು ಪರಸ್ಪರ ಬಯ್ದಾಡಬಹುದು. ಯಾರೋ ನನ್ನನ್ನು ಇವ ಕೋಮುವಾದಿ ಅಥವಾ ಪ್ರಗತಿ ವಿರೋಧಿ ಎಂದು ಬಯ್ಯಬಹುದು. ನಾನು ಅವರಿಗೆ ಇನ್ನೇನೋ ಬಯ್ಯಬಹುದು. ಆದರೆ, ವಿಷಯ ಅದಲ್ಲ. ನಾವು ಈಗ ಜಮ್ಮು ಮತ್ತು ಕಾಶ್ಮೀರಕ್ಕೆ ಸಂಬಂಧಪಟ್ಟಂತೆ ಉದ್ಭವಿಸಿರುವ ಸಮಸ್ಯೆಗಳನ್ನು ಪರಿಶೀಲಿಸೋಣ - ಅವು ರಾಜಕೀಯ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು, ಆಡಳಿತಾತ್ಮಕ ಸಮಸ್ಯೆಗಳು. ಈ ಸಮಸ್ಯೆಗಳು ಶಾಂತಚಿತ್ತದಿಂದ, ನಿಷ್ಪಕ್ಷಪಾತ ಮನಸ್ಸಿನಿಂದ ಚರ್ಚಿಸೋಣ. ಯಾವುದೇ ತೀವ್ರ ಅಂತರರಾಷ್ಟ್ರೀಯ ಬಿಕ್ಕಟ್ಟು ಉದ್ಭವವಾಗುವುದನ್ನು ತಡೆಯಲು ಮತ್ತು ಇಡೀ ದೇಶದಲ್ಲಿ ತೊಂದರೆಗಳು ಹಾಗೂ ಕೋಲಾಹಲ ಉಂಟಾಗುವುದನ್ನು ತಪ್ಪಿಸಲು ಏನಾದರೊಂದು ಒಡಂಬಡಿಕೆ ಬರಲು ನಮಗೆ ಸಾಧ್ಯವಾಗುತ್ತೆಯೇ, ನೋಡೋಣ.

ಇಲ್ಲಿ, ಪ್ರಧಾನ ಮಂತ್ರಿಗಳು, ಮೂಲಭೂತ ವಿಷಯಗಳಲ್ಲಿ ಗ್ರಹಾಂ ವರದಿ ತನಗೆ ಒಪ್ಪಿಗೆ ಇಲ್ಲವೆಂದು - ಸಂಪೂರ್ಣವಾಗಿ ಒಪ್ಪಿಲ್ಲವೆಂದು ಅವರು ಹೇಳಿದ್ದಾರೆಂದು ನನ್ನ ಭಾವನೆ - ಹೇಳುತ್ತಾರೆ. ಆದರೂ, ಅವರು ಶಾಂತಿಯುತ ಇತ್ಯರ್ಥಕ್ಕಾಗಿ ಸಂಧಾನ ಮುಂದುವರಿಸಲು ಇಚ್ಛಿಸುತ್ತಿದ್ದಾರೆ. ಜಮ್ಮು ಮತ್ತು ಕಾಶ್ಮೀರ ಚಳುವಳಿಯ ವಿಷಯದಲ್ಲೂ ಅವರು ಇದೇ ರೀತಿಯ ಧೋರಣೆಯನ್ನು ಏಕೆ ತಾಳುತ್ತಿಲ್ಲ? ಸಂಪೂರ್ಣವಾಗಿ ಅವರು ಒಪ್ಪಿಕೊಳ್ಳದಿದ್ದರೂ, ಈ ವಿಷಯವನ್ನು ಇತ್ಯರ್ಥಪಡಿಸುವ ಉದ್ದೇಶಕ್ಕಾಗಿ ಸಂಧಾನಕ್ಕೆ ಮತ್ತು

ಶಾಂತಿಯುತ ವಿಧಾನಗಳನ್ನು ಕಂಡುಕೊಳ್ಳುವುದಕ್ಕೆ ಅವರು ಏಕೆ ತೊಡಗುತ್ತಿಲ್ಲ? ಆಂತರಿಕ ವ್ಯವಹಾರಗಳಲ್ಲಷ್ಟೇ ಅಲ್ಲ, ವಿದೇಶ ವ್ಯವಹಾರಗಳ ನಿರ್ವಹಣೆಯಲ್ಲೂ ತಾನು ಸಾವಧಾನವಾಗಿ ವಿಚಾರ ಮಾಡುತ್ತೇನೆಂದು ಅವರು ಹೇಳುತ್ತಾರೆ. ನಾನು ಅವರಿಗೆ ಗಾಂಧಿ ವಿಧಾನವನ್ನು ಅನುಸರಿಸಬೇಕೆಂದಷ್ಟೇ ಹೇಳುತ್ತಿದ್ದೇನೆ.

ಪಾಕಿಸ್ತಾನಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ, ನಿನ್ನೆ ರಾತ್ರಿ, ನಾನು ಒಂದು ಪುಸ್ತಕವನ್ನು ಓದುತ್ತಿದ್ದೆ. ಅದರಲ್ಲಿ, ಯುನೈಟೆಡ್ ಕಿಂಗ್‌ಡಮ್ ಪ್ರದಾನ ಮಂತ್ರಿ ಶ್ರೀ ಚೇಂಬರ್‌ಲೇನ್ ಹಾಗೂ ಫ್ರೆಂಚ್ ಪ್ರಧಾನ ಮಂತ್ರಿಯವರು 1938ರಲ್ಲಿ ಹಿಟ್ಲರ್ ಜತೆ ವ್ಯವಹರಿಸುವಾಗ ಅವೇ ವಾಕ್ಯಗಳನ್ನು ಬಳಸಿರುವುದು ನನಗೆ ಕಂಡು ಬಂತು. ಶ್ರೀ ಚೇಂಬರ್ ಲೇಸ್ ನೀತಿಯನ್ನು ಛತ್ರಿ ರಾಜಕೀಯ ಎಂದು ಕರೆಯಲಾಗಿತ್ತು. ಅವರ ನೀತಿಯನ್ನು ಹಾಗೆಂದೇ ಬಣ್ಣಿಸಲಾಗಿದೆ. ಪ್ರಪಂಚಕ್ಕೆ ತಿಳಿಸುವ ಸಲುವಾಗಿ ಅವರು ಇತ್ತಿದ್ದ ಟಿಪ್ಪಣಿಯಲ್ಲಿ "ನಾವು, ಮುಕ್ತವಾದ ಮತ್ತು ಶಾಂತಿಯುತ ಸಂಧಾನದ ವಿಧಾನಗಳಿಂದ ಅಂತರರಾಷ್ಟ್ರೀಯ ಕ್ಷೋಭೆಯನ್ನು ತಣ್ಣಗೆ ಮಾಡುವ ಮಹಾನ್ ಸಾರ್ವತ್ರಿಕ ಧ್ಯೇಯದಲ್ಲಿ ನಿರತರಾಗಿದ್ದೇವೆ" ಎಂದು ಹೇಳಿಕೊಂಡಿದ್ದರು. ತಣ್ಣಗೆ ಮಾಡುವ ಆ ನೀತಿಗೆ ಯಾವ ದುರ್ಗತಿ ಬಂತು, ಅದರಿಂದ ನಮಗೇ ಏನೇನು ಹಾನಿ ಆಯಿತು ಎಂಬುದು ಪ್ರಪಂಚಕ್ಕೆ ಗೊತ್ತಿದೆ. ಶೌರ್ಯ ಕೊಚ್ಚಿಕೊಳ್ಳುವ ಪ್ರವೃತ್ತಿ ಇರಬೇಕೆಂದು ನಾನು ಹೇಳುತ್ತಿಲ್ಲ. ಕತ್ತಿ ಹಿರಿದು ಅಥವಾ ಕತ್ತಿ ಹಿರಿಯದೆ ಅಥವಾ ಏನನ್ನೋ ಹಿಡಿದುಕೊಂಡು ಮುನ್ನುಗಬೇಕು ಮತ್ತು ನಮಗಿಷ್ಟ ಬಂದ ರೀತಿಯಲ್ಲಿ ಪ್ರಪಂಚದ ಇತರ ರಾಷ್ಟ್ರಗಳೊಂದಿಗೆ ನಾವು ವ್ಯವಹರಿಸಬೇಕೆಂದು ನಾನು ಹೇಳುತ್ತಿಲ್ಲ.

. . . .

ದೃಢ ಸಂಕಲ್ಪದ ಅಗತ್ಯ ಇದೆ. ನಿರ್ಣಾಯಕ ನೀತಿಯ ಅಗತ್ಯ ಇದೆ. ನಮ್ಮ ತಾಯ್ನಾಡಿನ ಹಿತಾಸಕ್ತಿಯನ್ನು ಸಾರಿ ಹೇಳಬೇಕಾದ ಅಗತ್ಯ ಇದೆ. ಈ ಎಲ್ಲವನ್ನು ಮನಸ್ಸಿನಲ್ಲಿಟ್ಟುಕೊಂಡು ನಾವು ಕಾರ್ಯ ಪ್ರವೃತ್ತರಾದರೆ, ನಾವು ಈವರೆಗೆ ಸಾಧಿಸಿರುವುದಕ್ಕಿಂತಲೂ ಹೆಚ್ಚು ಸಾಧನೆ ಮಾಡಬಲ್ಲೆವು ಎಂಬು ನಂಬಿಕೆ ನನಗಿದೆ.

ವೆಚ್ಚದ ಬಗ್ಗೆ ಕೊನೆಯ ಮಾತನ್ನು ಹೇಳಬಯಸುತ್ತೇನೆ. ಈಗಷ್ಟೇ ಮಾತನಾಡಿದ ನನ್ನ ಸನ್ಮಾನ್ಯ ಮಿತ್ರರು, ವಿದೇಶ ವ್ಯವಹಾರಗಳ ಮಂತ್ರಾಲಯದ ಖರ್ಚು ವೆಚ್ಚಗಳನ್ನು ಹೆಚ್ಚಿಸಬೇಕೆಂದು ಹೇಳಿದ್ದಾರೆ. ರಾಯಭಾರ ಕಾರ್ಯಾಲಯಗಳ ಕಾರ್ಯ ನಿರ್ವಹಣೆ ಬಗ್ಗೆ ನಾನು ಇನ್ನೂ ಹೆಚ್ಚು ತಿಳಿದುಕೊಳ್ಳಬೇಕೆಂದಿದ್ದೆ. ಅವುಗಳ ಕಾರ್ಯ ನಿರ್ವಹಣೆ ಬಗ್ಗೆ ಸುಳ್ಳು ವರದಿಗಳು ಅಥವಾ ಉತ್ಪ್ರೇಕ್ಷೆಯ ವರದಿಗಳು ನಮಗೆ ಬರಬಹುದು. ವಾಸ್ತವಾಂಶ

ತಿಳಿದುಕೊಳ್ಳಲು ನಾವು ಕಾತುರ ತಂದಿದ್ದೇವೆ. ಪ್ರಧಾನ ಮಂತ್ರಿಗಳು, ಕಳೆದ ಸಲ, ನಮ್ಮ ವಿದೇಶ ನೀತಿಗೆ ಸಂಬಂಧಪಟ್ಟಂತೆ, ಆಗಾಗ, ವಿರೋಧ ಪಕ್ಷಗಳ ನಾಯಕರುಗಳನ್ನು ಔಪಚಾರಿಕ ಸಮಾಲೋಚನೆಗೆ ಕರೆಯುವುದಾಗಿ ಆಶ್ವಾಸನೆ ಇತ್ತಿದ್ದರು. ಆದರೆ, ದುರಾದೃಷ್ಟವಶಾತ್, ಒಂದು ಬಾರಿ ಬಿಟ್ಟರೆ, ಅವರಿಗೆ ಕರೆಯಲು ಸಮಯ ಸಿಕ್ಕಿಲ್ಲ.

ಇನ್ನು ಈ ವೆಚ್ಚದ ವಿಷಯ. ನಮ್ಮ ಬಜೆಟ್ಟಿನ 438 ಕೋಟಿ ಪೈಕಿ ಸುಮಾರು ಎಂಟು ಕೋಟಿ ರೂಪಾಯಿಯನ್ನು ನಾವು ಖರ್ಚು ಮಾಡುತ್ತಿದ್ದೇವೆ. ಈ ಎಂಟು ಕೋಟಿ ರೂಪಾಯಿಗಳಲ್ಲಿ ಈಶಾನ್ಯ ಗಡಿನಾಡುಗಳ ರಕ್ಷಣೆಗೆ ನಿಗದಿ ಮಾಡಿರುವ ಮೂರು ಕೋಟಿ ರೂಪಾಯಿಗಿಂತ ಸ್ವಲ್ಪ ಹೆಚ್ಚಿನ ಮೊತ್ತ ಸೇರಿದೆ. ಗ್ರೇಟ್ ಬ್ರಿಟನ್ನಿನಲ್ಲಿ ಹೌಸ್ ಆಫ್ ಕಾಮನ್ಸ್‌ನಲ್ಲಿ ಮಂಡಿಸಿದ ಬಜೆಟ್‌ನಲ್ಲಿ, ವಿದೇಶ ವ್ಯವಹಾರಗಳ ಮಂತ್ರಾಲಯದ ಖರ್ಚು ವೆಚ್ಚಗಳನ್ನು 240 ಲಕ್ಷ ಪೌಂಡುಗಳಷ್ಟು ಇಳಿಸಿರುವುದಾಗಿ ಇಂದು ಬೆಳಿಗ್ಗೆ ರಾಯಿಟರ್ ಸುದ್ದಿ ಪ್ರಕಟ ಆಗಿದೆ ಎಂದರೆ ಸುಮಾರು 33 ಕೋಟಿ ರೂಪಾಯಿಗಳು. ಯಾವ ರೀತಿಯಲ್ಲಿ ಕಡಿಮೆ ಮಾಡಿದ್ದಾರೆಂದು ಹೇಳುವುದು ಕಷ್ಟ. ಆದರೆ, ಇಂದು ಅದು ಪ್ರಕಟವಾಗಿದೆ.

ಸಮರ್ಥನೆ ಇರದ ಹೊರತು ವೆಚ್ಚವನ್ನು ಹೆಚ್ಚಿಸುವುದು ನನಗೆ ಹಿಡಿಸುವುದಿಲ್ಲ. ರಾಯಭಾರ ಕಾರ್ಯಾಲಯಗಳು ನಡೆಯುತ್ತಿರುವ ರೀತಿಯಲ್ಲಿ ಮಿತವ್ಯಯ ತರಲು ಅವಕಾಶ ಇದೆಯೆಂದು ನಾನು ಭಾವಿಸಿದ್ದೇನೆ. ಉದಾಹರಣೆಗೆ ಪ್ರಚಾರದ ವಿಷಯ ತುಂಬಾ ದೋಷಪೂರ್ಣವಾಗಿದೆ. ಕೆಲವು ತಿಂಗಳ ಹಿಂದೆ, ನಾನು ಆಗ್ನೇಯ ಏಷ್ಯಾದ ಕೆಲವು ಸ್ಥಳಗಳಿಗೆ ಹೋಗಿದ್ದೆ. ಥಾಯ್‌ಲ್ಯಾಂಡ್, ಕಾಂಬೋಡಿಯ ಮತ್ತು ವಿಯಟ್ನಾಂ ದೇಶಗಳ ಕೆಲ ಭಾಗಗಳನ್ನು ನೋಡಿದೆ. ಭಾರತವು ತನ್ನ ಪ್ರಭಾವವನ್ನು, ಸಾಂಸ್ಕೃತಿಕ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಹೇರಳ ಅವಕಾಶಗಳಿವೆಯೆಂದು ನನಗೆ ಅಲ್ಲಿ ತಿಳಿದು ಬಂತು. ಆ ದೇಶಗಳ ಜನರು ಸಹ ಹಾಗಾಗಲೆಂದು ತುಂಬಾ ಇಷ್ಟಪಡುತ್ತಿದ್ದಾರೆ. ಆದರೆ, ದುರಾದೃಷ್ಟವಶಾತ್ ಆ ನಿಟ್ಟಿನಲ್ಲಿ ಸ್ವಲ್ಪವೇ ಸ್ವಲ್ಪ ಚಟುವಟಿಕೆಗಳಿವೆ. ಈ ವರ್ಷ ಒಬ್ಬರು ಪ್ರಸಿದ್ಧ ಇತಿಹಾಸಕರಾರರನ್ನು, ಉಪನ್ಯಾಸ ಮಾಲೆಗಾಗಿ ಥಾಯ್‌ಲ್ಯಾಂಡಿಗೆ ಕಳುಹಿಸುತ್ತಿರುವುದನ್ನು ತಿಳಿದು ನನಗೆ ಸಂತೋಷವಾಯಿತು. ಆ ದೇಶಗಳೊಂದಿಗೆ ಭಾರತದ ಸಂಪರ್ಕ ಕಳೆದು ಸಾವಿರಾರು ವರ್ಷಗಳವರೆಗೆ ಇತ್ತು. ಹಾಳು ಬಿದ್ದಿರುವ ಅಂಗೋರ್ ವಾಟ್ ದೇವಾಲಯ ನಗರ, ಸುಮಾರು 1500 ವರ್ಷಗಳ ಹಿಂದೆ ಆ ದೇಶಗಳೊಂದಿಗೆ ಭಾರತಕ್ಕೆ ಇದ್ದ ನಿಕಟ ಸಂಪರ್ಕವನ್ನು ನೆನಪಿಗೆ ತರುತ್ತದೆ. ಆ ದೇಶಗಳು ಸ್ವಾತಂತ್ರ್ಯಗಳಿಸುತ್ತಿವೆ. ತಮ್ಮ ಆಧ್ಯಾತ್ಮಿಕ ಮಾತೆಯ ಮಡಿಲಿಗೆ - ನನಗೆ ಅವರೇ ಹೇಳಿದ ಮಾತುಗಳು - ಬರಲು ಕಾತರದಿಂದಿದ್ದಾರೆ. ಆರ್ಥಿಕ ಅಥವಾ ರಾಜಕೀಯ ಒತ್ತಾಯದ ಅವಶ್ಯಕತೆ ಇಲ್ಲ. ಆ ಎಲ್ಲ ದೇಶಗಳೊಂದಿಗೆ ನಿಯತವಾಗಿ ಸಾಂಸ್ಕೃತಿಕ ಮತ್ತು ಇತರ ಸಂಪರ್ಕವನ್ನಿಟ್ಟುಕೊಳ್ಳುವ

ನೀತಿಯನ್ನು ಸರ್ಕಾರ ಅಳವಡಿಸಿಕೊಂಡರೆ ಭಾರತವು ಸಂಬಂಧವನ್ನು ಪುನರ್ ಸ್ಥಾಪಿಸಿಕೊಳ್ಳಬಹುದು. ಭಾರತದ ಸ್ಥಾನಮಾನವನ್ನು ಪುನರ್ ಸ್ಥಾಪಿಸುವ ದೃಷ್ಟಿಯಿಂದ ನಮ್ಮ ಸರ್ಕಾರವು ಒಂದಲ್ಲ ಒಂದು ರೀತಿಯಲ್ಲಿ ಅಂತಹ ಸಂಬಂಧವನ್ನು ಪುನರ್ ಸ್ಥಾಪಿಸುವ ಅಪೇಕ್ಷಣೀಯತೆಯನ್ನು ಮನಗಾಣುತ್ತದೆಂದು ನಾನು ಭಾವಿಸಿದ್ದೇನೆ.

ಪ್ರಸ್ತುತ ಪರಿಸ್ಥಿತಿ ಬಗ್ಗೆ ಹೇಳುವುದಾದರೆ, ನಿಸ್ಸಂದೇಹವಾಗಿ, ನಾವು ಸ್ಫೋಟಕ ಸ್ಥಿತಿಯಲ್ಲಿ ಬಾಳುತ್ತಿದ್ದೇವೆ. ನಾನು ಮತ್ತೆ ಮತ್ತೆ ಹೇಳಿದಂತೆ, ಆಂತರಿಕ ವಿಷಯಗಳಲ್ಲಿ ಸರ್ಕಾರದೊಂದಿಗೆ ನಮಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ, ಯಾವುದೇ ಷರತ್ತು ಅಥವಾ ಹಿಂಜರಿಕೆ ಇಲ್ಲದೆ ನಾನು ಆಶ್ವಾಸನೆ ಕೊಡುವುದೇನೆಂದರೆ, ನಮ್ಮ ತಾಯ್ನಾಡಿನ ಭದ್ರತೆ ಅಥವಾ ಸುರಕ್ಷತೆಗೆ ಅಪಾಯವನ್ನುಂಟು ಮಾಡುವ ಮಟ್ಟಕ್ಕೆ ಪರಿಸ್ಥಿತಿ ಹೋದರೆ, ಆಗ ಯಾವುದೇ ವಿಷಯದ ಮೇಲೆ ಯಾವುದೇ ರಾಜಕೀಯ ಭಿನ್ನಾಭಿಪ್ರಾಯಕ್ಕೆ, ಅದೆಷ್ಟೇ ಜಟಿಲವಾಗಿದ್ದರೂ ಕೂಡ, ಸ್ಥಾನ ಇರೋಲ್ಲ ಮತ್ತು ಈ ದೇಶದ ಎಲ್ಲಾ ಪಕ್ಷಗಳೂ ಭಾರತದ ಸುರಕ್ಷತೆಯನ್ನು ಹಾಗೂ ಏಕತೆಯನ್ನು ಸಂರಕ್ಷಿಸಲು ಹೆಗಲಿಗೆ ಹೆಗಲು ಕೊಡಲು ಸಿದ್ಧವಾಗಿರುತ್ತವೆ. ನಮಗೆ ಸಲ್ಲತಕ್ಕದ್ದು ನಮಗೆ ಸಿಗುತ್ತಿವೆಯೆಂಬ ಭಾವನೆಯನ್ನು ಎಲ್ಲ ವರ್ಗಗಳ ಜನರಲ್ಲಿ ಮೂಡಿಸುವ ತನಕ ಮತ್ತು ಯಾವುದರ ಮೇಲೆ ದೇಶದ ಸುರಕ್ಷತೆ ಹಾಗೂ ಏಳಿಗೆ ಅವಲಂಬಿಸಿದೆಯೋ ಆ ಆಡಳಿತಾತ್ಮಕ, ರಾಜಕೀಯ ಮತ್ತು ಆರ್ಥಿಕ ವಿಷಯಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸಲು ಕೊಡುವ ಹಲವಾರು ಅಭಿಪ್ರಾಯಗಳನ್ನು ನ್ಯಾಯೋಚಿತವಾಗಿ ಪರಿಗಣಿಸುವ ನಿಜವಾದ ಪ್ರಜಾಪ್ರಭುತ್ವ ಇರದಿದ್ದರೆ ಯಾವುದೇ ಪರಿಣಾಮಕಾರಿ ವಿದೇಶ ನೀತಿ ಇರುವುದು ಸಾಧ್ಯವಿಲ್ಲ.

## * ಚುನಾವಣಾ ಸುಧಾರಣೆಗಳು

ನಮ್ಮ ಚುನಾವಣೆಗಳಿಗೆ ಸಂಬಂಧಪಟ್ಟ ಕಾನೂನುಗಳು ಕೆಲವೊಂದು ಅಂಶಗಳ ಬಗ್ಗೆ ಮತ್ತು ಅದಕ್ಕೆ ಸಂಬಂಧಪಟ್ಟ ಕೆಲವೊಂದು ಇತರ ವಿಷಯಗಳ ಬಗ್ಗೆ ನಾನು ಸಂಕ್ಷಿಪ್ತವಾಗಿ ಹೇಳಬಯಸುತ್ತೇನೆ.

1953 ಜನತಾ ಪ್ರಾತಿನಿಧ್ಯ (ತಿದ್ದುಪಡಿ) ಮಸೂದೆಯನ್ನು ಸದನದ ಮುಂದೆ ಮಂಡಿಸಿರುವುದು ಸನ್ಮಾನ್ಯ ಸದಸ್ಯರಿಗೆ ತಿಳಿದೇ ಇದೆ. ಉದ್ದೇಶ ಮತ್ತು ಕಾರಣಗಳ ಹೇಳಿಕೆಯಲ್ಲಿ ಹೇಳಿರುವಂತೆ ಕಳೆದ ಸಾರ್ವತ್ರಿಕ ಚುನಾವಣೆಯ ಕಾಲದಲ್ಲಿ ಮತ್ತು ಆ ತರುವಾಯ, ಚುನಾವಣಾ ಆಯೋಗವು ಮತ್ತು ಸರ್ಕಾರವು, ಗಳಿಸಿದ ಅನುಭವಗಳ ಬೆಳಕಿನಲ್ಲಿ ರೂಪಿಸಿದ ಹಲವಾರು ಅಂಶಗಳು ಮಸೂದೆಯಲ್ಲಿ ಅಡಕವಾಗಿವೆ. ಆದರೆ, ಕೆಲವು ಪ್ರಮುಖ ಅಂಶಗಳು ಬಿಟ್ಟುಹೋಗಿವೆ ಆ ವಿಷಯಗಳ ಬಗ್ಗೆ ಹೇಗೆ ವಿಚಾರ ಮಾಡುತ್ತೀರಿ ಎಂಬುದನ್ನು ನಾನು ಸರ್ಕಾರದಿಂದ ತಿಳಿದುಕೊಳ್ಳಬಯಸಿದ್ದೇನೆ.

ಮಸೂದೆಯು ಸದನದ ಮುಂದೆ ಪರಿಗಣನೆಗೆ ಬಂದಾಗ, ತಿದ್ದುಪಡಿ ಮಾಡಬಯಸಿರುವ ನಿರ್ದಿಷ್ಟ ವಿಧಿಗಳ ವ್ಯಾಪ್ತಿಗೊಳಪಡದಂತಹ ತಿದ್ದುಪಡಿಸಗಳನ್ನು ನಾವು ಸಲಹೆ ಮಾಡುವುದಕ್ಕೆ ಆಗುವುದಿಲ್ಲ. ಆ ಹಂತದಲ್ಲಿ ಕ್ರಮಬದ್ಧವಾಗಿ ತಾಂತ್ರಿಕ ಆಕ್ಷೇಪಣೆಗಳನ್ನು ಎತ್ತುವ ಅವಕಾಶ ಇರುತ್ತದೆ. ಮಸೂದೆಯನ್ನು ಚರ್ಚೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ನಾನು ಈಗ ಎತ್ತಲಿರುವ ಅಂಶಗಳನ್ನು ಸರ್ಕಾರ ಪರಿಶೀಲಿಸಿದರೆ, ಈ ವಿಷಯಗಳನ್ನೂ, ಒಂದು ಏಕಾಭಿಪ್ರಾಯಕ್ಕೆ ಬಂದು, ಪರಿಶೀಲಿಸಬಹುದಾಗಿದೆ ಮತ್ತು ಸದನವು ಅವುಗಳನ್ನು ಯಾವ ರೀತಿಯಿಂದಾದರೂ ಇತ್ಯರ್ಥ ಮಾಡಲು ನಿರ್ಧರಿಸಿದ ಪಕ್ಷದಲ್ಲಿ ಆ ರೀತಿಯಲ್ಲಿ ನಿರ್ಧರಿಸಬಹುದು.

ಸಾರ್ವತ್ರಿಕ ಚುನಾವಣೆಯ ನಂತರ, ಸಂಸತ್ತಿನ ಮೊದಲ ಸಭೆಯಲ್ಲಿ, ರಾಷ್ಟ್ರಪತಿಯ ಭಾಷಣದ ಮೇಲೆ ಚರ್ಚೆ ಆಗುತ್ತಿದ್ದಾಗ ಈ ವಿಷಯಗಳನ್ನು ನಾನು ಪ್ರಸ್ತಾಪಿಸಿದ್ದೆ. ಪ್ರಧಾನ ಮಂತ್ರಿಗಳು ಚರ್ಚೆಗೆ ಉತ್ತರ ಕೊಡುತ್ತಾ, ಸಲಹೆಗಳನ್ನು ಮುಂದೆ ಪರಿಶೀಲಿಸುವುದಾಗಿ ಹೇಳುವ ಕೃಪೆ ತೋರಿದ್ದರು.

ಒಂದು ವಿಷಯವೆಂದರೆ, ವೋಟುಗಳ ಎಣಿಕೆಗೆ ಸಂಬಂಧಿಸಿದ್ದು, ಸನ್ಮಾನ್ಯರೇ ಬೇಕಾದಷ್ಟು ದೂರುಗಳು ಬಂದಿವೆ. ವೋಟುಗಳ ಎಣಿಕೆಯಲ್ಲಾಗುವ ವಿಳಂಬದಿಂದ ಆಗುತ್ತಿರುವ ಅಕ್ರಮಗಳು ಮತ್ತು ದುರಾಚಾರಗಳ ಬಗ್ಗೆ ಸಲಹೆಗಳನ್ನು ಮಾಡಲಾಗಿತ್ತು. ಚುನಾವಣಾ ಕ್ಷೇತ್ರಗಳ ಗಾತ್ರ ದೊಡ್ಡದಿರುವುದರಿಂದ ಮತ ಕೇಂದ್ರಗಳ ಸಂಖ್ಯೆ

---

* ಲೋಕಸಭಾ ಚರ್ಚೆಗಳು, 8 ಏಪ್ರಿಲ್, 1953 (3941-3945)

ದೊಡ್ಡದಿರುವುದರಿಂದ ವಿಳಂಬ ಅನಿವಾರ್ಯ. ಆದರೆ, ಚುನಾವಣೆ ಮುಗಿದ ಕೂಡಲೇ ಆ ದಿನವೇ ಎಣಿಕೆ ಕಾರ್ಯ ಆಗಬೇಕೆಂದು ನಾವು ಸಲಹೆ ಮಾಡಿದ್ದೆವು. ಕೆಲವೊಂದು ತೊಂದರೆಗಳನ್ನು ಎಂದರೆ ಎಣಿಕೆ ಕಾರ್ಯದ ಉಸ್ತುವಾರಿಗೆ, ಅಲ್ಲಿ ತಕ್ಷಣವೇ ತಕ್ಕ ಅರ್ಹ ವ್ಯಕ್ತಿಗಳು ಸಿಗುವುದಿಲ್ಲವೆಂದು ಚುನಾವಣಾ ಆಯುಕ್ತರು ಮತ್ತು ಸರ್ಕಾರದ ವಕ್ತಾರರೂ ಸಹ ಹೇಳಿದ್ದರು. ಅವರ ವಾದದಲ್ಲಿ ಹುರುಳು ಇರುವುದನ್ನು ನಾನು ಕಂಡುಕೊಂಡಿದ್ದೇನೆ. ವೋಟುಗಳ ಎಣಿಕೆ ವಿಷಯದಲ್ಲಿನ ಈ ಅಂಶವು ತಿದ್ದುಪಡಿ ಮಸೂದೆಯಲ್ಲಿ ಸೇರಿಲ್ಲವಾದ್ದರಿಂದ ಅದನ್ನು ಸರ್ಕಾರ ಪರಿಶೀಲಿಸಬೇಕೆಂದು ಕೋರುತ್ತೇನೆ. ಇದೇ ಪದ್ಧತಿ ಯುನೈಟೆಡ್ ಕಿಂಗ್‌ಡಮ್‌ನಲ್ಲಿದೆ. ಸಂಸತ್ತಿಗೆ ಚುನಾವಣೆಗಳು ನಡೆಯುವ ದೇಶಗಳಲ್ಲೂ ಸಹ ಇದೇ ಪದ್ಧತಿ ಇದೆ. ನಮ್ಮಲ್ಲಿ ಕೆಲವರು, ಪ್ರತಿಯೊಂದು ಮತಕೇಂದ್ರದಲ್ಲಿ ಅಲ್ಲೇ, ಆಗಲೇ ವೋಟುಗಳ ಎಣಿಕೆ ಕಾರ್ಯ ಆಗಬೇಕು, ಎಣಿಕೆ ಮುಗಿದ ಮೇಲೆ - ಮೂರು, ನಾಲ್ಕು ಅಥವಾ ಐದು ಗಂಟೆಗಳ ಸಮಯ ಬೇಕಾಗಬಹುದು - ಪ್ರತಿಯೊಂದು ಮತಕೇಂದ್ರದ ಪ್ರಿಸೈಡಿಂಗ್ ಆಫೀಸರ್ , ಎಣಿಕೆ ಕಾರ್ಯ ಮುಗಿದಿದೆಯೆಂದು ಘೋಷಿಸಬೇಕು, ಘೋಷಣೆ ಪತ್ರಕ್ಕೆ ಆಯಾ ಅಭ್ಯರ್ಥಿಗಳ ಪ್ರತಿನಿಧಿಗಳು ದೃಢೀಕರಣದ ಸಹಿ ಹಾಕಬಹುದು, ಹೀಗೆ ಎಲ್ಲಾ ಮತಕೇಂದ್ರಗಳಲ್ಲಿ ಏಕಕಾಲದಲ್ಲಿ ಮಾಡಿದರೆ, ಆ ತರುವಾಯ, ಮೂರು ಅಥವಾ ನಾಲ್ಕು ಅಥವಾ ಐದು ದಿನಗಳ ನಂತರ ಅಥವಾ ಒಂದು ವಾರದ ನಂತರ ಫಲಿತಾಂಶಗಳನ್ನು ಒಟ್ಟಿಗೆ ಸೇರಿಸಿ, ಮುಂದೊಂದು ದಿನ ಪ್ರಕಟಿಸಬಹುದು ಎಂದು ಸಲಹೆ ಮಾಡಿದ್ದೆವು.

ಎರಡನೇ ಸಲಹೆ, ಚುನಾವಣೆ ಗುರುತುಗಳನ್ನು ಅಂಟಿಸುವುದಕ್ಕೆ ಸಂಬಂಧಿಸಿದ್ದು. ಚುನಾವಣೆ ಗುರುತುಗಳನ್ನು ಒಂದು ಪೆಟ್ಟಿಗೆಯಿಂದ ಇನ್ನೊಂದು ಪೆಟ್ಟಿಗೆಗೆ ಬದಲಾಯಿಸಿ ಅಂಟಿಸುವ ಸಾಧ್ಯತೆ ಬಗ್ಗೆ ತೀರಾ ಗುರುತರವಾದ ಆಪಾದನೆಗಳು ಬಂದಿವೆಯೆಂದು ಪ್ರಧಾನ ಮಂತ್ರಿಗಳೇ ಸ್ವತಃ ಕಳೆದ ಸಲ, ಒಪ್ಪಿಕೊಂಡಿದ್ದರು. ಗುರುತುಗಳನ್ನು ಬಣ್ಣದಲ್ಲಿ ಬರೆಸಬೇಕೇ ಹೊರತು ಪೆಟ್ಟಿಗೆಗಳ ಮೇಲೆ ಅಂಟಿಸಬಾರದು. ಸಾಮಾನ್ಯವಾಗಿ ಅವು ಗಟ್ಟಿಯಾಗಿ ಅಂಟಿಕೊಳ್ಳುವುದಿಲ್ಲ. ಹಾಗಾಗಿ, ಹಲವಾರು ಅಕ್ರಮಗಳು ಆಗುತ್ತವೆಂಬ ಆಪಾದನೆ ಇದೆ. ವಿರೋಧ ಪಕ್ಷದವರಲ್ಲದ ಅನೇಕ ಜನರು ಈ ಎರಡು ನಿರ್ದಿಷ್ಟ ಸಲಹೆಗಳನ್ನು ಮಾಡಿದ್ದರು. ಕಾಂಗ್ರೆಸ್ ಪಕ್ಷದವರೂ ಮಾಡಿದ್ದರು. ಈ ಸಲಹೆಗಳನ್ನು ಪರಿಶೀಲಿಸಬೇಕೆಂದು ನಾನು ಕೋರುತ್ತೇನೆ.

ಇನ್ನೊಂದು ವಿಷಯವೆಂದರೆ, ಚುನಾವಣೆಗಳ ಕಾಲದಲ್ಲಿ ಮಂತ್ರಿಗಳಿಗೆ ಮತ್ತು ಸರ್ಕಾರದಲ್ಲಿರುವ ಇತರರಿಗೆ ಕೊಡಬೇಕಾದ ಸೌಲಭ್ಯಗಳಿಗೆ ಸಂಬಂಧಿಸಿದ್ದು. ಆ ಅಂಶದ ಮೇಲೂ ಸಹ ನಾವು ಚರ್ಚಿಸಿದ್ದೇವೆ. ಸರ್ಕಾರದ ಪರವಾಗಿ ಕೆಲವೊಂದು ಉತ್ತರಗಳನ್ನು ಕೊಡಲಾಗಿದೆ. ಸಾರ್ವತ್ರಿಕ ಚುನಾವಣೆಗಳ ಕಾಲದಲ್ಲಿ ಮಂತ್ರಿಗಳಿಗೆ ಹಾಗೂ ಅಭ್ಯರ್ಥಿಗಳಾದಂತಹವರಿಗೆ ಕೊಡುತ್ತಿರುವ ಸೌಲಭ್ಯಗಳ ಬಗ್ಗೆ ಯುನೈಟೆಡ್ ಕಿಂಗ್‌ಡಮ್‌ನಲ್ಲಿ

ಯಾವ ಪದ್ಧತಿ ಇದೆಯೆಂಬ ಬಗ್ಗೆ ನಾನು ಒಂದು ಸಂದರ್ಭದಲ್ಲಿ ಹೇಳಿದ್ದೆ. ನಾನು ವಿವರಗಳಿಗೆ ಹೋಗಬಯಸುವುದಿಲ್ಲ. ಅವು, ಔಪಚಾರಿಕ ನಿಬಂಧನೆಗಳು. ಅದೇ ಬಗೆಯ ನಡವಳಿಕೆ ನಿಯಮಗಳನ್ನು ನಮ್ಮ ದೇಶದಲ್ಲಿ ಏಕೆ ಅವಳಡಿಸಿಕೊಳ್ಳಬಾರದೆಂಬುದಕ್ಕೆ ಯಾವ ಸಮರ್ಥನೆಯೂ ಕಂಡುಬರುತ್ತಿಲ್ಲ. ವಾಸ್ತವವಾಗಿ, ಯುನೈಟೆಡ್ ಕಿಂಗ್‌ಡಮ್‌ನಲ್ಲಿ ಕಳೆದ ಸಾರ್ವತ್ರಿಕ ಚುನಾವಣೆಯ ಕಾಲದಲ್ಲಿ ಪತ್ರಿಕೆಯಲ್ಲಿ ವರದಿಯಾಗುತ್ತಿರುವಂತೆ, ಇಂಗ್ಲೆಂಡಿನ ಆಗಿನ ಪ್ರಧಾನ ಮಂತ್ರಿ ಶ್ರೀ ಅಟ್ಲಿಯವರು ಇಡೀ ಯುನೈಟೆಡ್ ಕಿಂಗ್‌ಡಮ್‌ನಾದ್ಯಂತ ಪ್ರವಾಸ ಮಾಡಿದಾಗ ಅವರಿಗೆ ವಾಹನ ಚಾಲಕನನ್ನು ಇಟ್ಟುಕೊಳ್ಳಲಾಗಲಿಲ್ಲವೆಂತೆ. ಬಹಳಷ್ಟು ಸಂದರ್ಭಗಳಲ್ಲಿ ಅವರ ಹೆಂಡತಿಯೇ ಕಾರನ್ನು ನಡೆಸುತ್ತಿದ್ದರಂತೆ. ಸರ್ಕಾರದ ಯಾವುದೇ ಕಾರನ್ನು ಅಥವಾ ಯಾವುದೇ ಇತರ ವಾಹನವನ್ನು ಅವರು ಎಂದೂ ಬಳಸಿಕೊಳ್ಳಲಿಲ್ಲವಂತೆ. ಅಲ್ಲಿ ಮಂತ್ರಿಗಳು ಮತ್ತು ಇತರರು ಚುನಾವಣಾ ಪ್ರಚಾರಕ್ಕಾಗಿ ನಿರ್ದಿಷ್ಟ ಕೇಂದ್ರಗಳಿಗೆ ಹೋದಾಗ ಕೆಲವೊಂದು ನಿರ್ದಿಷ್ಟ ನಿಯಮಗಳನ್ನು ಅನುಸರಿಸಲೇಬೇಕಾಗಿತ್ತು. ಅಂಥ ಸಂದರ್ಭಗಳಲ್ಲಿ ಯಾವ ರೀತಿ ವರ್ತಿಸಬೇಕೆಂಬ ಬಗ್ಗೆ ಸ್ಥಳೀಯ ಅಧಿಕಾರಿಗಳಿಗೆ ನಿರ್ದಿಷ್ಟ ಸೂಚನೆಗಳನ್ನು ನೀಡಲಾಗಿತ್ತು. ಅಂಥ ನಡವಳಿಕೆಗಳನ್ನೇ ನಮ್ಮ ರಾಷ್ಟ್ರದಲ್ಲೂ ಸಹ ನಿಯಮಿಸಬೇಕೆಂದು ನಾವು ಕೋರುತ್ತೇವೆ. ಈ ಅಂಶದ ಮೇಲೆ, ಕಳೆದ ಸಲ, ನಮ್ಮಲ್ಲಿ ಚರ್ಚೆ ಆಗಿದ್ದಾಗ, ಪ್ರಧಾನ ಮಂತ್ರಿಗಳು, ಮುಂದಿನ ಸಾರ್ವತ್ರಿಕ ಚುನಾವಣೆಗಳನ್ನು ನಡೆಸುವ ಉದ್ದೇಶಕ್ಕಾಗಿ ನಿಯಮಗಳಲ್ಲಿ ಮಾರ್ಪಾಟು ಮಾಡಬೇಕಾದ ಸಮಯದಲ್ಲಿ ವೈಯಕ್ತಿಕ ಟೀಕೆಗಳೇನೇ ಬಂದರೂ, ಪಕ್ಷಪಾತವಿಲ್ಲದೆ ಈ ವಿಷಯಗಳನ್ನು ಚರ್ಚಿಸಬೇಕೆಂಬುದನ್ನು, ತುಂಬಾ ಉದಾರದಿಂದ ಒಪ್ಪಿದ್ದರು. ಆದರೆ, ಈ ವಿಷಯಗಳಲ್ಲಿ ಯಾವುದೂ, ಈಗ ಸದನದ ಮುಂದಿರುವ ತಿದ್ದುಪಡಿ ಮಸೂದೆಯಲ್ಲಿ ಇಲ್ಲದಿರುವುದನ್ನು ಕಂಡು ನನಗೆ ವ್ಯಥೆಯಾಗಿದೆ.

ಮತ್ತೊಂದು ವಿಷಯವೆಂದರೆ, ಆಕಾಶವಾಣಿ ಮತ್ತು ವಾರ್ತಾ ಪ್ರಸಾರ ವ್ಯವಸ್ಥೆಯನ್ನು ಬಳಸುವುದಕ್ಕೆ ಸಂಬಂಧಿಸಿದ್ದು; ಈ ಸೌಲಭ್ಯಗಳು ವಿರೋಧ ಪಕ್ಷಗಳು ಅಭ್ಯರ್ಥಿಗಳಿಗೆ ಸಿಗುವುದಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಯುನೈಟೆಡ್ ಕಿಂಗ್‌ಡಮ್‌ನಲ್ಲಿ ವೇಳಾ ಪಟ್ಟಿ ಪ್ರಕಾರ, ಪ್ರತಿಯೊಂದು ಪಕ್ಷಕ್ಕೆ, ಮತದಾರರನ್ನು ಬೇಡಿಕೊಳ್ಳುವ ಸಲುವಾಗಿ ರೇಡಿಯೋ ಮತ್ತು ವಾರ್ತಾ ಪ್ರಸಾರ ಮಾಧ್ಯಮವನ್ನು ಬಳಸಲು ಅವಕಾಶ ಕೊಡಲಾಗುತ್ತದೆ. ನಮ್ಮ ದೇಶದಲ್ಲೂ ಸಹ ಅದೇ ಬಗೆಯ ನಿಯಮವನ್ನು ಏಕೆ ಅಳವಡಿಸಿಕೊಳ್ಳಬಾರದೆಂಬುದಕ್ಕೆ ಯಾವ ಸಮರ್ಥನೆಯೂ ಕಂಡುಬರುತ್ತಿಲ್ಲ.

ಇನ್ನೊಂದು ವಿಷಯವೆಂದರೆ, ಪಾಕಿಸ್ತಾನದಿಂದ ಬಂದಿರುವವರಿಗೆ ಮತದಾನದ ಹಕ್ಕು ನೀಡುವುದಕ್ಕೆ ಸಂಬಂಧಿಸಿದ್ದು. ನಿಮಗೆ ತಿಳಿದಿರುವಂತೆ, ನಮ್ಮ ರಾಜ್ಯಾಂಗದ ಪ್ರಕಾರ, ನನಗೆ ತಿಳಿದ ಮಟ್ಟಿಗೆ 1949ರ ಜುಲೈ 24ರ ನಂತರ ಭಾರತಕ್ಕೆ ಬಂದಿರುವ ಜನರಿಗೆ,

ಸಂಸತ್ತು ಪೌರತ್ವದ ಹಕ್ಕನ್ನು ಕೊಡುವ ಕಾನೂನನ್ನು ತರದಿದ್ದರೆ ಜನರು ಭಾರತದ ಪೌರರಾಗಲು ಅರ್ಹರಾಗುವುದಿಲ್ಲ. ದುರದೃಷ್ಟವಶಾತ್, ಈ ವಿಷಯವನ್ನು, ಕಳೆದ ಚುನಾವಣೆಗಳು ನಡೆಯುವುದಕ್ಕೂ ಮೊದಲೇ ಇತ್ಯರ್ಥ ಮಾಡಲಿಲ್ಲ. ಹಿಂದಿನ ಸಂಸತ್ತಿನಲ್ಲಿ, ಎಲ್ಲ ಪಕ್ಷಗಳ ಸುಮಾರು ನೂರು ಮಂದಿ ಸದಸ್ಯರು ಸಹಿ ಹಾಕಿದ ಮನವಿಯೊಂದನ್ನು ಪ್ರಧಾನ ಮಂತ್ರಿಗಳಿಗೆ ಸಲ್ಲಿಸಿ, 1949ರ ಜುಲೈ 24ರ ನಂತರ ಪಾಕಿಸ್ತಾನದಿಂದ ಭಾರತಕ್ಕೆ ಬಂದಿರುವ ಹಾಗೂ ಪಾಕಿಸ್ತಾನಕ್ಕೆ ವಾಪಸು ಹೋಗಲೇಬಾರದೆಂದು ನಿಶ್ಚಯಿಸಿಕೊಂಡಿರುವ ಲಕ್ಷಾಂತರ ಜನರಿಗೆ ಮತದಾನದ ಹಕ್ಕನ್ನು ಕೊಡುವ ವಿಶೇಷ ಶಾಸನವೊಂದನ್ನು ತರಲು ಕ್ರಮ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡಿದ್ದರು. ಆದರೆ, ದುರಾದೃಷ್ಟವಶಾತ್, ಪ್ರಧಾನ ಮಂತ್ರಿಗಳು ಹೇಳಿದಂತೆ, ಸಮಯದ ಅಭಾವದಿಂದ, ಆದಾಗಿಲ್ಲ. ಈಗಲೂ ಸಹ, ಅಂಥದೊಂದು ಮಸೂದೆ ಸಿದ್ಧವಾಗುತ್ತಿದೆ, ಈಗಾಗಲೇ, ಚುನಾವಣಾ ನಿಯಮಗಳನ್ನು ಮಾರ್ಪಾಟು ಮಾಡಲು ಕ್ರಮ ತೆಗೆದುಕೊಳ್ಳಲಾಗುತ್ತಿದೆಯೆಂದು ಪತ್ರಿಕೆಗಳಲ್ಲಿ ಬಂದಿರುವ ಸುದ್ದಿಯನ್ನು ನಾವು ನೋಡಿದ್ದೇವೆ. ಸರ್ಕಾರದ ಆಶಯ ಏನು, ಮಸೂದೆ ಯಾವಾಗ ಸಿದ್ಧವಾಗುತ್ತದೆ, ಸದನದ ಮುಂದೆ ಅದನ್ನು ಯಾವಾಗ ಮಂಡಿಸಲಾಗುತ್ತದೆ, ಅದರ ಬಗ್ಗೆ ಚರ್ಚಿಸಲು ನಮಗೆ ಯಾವಾಗ ಅವಕಾಶ ಸಿಗುತ್ತದೆ ಎಂಬ ಬಗ್ಗೆ ನನಗೆ ಗೊತ್ತಿಲ್ಲ. ಪೂರ್ವ ಪಾಕಿಸ್ತಾನ ಮತ್ತು ಪಶ್ಚಿಮ ಪಾಕಿಸ್ತಾನ ಎರಡರಿಂದಲೂ, ಹೆಚ್ಚಾಗಿ ಪೂರ್ವ ಪಾಕಿಸ್ತಾನದಿಂದ ಬಂದಿರುವ ಲಕ್ಷಲಕ್ಷಾಂತರ ಜನರ ಪೌರತ್ವದ ಹಕ್ಕು ಒಳಗೊಂಡಿರುವ ಈ ವಿಷಯ ತುರ್ತು ಸ್ವರೂಪದ್ದು. ಏಕೆಂದರೆ, 1949ರ ಜುಲೈ 24ರ ನಂತರ ಅಲ್ಲಿಂದ ಅವರು ಭಾರಿ ಸಂಖ್ಯೆಯಲ್ಲಿ ಬಂದಿದ್ದಾರೆ. ಆ ಅಂಶದ ಮೇಲೂ, ನಾನು ಈಗಿನ ವಸ್ತು - ಸ್ಥಿತಿ ಏನೆಂಬುದನ್ನು ತಿಳಿದುಕೊಳ್ಳಬಯಸುತ್ತೇನೆ.

ಕೊನೆಯದಾಗಿ, 'ಸಿ' ಭಾಗದ ರಾಜ್ಯಗಳ ವಿಷಯ. ಆ ರಾಜ್ಯಗಳು ಪ್ರತ್ಯೇಕ ಘಟಕಗಳಾಗಿ ಉಳಿಯಬೇಕೇ ಅಥವಾ ಸಾರ್ವತ್ರಿಕ ಚುನಾವಣೆಗೂ ಮೊದಲು, ಸರ್ಕಾರವು, ಕೊನೇ ಪಕ್ಷ 'ಸಿ' ಭಾಗದ ಕೆಲವು ರಾಜ್ಯಗಳು ಭವಿಷ್ಯತ್ ಅಸ್ತಿತ್ವದ ಬಗ್ಗೆ ತನ್ನ ನೀತಿಯನ್ನು ಪರಿಷ್ಕರಿಸುವುದೇ ಎಂಬ ಪ್ರಶ್ನೆ ಸಹ ಉದ್ಭವಿಸಿದೆ. ಉದಾಹರಣೆಗೆ ಅಜ್ಮೀರ್ 'ಸಿ' ಭಾಗದ ರಾಜ್ಯವಾಗಬೇಕಾಗುತ್ತದೆ. ಅಲ್ಲಿ ಏಳೂವರೆ ಲಕ್ಷ ಜನರಿದ್ದಾರೆ.

ಕೇಂದ್ರವು ಪ್ರತಿ ವರ್ಷ ಒಂದು ಕೋಟಿ ರೂಪಾಯಿಗಿಂತ ಹೆಚ್ಚಾಗಿ ಹಣ ಕೊಡುತ್ತದೆ. ಎಲ್ಲಾ ಸಾಧನ ಸಾಮಗ್ರಿಗಳ ಸಹಿತ, ಮುಖ್ಯಮಂತ್ರಿ, ಮಂತ್ರಿ, ಚೀಫ್ ಕಮಿಷನರ್, ಡೆಪ್ಯೂಟಿ ಕಮಿಷನರ್, ಅಸಿಸ್ಟೆಂಟ್ ಚೀಫ್ ಕಮಿಷನರ್, ಡೆಪ್ಯೂಟಿ ಕಮಿಷನರ್, ಅಸಿಸ್ಟೆಂಟ್ ಡೆಪ್ಯೂಟಿ ಕಮಿಷನರ್ ಹಾಗೂ ಅನೇಕ ಇತರ ಬಗೆಯ ಅಧಿಕಾರಿಗಳು ಇಂಥದೊಂದು ಸಣ್ಣ ರಾಜ್ಯದಲ್ಲಿ ಇರುವುದಕ್ಕೆ ಸಮರ್ಥನೆ ಕೊಡುವುದು ತುಂಬಾ ಕಷ್ಟವಾಗುತ್ತದೆ. ಇವೆಲ್ಲಾ ಸ್ಪಷ್ಟವಾಗಿ ವಿಚಾರ ಮಾಡಬೇಕಾದ ವಿಷಯಗಳು. ಅವು ನೀತಿಯ ವಿಷಯಗಳು. ಅವು

ಸನ್ಮಾನ್ಯ ಕಾನೂನು ಮಂತ್ರಿಗಳ ಖಾತೆಯ ವ್ಯಾಪ್ತಿಗೆ ಬರುತ್ತದೆ ಎಂಬುದಲ್ಲ. ಆದರೂ ಸಹ ಈ ಅಧೀನ ಪ್ರಾಂತ್ಯಗಳ ಭವಿಷ್ಯದ ಬಗ್ಗೆ ನೀತಿ ನಿರ್ಧಾರವನ್ನು ಕೈಗೊಳ್ಳದೇ ಹೋದರೆ, ನಾವು ಕಾಲ ಚಕ್ರದಲ್ಲಿ ಸಿಕ್ಕಿಕೊಳ್ಳುತ್ತೇವೆ ಆಗ ನಮಗೆ ಬದಲಾವಣೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುವುದಿಲ್ಲ. ಖರ್ಚು ಕಡಿಮೆ ಮಾಡಬೇಕೆಂದು ನಾವು ಕೋರುತ್ತೇವೆ. ಈ ನಿರ್ದಿಷ್ಟ ಪ್ರದೇಶಗಳಲ್ಲಿ ಖರ್ಚು ಕಡಿಮೆ ಮಾಡಲು ಹೇರಳ ಅವಕಾಶ ಇದೆ. ನಿಸ್ಸಂದೇಹವಾಗಿಯೂ ನಾವು ಹೆಚ್ಚು ವಿಕೇಂದ್ರಿಕರಣ ಆಗಬೇಕೆಂದು ಅಪೇಕ್ಷಿಸಿದ್ದೇವೆ. ವಿಕೇಂದ್ರಿಕರಣವೆಂದರೆ, ಭಾರತದ ವಿವಿಧ ಭಾಗಗಳಲ್ಲಿರುವ ಸಣ್ಣ ಪ್ರದೇಶಗಳಲ್ಲಿ, ಭೋಪಾಲ್ ಅಥವಾ ಅಜ್ಮೀರ್ ಅಥವಾ ಕೊಡಗು ಅಥವಾ ಪೂರ್ವ ಭಾರತದ ಕೆಲವೊಂದು ಇತರ ಪ್ರದೇಶಗಳನ್ನು ಪ್ರತ್ಯೇಕ ಘಟಗಗಳಾಗಿ ಇಟ್ಟುಕೊಳ್ಳಲು ಏನೇ ಐತಿಹಾಸಿಕ ಕಾರಣಗಳಿರಬಹುದು, ಕಳೆದ ಎರಡು ಅಥವಾ ಮೂರು ವರ್ಷಗಳಲ್ಲಿ ಅಂಥದೊಂದು ಐತಿಹಾಸಿಕ ಅವಶ್ಯಕತೆ ಅಳಿದು ಹೋಗಿದೆ, ಅಂತಹ ಸಣ್ಣ ಪ್ರದೇಶಗಳಲ್ಲಿ ರಾಜ್ಯಗಳು, ಮಂತ್ರಾಲಯಗಳು, ಸರ್ಕಾರಗಳು ಹಾಗೂ ಶಾಸನ ಸಭೆಗಳು ಇರಬೇಕೆಂದು ಅರ್ಥವಲ್ಲಿ, ಸರ್ಕಾರವು ಈಗ ಮನಸ್ಸು ಮಾಡಬೇಕು ಹಾಗೂ ಈ ಪ್ರದೇಶಗಳನ್ನು ಇತರ ಪಕ್ಕದ ಪ್ರಾಂತ್ಯಗಳಿಗೆ ಸೇರಿಸಬೇಕು ಅಥವಾ ಸೂಕ್ತವಾಗಿ ಪುನರ್ರಚಿಸಬೇಕು.

## * ಸರ್ಕಾರಿ ನೌಕರರು ಮತ್ತು ಕೆಲವೊಂದು ಸಂಘ ಸಂಸ್ಥೆಗಳ ಜೊತೆ ಅವರ ಸಹಯೋಗ

ಕೆಲವೊಂದು ಸಂಘ ಸಂಸ್ಥೆಗಳ ಜೊತೆ ಸರ್ಕಾರಿ ನೌಕರರ ಸಹಯೋಗದ ವಿಷಯವನ್ನು ಯಾವುದೇ ಪಕ್ಷದ ಅಭಿಪ್ರಾಯದ ದೃಷ್ಟಿಯಿಂದ ನೋಡದೇ ನಿಷ್ಪಕ್ಷಪಾತವಾಗಿ ನೋಡಬೇಕೆಂದು ನಾನು ಈ ಸದನಕ್ಕೆ ಮನವಿ ಮಾಡಿಕೊಳ್ಳುತ್ತೇನೆ. ತತ್ಕಾಲದಲ್ಲಿ ಯಾವುದೇ ಪಕ್ಷದ ಸರ್ಕಾರವಿದ್ದರೂ, ಅದೇ ಮುಖ್ಯವಲ್ಲ, ಕೆಲವೊಂದು ಮೂಲಭೂತ ತತ್ವಗಳು ಮುಖ್ಯವೆಂಬುದನ್ನು ಈ ಸದನದ ಎಲ್ಲರೂ ಒಪ್ಪುತ್ತಾರೆಂದು ನಾನು ಭಾವಿಸಿದ್ದೇನೆ. ದೇಶದ ಸಾಮಾನ್ಯ ರಾಜಕೀಯ ಸ್ಥಿತಿಗತಿಯನ್ನಾಗಲೀ ಅಥವಾ ರಾಜಕೀಯ ರಂಗದಲ್ಲಿ ಪ್ರತಿಪಾದಿಸುತ್ತಿರುವ ಬೇರೆ ಬೇರೆ ದೃಷ್ಟಿಕೋನಗಳನ್ನಾಗಲೀ ನಾವು ಚರ್ಚಿಸುತ್ತಿಲ್ಲ. ಬುಡಮೇಲು ಚಟುವಟಿಕೆಗಳಲ್ಲಿ ತೊಡಗಿದ್ದಾರೆಂಬ ಆಪಾದನೆಗೆ ಒಳಗಾಗಿರುವ ಸರ್ಕಾರಿ ನೌಕರರ ಮೇಲೆ ಕ್ರಮಗಳನ್ನು - ಕಠಿಣ ಕ್ರಮ - ತೆಗೆದುಕೊಳ್ಳುವುದು ಹಾಗೂ ಈಗಾಗಲೇ ಅಂಥ ಕ್ರಮ ತೆಗೆದುಕೊಂಡಿದ್ದರೆ ಅದು ಹೇಗೆ ಸಮರ್ಥನೀಯ, ಅಂಥ ಸಂದರ್ಭಗಳಲ್ಲಿ ಯಾವುದು ನ್ಯಾಯೋಚಿತ ಹಾಗೂ ತಕ್ಕ ವಿಧಾನವಾಗಿರಬೇಕೆಂಬ ವಿಚಾರವನ್ನು ನಾವು ಚರ್ಚಿಸುತ್ತಿದ್ದೇವೆ.

ಮೇಲ್ದರ್ಜೆಯಿಂದ ಹಿಡಿದು ಕೆಳದರ್ಜೆಯವರೆಗಿನ ನಮ್ಮ ಸರ್ಕಾರಿ ನೌಕರರು ದೇಶಕ್ಕೆ ಸಂಪೂರ್ಣವಾಗಿ ಮತ್ತು ಅಖಂಡವಾದ ನಿಷ್ಠರಾಗಿರಬೇಕೆಂಬುದು ಸಾಮಾನ್ಯ ರೀತಿ. ನಾನು, 'ದೇಶ' ಪದ ಬಳಸಿದಾಗ ಅದರರ್ಥ, ಈಗ ದೇಶವನ್ನು ಆಳುತ್ತಿರುವ ನಿರ್ದಿಷ್ಟ ರಾಜಕೀಯ ಪಕ್ಷ ಅಲ್ಲ. ದುರಾದೃಷ್ಟ ಸಂಗತಿ ಎಂದರೆ, ಇಂದು ದೇಶವೆಂದರೆ, ಅಧಿಕಾರದಲ್ಲಿರುವ ಪಕ್ಷ ಅಲ್ಲ. ಅದು ಕಾಂಗ್ರೆಸ್ಸೇ ಎಂಬಂತಾಗಿದೆ. ನಮ್ಮ ಸರ್ಕಾರಿ ನೌಕರರು, ತಮ್ಮ ಹುದ್ದೆಯ ಸ್ಥಾನಮಾನದಿಂದಾಗಿ ತಮಗೆ ಗೊತ್ತಾಗುವ ಮಾಹಿತಿಯನ್ನು ತಮ್ಮಲ್ಲೇ ಇಟ್ಟುಕೊಳ್ಳಬೇಕು ಹಾಗೂ ಅಂಥ ಮಾಹಿತಿಯನ್ನು ಸಾರ್ವಜನಿಕರಿಗೆ ಹೊರಗೆಡಹಬಾರದು ಎನ್ನುವುದು ಇನ್ನೊಂದು ನೀತಿ. ಇದೂ ಸಹ, ಖಂಡಿತವಾಗಿಯೂ, ಒಂದು ಔಪಚಾರಿಕ ತತ್ವ, ಮೂರನೆಯದು, ಅವರು ಪಕ್ಷದ ರಾಜಕೀಯದಲ್ಲಿ ಭಾಗವಹಿಸಕೂಡದು - ಇವು, ಪ್ರತಿಯೊಂದು ಪ್ರಜಾಪ್ರಭುತ್ವ ಪದ್ಧತಿಯ ದೇಶದಲ್ಲೂ ಭಾಗವಹಿಸಕೂಡದು - ಇವು ಪ್ರತಿಯೊಂದು ಪ್ರಜಾಪ್ರಭುತ್ವ ಪದ್ಧತಿಯ ದೇಶದಲ್ಲೂ ಅಸ್ತಿತ್ವದಲ್ಲಿವೆಯೆಂದು ನಾನು ಭಾವಿಸಿದ್ದೇನೆ. ಈಗ, ಕಚೇರಿಯ ಹೊರಗಡೆ ನಮ್ಮ ಸರ್ಕಾರಿ ನೌಕರರು, ರಾಜಕೀಯ ವಿಷಯಗಳಲ್ಲಿ ಪಾಲುಗೊಳ್ಳಲು ನಾವು ಎಷ್ಟರ ಮಟ್ಟಿಗೆ ಅವಕಾಶ ಕೊಡಬಹುದು ಎನ್ನುವ

---

* ಲೋಕ ಸಭಾ ಚರ್ಚೆಗಳು. 17, ಏಪ್ರಿಲ್ 1953 (4342-4347)

ಪ್ರಶ್ನೆ ಉದ್ಭವಿಸುತ್ತದೆ. ಅವರೆಲ್ಲರೂ ಮತದಾರರೇ ನಿರ್ದಿಷ್ಟ ರಾಜಕೀಯ ಪಕ್ಷಗಳ ಬಗ್ಗೆ ಅವರದೇ ಆದ ಭಾವನೆಗಳು ಅವರಿಗೆ ಇದ್ದೇ ಇರುತ್ತವೆ. ಇಂದು, ಸರ್ಕಾರಿ ನೌಕರರು ಒಂದು ದೊಡ್ಡ ಭಾಗ, ಒಂದಲ್ಲ ಒಂದು ಕಾರಣದಿಂದ, ಕಾಂಗ್ರೆಸ್ಸಿನ ಬೆಂಬಲಿಗರಲ್ಲದಿದ್ದರೆ, ಆಡಳಿತ ಪಕ್ಷವಾಗಿರುವ ಕಾಂಗ್ರೆಸ್ ತಲೆಕೆಡಿಸಿಕೊಳ್ಳಬಾರದು. ಸರ್ಕಾರವು ಘೋಷಿಸಿರುವ ನೀತಿಗಳನ್ನು ಪ್ರತಿಯೊಬ್ಬ ಸರ್ಕಾರಿ ನೌಕರನೂ ಕಾರ್ಯರೂಪಕ್ಕೆ ತರಲೇಬೇಕಾಗುತ್ತದೆ. ದೇಶದ ನೀತಿಗಳನ್ನು ಕಾರ್ಯರೂಪಕ್ಕೆ ತರುವ ವಿಷಯದಲ್ಲಿ ಅವರು ಅವಿಧೇಯರಾಗುತ್ತಾರೆಂಬ ಪ್ರಶ್ನೆಯೇ ಇಲ್ಲ. ಅದರಲ್ಲಿ ಅನುಮಾನವೇ ಇಲ್ಲ. ಆದರೆ, ನಾವು ಚರ್ಚಿಸುತ್ತಿರುವ ನಿಯಮಗಳ ಸ್ವರೂಪ ಎಂಥಾದ್ದು? ನಾವು, ಸರ್ಕಾರಿ ನೌಕರರ ಸಾಮಾನ್ಯ ನಿಯಮಗಳನ್ನು ಚರ್ಚಿಸುತ್ತಿಲ್ಲ. ಶಿಸ್ತು ಭಂಗದ ಯಾವುದೇ ಸಂದರ್ಭವನ್ನು ನಿಭಾಯಿಸಲು ನಿಮ್ಮಲ್ಲಿ ಸಾಕಷ್ಟು ನಿಯಮಗಳಿವೆ. ನಿಸ್ಸಂದೇಹವಾಗಿ, ಅಂಥ ಶಿಸ್ತು ಭಂಗದ ವಿಷಯಗಳನ್ನು ಸರಿಯಾಗಿ ಹಾಗೂ ಸಾಕಷ್ಟು ವಿಧಾನದಿಂದ ನಿಭಾಯಿಸಲು ನಮ್ಮ ಸರ್ಕಾರ ಹಾಗೂ ಇತರೆ ರಾಜ್ಯ ಸರ್ಕಾರಗಳು ಸಾಕಷ್ಟು ನಿಯಮಗಳನ್ನು ರಚಿಸಿವೆ. ಆದರೆ, ಈ ನಿಯಮಗಳನ್ನು ತೀರಾ ವಿಶಿಷ್ಟ ಸಮಯದಲ್ಲಿ ಘೋಷಿಸಲಾಗಿದೆ. ಆದ್ದರಿಂದ, ನಾನು ಇಡೀ ವಿಷಯವನ್ನು ಈ ಹಂತದಲ್ಲಿ - ನನ್ನ ಮನವಿಯಲ್ಲಿ ಏನಾದರೂ ಹುರುಳಿದ್ದರೆ - ಹೊಸದಾಗಿ ಪರಿಶೀಲಿಸಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಈ ನಿಯಮಗಳು ಸಮಾಧಾನಕರ ಕೆಲಸ ಮಾಡಿಲ್ಲ. ಈ ನಿಯಮಗಳಿಗೆ ಆಧಾರ ಯಾವುದು? ನೀವು ಹೇಗೆ ಕ್ರಮ ನಡೆಸುತ್ತೀರಿ? ನೀವು ಕೆಲವೊಂದು ಸಂಘ ಸಂಸ್ಥೆಗಳನ್ನು ಹೇಳಿದ್ದೀರಿ. ಯಾರಾದರೂ ಅಂಥ ಯಾವುದೇ ಸಂಘ ಸಂಸ್ಥೆಯ ಸದಸ್ಯರಾಗಿದ್ದರೆ ಅಥವಾ ಅಂಥ ಸಂಘ ಸಂಸ್ಥೆಯಲ್ಲಿ ಭಾಗಿಯಾಗಿದ್ದಾರೆಂದು ಅನುಮಾನ ಪಟ್ಟರೆ ಅಥವಾ ಅಂಥ ಸಂಘ ಸಂಸ್ಥೆಗಳ ಬಗ್ಗೆ ಅವರಿಗೆ ಸಹಾನುಭೂತಿ ಇದೆಯೆಂದು ಅನುಮಾನ ಪಟ್ಟರೆ ಅಂಥಹವರು ಬುಡಮೇಲು ಚಟುವಟಿಕೆಗಳಿಗೆ ಬೆಂಬಲ ಕೊಡುತ್ತಿದ್ದಾರೆ ಎಂದು ಪರಿಭಾವಿಸಲಾಗುತ್ತದೆಂದು ನೀವು ಹೇಳುತ್ತೀರಿ. ಅಂಥ ಸಂದರ್ಭಗಳಲ್ಲಿ ಬಿಡುಗಡೆ ನೋಟೀಸನ್ನು ಕೊಟ್ಟರೆ ಸಾಕೆಂದು ನಿಯಮ ಹೇಳುತ್ತದೆ. ಬುಡಮೇಲು ಚಟುವಟಿಕೆಗಳಲ್ಲಿ ತೊಡಗಿದೆಯೆಂದು ಸರ್ಕಾರವು ಅಭಿಪ್ರಾಯಪಟ್ಟಿರುವಂತಹ ಸಂಘ ಸಂಸ್ಥೆಗಳ ಪಟ್ಟಿಯನ್ನು ಮಂತ್ರಾಲಯವು, ವಿವಿಧ ಮಂತ್ರಾಲಯಗಳಿಗೆ ಕಳುಹಿಸುತ್ತದೆ ಮತ್ತು ಅಂಥಹವರು ಅಂಥ ಸಂಘ - ಸಂಸ್ಥೆಗಳ ಸದಸ್ಯರಾಗಿರುವುದನ್ನು ಅಥವಾ ಭಾಗಿಯಾಗಿರುವುದನ್ನು ಸೂಚನೆಗಳಲ್ಲಿ ಹೇಳಿರುವಂತೆ, ಸರ್ಕಾರಿ ನೌಕರನಿಗೆ ಬಿಡುಗಡೆ ನೋಟೀಸನ್ನು ಕೊಡಲು ಒಳ್ಳೆಯ ಆಧಾರವನ್ನಾಗಿ ಪರಿಗಣಿಸಲಾಗುತ್ತದೆ ಎಂದು ತಿಳಿಸುತ್ತದೆ. ಅಲ್ಲದೆ, ಆರೋಪ ಪಟ್ಟಿಯನ್ನು ಅಂಥ ಸರ್ಕಾರಿ ನೌಕರನಿಗೆ ಕೊಟ್ಟಾಗ, ಅದು ಮಾಹಿತಿಯ ಮೂಲವನ್ನು ಹೊರಗೆಡುವುದಿಲ್ಲವೆಂದು ಹೇಳಲಾಗಿದೆ. ಕೊಡುತ್ತಿರುವ ಯಾವುದೇ ವಿವರಗಳಲ್ಲಿ ಮಾಹಿತಿಯ ಮೂಲವನ್ನು ಬಹಿರಂಗಗೊಳಿಸುವಂತಹ ಯಾವುದೂ ಇರದಂತೆ ಎಚ್ಚರಿಕೆ

ತೆಗೆದುಕೊಳ್ಳಬೇಕೆಂಬುದನ್ನು ಇಲ್ಲಿ ತುಂಬಾ ಒತ್ತುಕೊಟ್ಟು ಹೇಳಲಾಗಿದೆ. ಮಾಹಿತಿಯ ಮೂಲದ ಮಾಹಿತಿ - ಇಲ್ಲದಿರುವುದಷ್ಟೇ ಅಲ್ಲ, ಮಾಹಿತಿಯ ಮೂಲವನ್ನು ಬಹಿರಂಗಗೊಳಿಸುವುದಕ್ಕೆ ಆಸ್ಪದ ಕೊಡುವಂತಹ ವಿವರಗಳನ್ನು ಕೊಡದಿರುವುದೂ ಕೂಡ! ಬಹುಷಃ ತಮಗೇ ತಿಳಿದಿರುವಂತೆ, ಸನ್ಮಾನ್ಯರೇ, ನನಗೆ ಕಮ್ಯೂನಿಸ್ಟ್ ಪಕ್ಷದ ಬಗ್ಗೆ ಯಾವುದೇ ಪ್ರೀತಿ ಇಲ್ಲ. ಅದು ಬೇರೆ ವಿಷಯ. ನನ್ನ ಬಗ್ಗೆ ಅವರಿಗೂ ಸಹ ಯಾವುದೇ ಪ್ರೀತಿ ಇಲ್ಲ. ಆದರೆ, ಈ ದೇಶದಲ್ಲಿ 'ಕಬ್ಬಿಣದ ಪರದೆ' ಹಿಂದೆ ಆಡಳಿತ ವ್ಯವಸ್ಥೆಯಲ್ಲಿ ಏನೇನು ನಡೆಯುತ್ತಿದೆಯೆಂಬುದು, ನಮ್ಮ ಪ್ರಜಾಪ್ರಭುತ್ವ ಸರ್ಕಾರವು ರಚಿಸಿರುವ ನಿಯಮಗಳಲ್ಲೇ ಸಾಕಷ್ಟು ವ್ಯಕ್ತವಾಗುತ್ತದೆ. ನೀವು ಯಾರ ಬಗ್ಗೆ ವಿಚಾರ ಮಾಡುತ್ತಿದ್ದೀರಿ? ಹೊರಗಿನವರ ಬಗ್ಗೆ ಅಲ್ಲ, ನಿಮ್ಮವರೇ ನೌಕರರ ಬಗ್ಗೆ. ನೀವೇ ನಿಯಮಗಳಲ್ಲಿ ಹೇಳಿರುವಂತೆ, ಅಂಥವರಿಗೆ ಕೆಲವೊಂದು ಸಂಘ ಸಂಸ್ಥೆಗಳ ಮೇಲೆ ಸಹಾನುಭೂತಿ ಇದ್ದರೆ, ಅಂಥಹವರ ಮೇಲೆ ಬಿಡುಗಡೆ ಮಾಡುವ ನೋಟೀಸು ಜಾರಿಮಾಡಲು ಅದು ಒಳ್ಳೆಯ ಆಧಾರವಾಗುತ್ತದೆ ಎಂದು ಹೇಳುತ್ತಿದ್ದೀರಿ. ಕಮ್ಯೂನಿಸ್ಟ್ ಪಕ್ಷ ಅಂಥ ಸಂಘ ಸಂಸ್ಥೆಗಳಲ್ಲಿ ಒಂದು. ಇನ್ನೂ ಕೆಲವರೆಂದರೆ, ಆರ್‌ಸಿಪಿಐ, ಆರ್‌ಎಸ್‌ಪಿಐ, ಆರ್‌ಎಸ್‌ಎಸ್, ಮುಸ್ಲಿಂ ನೇಷನ್ ಗಾರ್ಡ್ಸ್, ಖಿಕ್ಸಾರ್ಸ್, ಮಾರ್ಕ್ಸಿಸ್ಟ್ ಫಾವರ್ಡ್ ಬ್ಲಾಕನ್ನೂ ಸೇರಿಸಲು ಇತ್ತೀಚಿಗೆ ತಿದ್ದುಪಡಿ ತರಲಾಗಿದೆ. ಈ ಸಂಘ ಸಂಸ್ಥೆಗಳ ಬಗ್ಗೆ ಈಗ ಯಾವ ಕ್ರಮ ತೆಗೆದುಕೊಳ್ಳಲಾಗಿದೆ? ಈ ಯಾವುದೇ ಸಂಘ ಸಂಸ್ಥೆಗಳನ್ನು ನಿಷೇಧಿಸಲಾಗುತ್ತದೆಯೇ? ಈ ಅನೇಕ ಸಂಘ ಸಂಸ್ಥೆಗಳು ಬಹಿರಂಗವಾಗಿ, ಶಾಸನ ಸಭೆಗಳ ಮತ್ತು ಸಂಸತ್ತಿನ ಚುನಾವಣೆಗೆ ಅಭ್ಯರ್ಥಿಗಳನ್ನು ನಿಲ್ಲಿಸುತ್ತವೆ. ಗೆಲ್ಲಿಸುತ್ತವೆ. ಅಂಥ ಸಂಘ ಸಂಸ್ಥೆಗಳು ಈ ದೇಶದಲ್ಲಿ ಕಾನೂನು ಬಾಹಿರವಾಗಿ ಕೆಲಸ ಮಾಡುತ್ತಿರುವುದನ್ನು ತಡೆಯಲು ಸರ್ಕಾರದಿಂದ ಯಾವ ಪ್ರಯತ್ನವು ಆಗಿಲ್ಲ. ಅವುಗಳ ದೃಷ್ಟಿಕೋನಗಳೇನೇ ಇರಲಿ, ಅವು ಇಂದು - ಬಹಿರಂಗವಾಗಿ - ಕೆಲಸ ಮಾಡುತ್ತಿವೆ. ಆದರೂ, ನೀವು ಇಲ್ಲಿ ಯಾರೇ ಸರ್ಕಾರಿ ನೌಕರರಿಗೆ ಅಂಥ ಯಾವುದೇ ಸಂಘ ಸಂಸ್ಥೆಗಳ ಮೇಲೆ ಸಹಾನುಭೂತಿ ಇದೆಯೆಂಬ ಅನುಮಾನ ಬಂದರೆ, ಅವರಿಗೆ ಮಾಹಿತಿ ಕೊಡದೆ, ಅಂಥಹವರ ಮೇಲೆ ಆರೋಪಿಸಿರುವ ಆಪಾದನೆಗಳ ಮೂಲದ ವಿವರಗಳನ್ನೂ ಸಹ ಕೊಡದೆಯೇ, ಸರ್ಕಾರಿ ಸೇವೆಯಿಂದ ಅಂಥವರನ್ನು ತೆಗೆದುಹಾಕುವುದಕ್ಕೆ ಅದೇ ಸಾಕಷ್ಟು ಕಾರಣವಾಗುತ್ತದೆಂಬುದನ್ನು ಸೂಚಿಸುವ ಕೆಲವೊಂದು ನಿಯಮಗಳನ್ನು ಅಂಗೀಕರಿಸುತ್ತೀದ್ದೀರಿ.

ಕೆಲವು ಸಮಯದ ಹಿಂದೆ, ನನಗೆ ವೈಯಕ್ತಿಕವಾಗಿ ಗೊತ್ತಿದ್ದ ಎಂದರೆ, ಸರ್ಕಾರಿ ನೌಕರನೊಬ್ಬನಿಗೆ ತೀರಾ ಅನ್ಯಾಯ ಮಾಡಿದ್ದ ದೃಷ್ಟಾಂತವನ್ನು ಹೇಳಿದ್ದೆ. ನಾನು ಸರ್ದಾರ್ ಪಟೇಲರಿಗೆ ಮನವಿ ಮಾಡಿಕೊಂಡಾಗ, ವಿಚಾರಣೆ ಮಾಡಲಾಯಿತು ಮತ್ತು ಆ ಅಧಿಕಾರಿಯನ್ನು ಮತ್ತೆ ಕೆಲಸಕ್ಕೆ ತೆಗೆದುಕೊಳ್ಳಲಾಯಿತು. ಅದು ಸಂಪೂರ್ಣವಾಗಿ ಖಚಿತವಾದ ಪ್ರಕರಣವೆಂದು ಕಂಡುಬಂದಿತ್ತು. ಆದರೆ, ಪೋಲೀಸ್ ವರದಿಯು ತಪ್ಪೆಂದು ಕಂಡುಬಂದಾಗ

ಆತನನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳಲಾಯಿತು. ಅವರು ಈಗಲೂ ದೆಹಲಿಯಲ್ಲಿ ಭಾರತ ಸರ್ಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಒಬ್ಬ ಮುಖ್ಯ ಅಧಿಕಾರಿ. ಅಂತಹ ಪ್ರಕರಣಗಳು ಬಹಳಷ್ಟಿವೆ. ಸಮಸ್ಯೆ ಬಗ್ಗೆ ತಾಳಿರುವ ಇಡೀ ಧೋರಣೆ ತಪ್ಪು. ನಿಮ್ಮ ಸರ್ಕಾರಿ ನೌಕರರು ಪ್ರೌಢರು, ಸ್ವತಂತ್ರ ಭಾರತದ ಪೌರರು. ಈ ದೇಶದಲ್ಲಿ ನಿಷೇಧಿಸಿರುವ ಕೆಲವೊಂದು ಸಂಘ ಸಂಸ್ಥೆಗಳ ಮೇಲೆ ಅವರಿಗೆ ಖಂಡಿತವಾಗಿಯೂ ಸಹಾನುಭೂತಿ ಇರುತ್ತದೆ. ನೀವು ಅದನ್ನು ಆಕ್ಷೇಪಿಸುವಂತಿಲ್ಲ. ನಿಮ್ಮವರೇ ಸರ್ಕಾರಿ ನೌಕರರ ಬೆನ್ನಿಗೆ ಚೂರಿ ಹಾಕುವ ಉದ್ದೇಶದಿಂದ ನೀವು ಅಂಥ ಒಳಸಂಚಿನ ತಂತ್ರಗಳನ್ನು, ಅಂಥ ಪರದೆ ಹಿಂದಿನ ತಂತ್ರಗಳನ್ನು ಕೈಗೊಳ್ಳಲು ಪ್ರಯತ್ನಿಸಿದರೆ ದೇಶದ ಉತ್ತಮ ಆಡಳಿತದ ತಳಹಾದಿಯನ್ನು ಹಾಳು ಮಾಡಿದಂತಾಗುತ್ತದೆ. ಈ ದೇಶದಲ್ಲಿನ ಕೆಲವೊಂದು ಸಂಘ ಸಂಸ್ಥೆಗಳನ್ನು ನೀವು ಬಹಿಷ್ಕರಿಸ ಬಯಸಿದರೆ, ಎಲ್ಲರಿಗೂ ತಿಳಿಯುವಂತೆ ನ್ಯಾಯೋಚಿತವಾಗಿ ಮಾಡಿ, ಪರಿಣಾಮಗಳನ್ನು ಎದುರಿಸಿ, ನ್ಯಾಯ ಸಮ್ಮತ ಸಂಸ್ಥೆಗಳಂತೆ ಕೆಲಸ ಮಾಡಲು ನೀವು ಆ ಸಂಘ ಸಂಸ್ಥೆಗಳಿಗೆ ಅವಕಾಶ ಕೊಟ್ಟುಬಿಟ್ಟು, ಆಮೇಲೆ, ಯಾವುದೇ ಅಂಥ ಸಂಘ ಸಂಸ್ಥೆ ಬಗ್ಗೆ ಸಹಾನುಭೂತಿ ಇಟ್ಟುಕೊಂಡಿದ್ದಾರೆಂದು ನೀವು ಅನುಮಾನಿಸಿದ ಯಾರನ್ನೂ ಸರ್ಕಾರದ ಅಧೀನದ ಹುದ್ದೆಯಲ್ಲಿರಲು ಅವಕಾಶ ಕೊಡುವುದಿಲ್ಲ ಮತ್ತು ಅವರಿಗೆ ನಿಜವಾಗಿಯೂ ಅಂಥ ಸಹಾನುಭೂತಿ ಇದೆಯೋ ಇಲ್ಲವೋ ಎಂಬುದನ್ನು ರುಜುವಾತುಪಡಿಸಲು ಅವರಿಗೆ ಅವಕಾಶ ಕೊಡುವುದಿಲ್ಲ ಎಂದು ಹೇಳಿದರೆ ಅದು ಸಂಪೂರ್ಣವಾಗಿ ಪಕ್ಷದ ನಿಯಮವಾಗಿ ಬಿಡುತ್ತದೆ, ಆಗ ರಾಷ್ಟ್ರೀಯ ಸುರಕ್ಷತೆ ಎಂಬ ನಿಮ್ಮ ವಾದ ಬರೀ ಸೋಗು ಎನ್ನಿಸಿಬಿಡುತ್ತದೆ.

ನಾವು, ದೆಹಲಿಯಲ್ಲಾದ ಚುನಾವಣೆ ಸಮಯದಲ್ಲಿ - ನನ್ನ ಅನುಭವಕ್ಕೆ ಬಂದಿರುವಂತೆ- ಹಲವಾರು ಸ್ಥಳಗಳಲ್ಲಿ ಕೆಳದರ್ಜೆಯ, ಮಧ್ಯಮ ದರ್ಜೆಯ ಸರ್ಕಾರಿ ನೌಕರರ ಭಾರಿ ವರ್ಗಗಳು ಇದ್ದವು. ಕಾಂಗ್ರೆಸ್ ಪಕ್ಷದ ವಕ್ತಾರರು ಅವರಿಗೆ ಯಾವ ಒತ್ತಡ ಹಾಕಿದ್ದರು? "ನೀವೇನಾದರೂ ಕಾಂಗ್ರೆಸ್ ಪಕ್ಷಕ್ಕೆ ವೋಟು ಹಾಕದೇ ಹೋದರೆ, ನೀವೇನಾದರೂ ಆ ಪಕ್ಷಕ್ಕೆ, ಈ ಪಕ್ಷಕ್ಕೆ ವೋಟು ಹಾಕಿದರೆ ಪರಿಣಾಮ ಏನಾಗುತ್ತದೆಂಬುದನ್ನು ನೀವೆ ನೋಡುತ್ತೀರಿ" ಶ್ರೀಮತಿ ಕೃಪಲಾನಿಯವರು ಇಲ್ಲಿ ದೆಹಲಿಯಲ್ಲಿ ಒಬ್ಬ ಅಭ್ಯರ್ಥಿಯಾಗಿದ್ದರು. ಅವರು ಗೆದ್ದರು. ಅವರ ಕ್ಷೇತ್ರದಲ್ಲಿ ಸುಮಾರು 1500 ವೋಟುಗಳು ಅಂಚೆ ಮೂಲಕ ಬಂದವು. ಈ 1500 ವೋಟುಗಳ ಪೈಕಿ 1050 ವೋಟುಗಳು ಅವರ ಪರವಾಗಿ ಬಿದ್ದಿದ್ದವೆಂದು ಅವರೇ ನನಗೆ ಈಗ ತಾನೆ ಹೇಳಿದರು. ಆ ಅಧಿಕಾರಿಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ಉನ್ನತ ಸರ್ಕಾರಿ ಹುದ್ದೆಗಳಲ್ಲಿದ್ದವರು. ಅವರು ಕಾಂಗ್ರೆಸ್‌ಗೆ ವಿರುದ್ಧವಾಗಿ ವೋಟು ಹಾಕಲು ನಿರ್ಧರಿಸಿದ್ದರು. ಸರ್ಕಾರಿ ನೌಕರರಿಗೆಲ್ಲಾ ಅಂಚೆ ಮೂಲಕ ವೋಟು ಹಾಕಲು ಅವಕಾಶ ಕೊಟ್ಟರೆ ಸರ್ಕಾರದ ಎಲ್ಲಿರುತ್ತದೋ ನನಗೆ ಗೊತ್ತಿಲ್ಲ. ಅದನ್ನೇ ಏಕೆ ಪ್ರಯೋಗ

ಮಾಡಬಾರದು? ದೇಶಾದ್ಯಂತ ಇರುವ ಸರ್ಕಾರ ನೌಕರರ ಅಭಿಪ್ರಾಯವನ್ನು ಮತ್ತು ಈಗಿನ ಸರ್ಕಾರದ ಬಗ್ಗೆ ಅವರ ಅಭಿಪ್ರಾಯವೇನು ಎಂಬುದನ್ನು ತಿಳಿದುಕೊಳ್ಳಲು ಅದೇ ಸರಳವಾದ ಮಾರ್ಗ.........

ನಾನು, ಸಂವಿಧಾನವನ್ನು ಬದಲಾಯಿಸುವುದಕ್ಕೆ ಆಗುವುದಿಲ್ಲವೆಂಬುದು ನನಗೆ ಚೆನ್ನಾಗಿ ಗೊತ್ತಿದೆ. ಸರ್ಕಾರಿ ನೌಕರರೂ ಸಹ ತಮ್ಮ ವೋಟಿನ ಮೂಲಕ ಸಂವಿಧಾನವನ್ನು ಬದಲಾಯಿಸುವುದಕ್ಕೆ ಆಗುವುದಿಲ್ಲ. ನನಗೆ ಅಷ್ಟೋ ಗೊತ್ತಿಲ್ಲವೇ. ಸರ್ಕಾರಿ ನೌಕರರು ಅಂಚೆ ಮೂಲಕ ಹಾಕುವ ವೋಟುಗಳನ್ನೇ ಸರ್ಕಾರ ಅವಲಂಬಿಸಿದರೆ, ಈ ಸರ್ಕಾರದ ಗತಿ ಏನಾಗುತ್ತದೆ ಎಂಬುದು ನನಗೆ ಗೊತ್ತಿಲ್ಲ. ಅದು ಬೇರೆ ವಿಷಯ.

ಅವರಿಗೆ, ಅಭಿಪ್ರಾಯ ತಾಳುವ, ವ್ಯಕ್ತಪಡಿಸುವ ಸ್ವಾತಂತ್ರ್ಯ ಇದೆ. ಅವರು ಮಕ್ಕಳಲ್ಲ, ಪ್ರೌಢರು ನಿಮ್ಮ ದೇಶದ ಪೌರರು. ಈ ರೀತಿಯಲ್ಲಿ, ನೀವು ಅವರ ನಿಷ್ಠೆಯನ್ನು ಹಾಳು ಮಾಡಲು ಪ್ರಯತ್ನಿಸಿದರೆ, ನೀವು ಅವರಿಗೆ ಉಪಕಾರ ಮಾಡಿದಂತಾಗುವುದಿಲ್ಲ. ಮಾಡಿಲ್ಲದಿರುವುದನ್ನು ಮಾಡಿದ್ದಾರೆಂದು ನೀವು ಅನುಮಾನಿಸಿ ಜನರನ್ನು ದಂಡನೆಗೆ ಗುರಿಮಾಡುತ್ತಾ ಹೋದರೆ, ಅವರ ಮೇಲೆ ಹೊರಿಸಿರುವ ಆಪಾದನೆಗಳು ಸತ್ಯವಲ್ಲವೆಂಬುದನ್ನು ತೋರಿಸಲು ಅವರಿಗೆ ಅವಕಾಶ ಸಿಗದೇ ಹೋದರೆ, ಅದು ವಿಷಯದ ಗುರುತರ ಅಂಶವಾಗಿಬಿಡುತ್ತದೆ. ಆರ್‌ಎಸ್‌ಎಸ್ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕಾಗಿ ನಾಲ್ಕು ವರ್ಷಗಳ ಶಿಕ್ಷೆಗೊಳಗಾಗಿರುವ ತರುಣನಿಂದ ನನಗೆ ಕೇವಲ ಎರಡು ದಿನಗಳ ಹಿಂದೆ, ಒಂದು ಮನವಿ ಬಂದಿದೆ. ಆತ ಸಣ್ಣ ವಯಸ್ಸಿನ ಯುವಕ. ಕೇವಲ 16 ವರ್ಷ ವಯಸ್ಸು. ಎರಡು ತಿಂಗಳಾದ ಮೇಲೆ ಬಿಡುಗಡೆ ಮಾಡಿ ಗುರ್‌ಗಾಂವ್‌ನಲ್ಲಿ ಒಂದು ಸರ್ಕಾರಿ ಸಂಸ್ಥೆಯಲ್ಲಿ ನೌಕರರಿಗೆ ಕೊಡಲಾಗಿದೆ. ಅಲ್ಲಿ ಆತ ನಾಲ್ಕೂವರೆ ವರ್ಷ ಕೆಲಸ ಮಾಡಿದ್ದಾನೆ. ಪೋಲೀಸರು ವಿಚಾರಣೆ ಮಾಡಿದ್ದಾರೆ. ಮೇಲಾಧಿಕಾರಿಗಳಿಂದ ಯಾವ ದೂರು ಇಲ್ಲ. ಕೆಲವು ದಿನಗಳ ಹಿಂದೆ, ಆತನಿಗೆ, ನೀನು ನಾಲ್ಕು ವರ್ಷಗಳ ಹಿಂದೆ ಆರ್‌ಎಸ್‌ಎಸ್ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಕಾರಣ, ಮರುದಿನದಿಂದಲೇ ನಿನ್ನ ನೌಕರಿಯನ್ನು ರದ್ದುಗೊಳಿಸಲಾಗಿದೆಯೆಂಬ ಬಿಡುಗಡೆ ನೋಟೀಸು ಬಂದಿದೆ. ಅವನಿಗೂ ಯಾವುದೇ ಸಂಘ ಸಂಸ್ಥೆಗೂ ಯಾವುದೇ ಸಂಬಂಧ ಇಲ್ಲವೆಂದು, ಅವನ ಸ್ಥಿತಿಗತಿ ಹೇಗಿದೆಯೆಂದರೆ ಅದು ಯಾವುದೇ ರಾಜಕೀಯ ಚಟುವಟಿಕೆಯಲ್ಲಿ ತೊಡಗುವ ಸಾಧ್ಯತೆಯೇ ಇಲ್ಲವೆಂದು ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರು ಕೊಟ್ಟಿರುವ ಪ್ರಮಾಣ ಪತ್ರವನ್ನು ಅವನು ಕೊಟ್ಟಿದ್ದಾನೆ. ಆದರೂ, ಆ ಕುಟುಂಬ ಸಂಪೂರ್ಣ ಇಕ್ಕಟ್ಟಿಗೆ ಸಿಲುಕಿದೆ. ಈ ಬಗೆಯ ಜನರನ್ನು ನೀವು ಬೇಟೆಯಾಡುತ್ತಿದ್ದೀರಿ. ಏಕೆಂದರೆ, ಅವರು ತಾಳಿರುವ ಅಭಿಪ್ರಾಯಗಳು ಈಗಿನ ಸರ್ಕಾರಕ್ಕೆ ಒಪ್ಪಿಗೆಯಾಗುವುದಿಲ್ಲ ಅಥವಾ ಹಿತಕರ ಎನಿಸುವುದಿಲ್ಲ. ಹಾಗೆ

ಮಾಡುವುದರಿಂದ ಏನೂ ಆಗುವುದಿಲ್ಲ. ನಿಮ್ಮ ಮನಸ್ಸಿನಲ್ಲಿ ಯಾವ ಉದ್ದೇಶ ಇದೆಯೋ ಅದೇ ವಿಫಲವಾಗುತ್ತದೆ. ನೀವು ವಿಚಾರಣೆ ಮಾಡಬಯಸಿದರೆ, ನಿಮ್ಮಲ್ಲಿ ಕೆಲವು ಟ್ರಿಬ್ಯೂನಲ್‌ಗಳಿವೆ. ಎಲ್ಲ ಸಾಕ್ಷ್ಯವನ್ನು ಮುಂದಿಡಿ. ವ್ಯಕ್ತಿಗೆ ಒಂದು ಅವಕಾಶ ಕೊಡಿ. ಅದೇ ಪ್ರತಿಯೊಬ್ಬ ನಾಗರೀಕನಿಗೂ ಇರಬೇಕಾದ ವಾಡಿಕೆಯ, ಪ್ರಾಥಮಿಕ ಹಕ್ಕು. ನೀವು ಅವನ ನೌಕರಿಯನ್ನು ಕಿತ್ತುಕೊಳ್ಳಬಯಸಿದರೆ, ಆರೋಪ ಪಟ್ಟಿ ಕೊಟ್ಟು ಎದುರಿಸಿ. ಅದು ರಹಸ್ಯ ವಿಚಾರಣೆಯಾದರೂ, ಅವನ ಮೇಲೆ ಆರೋಪ ಮಾಡಿರುವ ಫಿರ್ಯಾದಿಗಳು ಯಾರು ಎಂಬುದನ್ನು ಹೇಳಿ. ಅಂಥವರನ್ನು ಪಾಟೀ ಸವಾಲು ಮಾಡಲು ಅವನಿಗೆ ಅವಕಾಶ ಕೊಡಿ. ಅವನು ತಪ್ಪಿತಸ್ಥನೆಂದು ರುಜುವಾತಾದರೆ ನೀವು ಬಯಸಿದ ರೀತಿಯಲ್ಲೇ ಎಲ್ಲಾ ರೀತಿಯ ಕ್ರಮ ತೆಗೆದುಕೊಳ್ಳಿ.

ನಿಜವಾಗಿಯೂ ಬುಡಮೇಲು ಚಟುವಟಿಕೆಗಳಾಗಿರುವಂತಹ ಯಾವುದೇ ಚಟುವಟಿಕೆಗಳಲ್ಲಿ - ಬುಡಮೇಲು ಚಟುವಟಿಕೆಗಳೆಂದು ಭ್ರಮಿಸುವಂತಹ ಚಟುವಟಿಕೆಗಳನ್ನೆಲ್ಲ ಮತ್ತು ತಕ್ಸೀರಿಗೊಳಪಡಿಸುವಂತಹ ಬುಡಮೇಲು ಚಟುವಟಿಕೆಗಳಲ್ಲಿ - ಸರ್ಕಾರಿ ನೌಕರನು ತೊಡಗಿದ್ದಾನೆಂಬುದು ರುಜುವಾತಾಗುವಂತಹ ಯಾವುದೇ ಬುಡಮೇಲು ಚಟುವಟಿಕೆಗಳನ್ನು ತಡೆಯಲು ಸರ್ಕಾರದಲ್ಲಿ ಸುಸ್ಪಷ್ಟ, ನಿಶ್ಚಿತ ನಿಯಮಗಳಿರಬೇಕು ಎನ್ನುವುದು ನನ್ನ ಉದ್ದೇಶ. ಸರ್ಕಾರಿ ನೌಕರರು ತಮ್ಮ ಸ್ಥಾನಮಾನವನ್ನು ದುರುಪಯೋಗಪಡಿಸಿಕೊಂಡರೆ, ನಿರ್ದಾಕ್ಷಿಣ್ಯವಾಗಿ ಕ್ರಮ ತೆಗೆದುಕೊಳ್ಳಿ. ಅವರು ಸರ್ಕಾರಿ ನೀತಿಗಗಳನ್ನು ಕಾರ್ಯರೂಪಕ್ಕೆ ತರುತ್ತಿಲ್ಲವೆಂಬ ಅರ್ಥದಲ್ಲಿ ಅವರು ನಿಷ್ಠಾವಂತರಲ್ಲದಿದ್ದರೆ ಅಂಥವರ ಮೇಲೂ ಕ್ರಮ ತೆಗೆದುಕೊಳ್ಳಿ. ಆದರೆ ಒಂದು ವಿಧಾನ ರಚಿಸಿರಿ. ಒಂದು ಟ್ರೈಬ್ಯೂನಲ್ ರಚಿಸಿರಿ. ವಿಷಯವನ್ನು ಅದರ ಮುಂದಿಡಿ, ಜನರು ಏನು ಹೇಳಿಕೊಳ್ಳ ಬಯಸುತ್ತಾರೋ, ಅದನ್ನು ಹೇಳುವ ಅವಕಾಶ ಇರಲಿ. ಆ ದೃಷ್ಟಿಯಿಂದ ನಾನು, ಗೃಹಮಂತ್ರಿಯವರಿಗೆ ಮತ್ತು ರೈಲ್ವೆ ಮಂತ್ರಿಯವರಿಗೆ ಈ ಎಲ್ಲಾ 400 ಪ್ರಕರಣಗಳನ್ನು ಪುನಃ ಪರಿಶೀಲಿಸಬೇಕು ಮತ್ತು ಪುನಃ ತನಿಖೆ ಮಾಡಬೇಕೆಂದು ಒತ್ತಾಯಿಸುತ್ತೇನೆ. ಹೈಕೋರ್ಟ್ ನ್ಯಾಯಾಧೀಶರನ್ನು ಏಕೆ ನೇಮಿಸಬಾರದು? ಈ ಎಲ್ಲ ಪ್ರಕರಣಗಳನ್ನು ವಿಚಾರಣೆ ಮಾಡಿ ಎಂದು ಹೇಳಿ - ಅವರ ಮುಂದೆ ಎಲ್ಲಾ ಸಾಕ್ಷ್ಯವನ್ನು ಮಂಡಿಸಿ - ಕೇವಲ ಅವರು ಒಂದು ಅಥವಾ ಇನ್ನೊಂದು ಸಂಸ್ಥೆಯಲ್ಲಿ ಸಹಭಾಗಿಯಾಗಿದ್ದಾರೆನ್ನುವ ಕಾರಣದಿಂದಲೇ ಅಲ್ಲ ಅವರು ನಿಜವಾಗಿಯೂ ಬುಡಮೇಲು ಚಟುವಟಿಕೆಗಳ ತಪ್ಪಿತಸ್ಥರೇ ಎಂಬುದನ್ನು ಕಂಡುಕೊಳ್ಳಿ. ಇದು ಈ ಈಸೋಪನ ನೀತಿ ಕಥೆಗಳಂತಿದೆ. ತೋಳ, ಕುರಿಮರಿಯನ್ನು ತಿನ್ನಲು ಬಯಸಿದ್ದಾಗ, ಅದು "ನೋಡು, ನೀರನ್ನು ನೀನು ಎಂಜಲು ಮಾಡಿಲ್ಲ, ಆದರೆ ನಿನ್ನಜ್ಜ ಎಂಜಲು ಮಾಡಿದೆಯಲ್ಲ, ನಿನ್ನನ್ನು ಕೊಂದು ತಿನ್ನಲು ನನಗಷ್ಟೇ ಕಾರಣ ಸಾಕು" ಎಂದಿತ್ತಂತೆ. ಸರ್ಕಾರ ನೌಕರರು ದೇಶದ ಆಡಳಿತ ವ್ಯವಸ್ಥೆಯ ಜೀವಾಳ. ದೇಶದ ಉದ್ದಗಲದಲ್ಲೂ ಇರುವ ಈ ಸಾವಿರಾರು ಜನರ

ಸಂಪೂರ್ಣ ನಿಷ್ಠೆಯನ್ನು ನೀವು ಹೊಂದಿದ್ದಾರೆ ಅಥವಾ ಆಡಳಿತಾರೂಢ ಪಕ್ಷವು ಇಚ್ಛಿಸದ ಕೆಲವೊಂದು ಸದ್ಭಾರದ ಕಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿರಬಹುದು ಎಂಬ ಕಾರಣ ಮಾತ್ರದಿಂದಲೇ ಅವರ ಹುದ್ದೆಗಳನ್ನು ಕಿತ್ತುಕೊಳ್ಳುವ ಬೇಟೆಯಾಡಬಾರದು. ಒಂದು ಕ್ಷಣ ಯೋಚಿಸಿ. ಕುರ್ಚಿಗಳು ಬದಲಾಗಬಹುದು. ನೀವು ಇಲ್ಲಿಗೆ ಬಂದು ಕುಳಿತುಕೊಳ್ಳಬಹುದು, ನಾವು ಅಲ್ಲಿಗೆ ಹೋಗಿ ಕುಳಿತುಕೊಳ್ಳಬಹುದು. ನಮಗೆ ಅವಕಾಶ ಸಿಕ್ಕಿದರೆ, ನಿಮ್ಮನ್ನೆಲ್ಲಾ ತೆಗೆದುಹಾಕುವುದಕ್ಕೆ ಸಾಕಷ್ಟು ಆಸ್ಪದ ಕೊಡುವಂತಹ ಸಂಪ್ರದಾಯಗಳನ್ನು ಹಾಗೂ ಪರಂಪರೆಗಳನ್ನು ನೀವು ಹಾಕಿ ಕೊಡುತ್ತಿದ್ದೀರಿ. ನಾವು ನಿಜವಾದ ಪ್ರಜಾಪ್ರಭುತ್ವವಾದಿಗಳಂತೆ ವರ್ತಿಸುತ್ತೇವೆ. ಆದರೆ, ನೀವು ಸಮರ್ಥನೆಯೋ ಇಲ್ಲದ ಮಾರ್ಗವನ್ನು ಅಳವಡಿಸಿಕೊಳ್ಳುತ್ತಿದ್ದೀರಿ.

ಈ ಎಲ್ಲ ವಿಷಯಗಳಲ್ಲಿ ಎಲ್ಲಾ ರಾಜಕೀಯ ಪಕ್ಷಗಳಿಗೂ ಹಾಗೂ ಸರ್ಕಾರಕ್ಕೂ, ದೇಶದಲ್ಲಿ ಒಳ್ಳೆಯ, ದಕ್ಷ ಮತ್ತು ಭ್ರಷ್ಟಾಚಾರ ರಹಿತ ಆಡಳಿತವನ್ನು ನಡೆಸುವುದಕ್ಕೆ ತಳಹದಿ ಒದಗಿಸುವ ಕೆಲವೊಂದು ಮೂಲಭೂತ ಏಕಾಭಿಪ್ರಾಯಕ್ಕೆ ಬರುವ ಸಾಮರ್ಥ್ಯ ತೋರಬೇಕೆಂದು ಸರ್ಕಾರಕ್ಕೆ ನಾನು ಮನವಿ ಮಾಡಿಕೊಳ್ಳುತ್ತಿದ್ದೇನೆ. ಸರ್ಕಾರಿ ಸೇವೆಯನ್ನು ಪಕ್ಷಗಳ ರಾಜಕೀಯದಿಂದ ದೂರ ಇಟ್ಟು ಬೆಳಸುವ ಪ್ರಯತ್ನ ಮಾಡೋಣ. ನಾವು ಒಟ್ಟಿಗೆ ಕುಳಿತುಕೊಂಡು, ಈ ಸದನದ ಒಳಗೆ ಮತ್ತು ಹೊರಗೆ ಎರಡೂ ಕಡೆ ನಾವೆಲ್ಲರೂ ಬೆಂಬಲಿಸುತ್ತೇವೆಂದು ವಾಗ್ದಾನ ಕೊಡುವುದಕ್ಕೆ ಆಸ್ಪದ ನೀಡುವಂತಹ ವಿಧಾನಗಳನ್ನು ರೂಪಿಸೋಣ. ಆಗ ಮಾತ್ರ, ನಾವು ನಿಜವಾದ ಪ್ರಜಾಪ್ರಭುತ್ವವನ್ನು ಬೆಳಸಬಹುದು.

## * ಕೈಗಾರಿಕೆ ಮತ್ತು ಸರಬರಾಜು ಮಂತ್ರಿ ಸ್ಥಾನಕ್ಕೆ ರಾಜೀನಾಮೆ ಇತ್ತಾಗ ಡಾ|| ಶ್ಯಾಮ್ ಪ್ರಸಾದ್ ಮುಖರ್ಜಿಯವರ ಹೇಳಿಕೆ

ಸನ್ಮಾನ್ಯರೇ, ನಾನು ಮಂತ್ರಿ ಮಂಡಲಕ್ಕೆ ರಾಜೀನಾಮೆ ನೀಡಲು ಆಸ್ಪದ ಕೊಟ್ಟ ಕಾರಣಗಳನ್ನು ಸಂಸದೀಯ ಪರಂಪರೆಗೆ ಅನುಸಾರವಾಗಿ ವಿವರಿಸಿ ಹೇಳಲು ಎದ್ದು ನಿಂತಿದ್ದೇನೆ. ನಾನು ಆತುರಾತುರದ ಯಾವುದೇ ನಿರ್ಧಾರ ತೆಗೆದುಕೊಂಡಿಲ್ಲವೆಂದು ಹಾಗೂ ಆತುರ ಪಡದೆ, ಆಳವಾಗಿ ಆಲೋಚನೆ ಮಾಡಿಯೇ ನಾನು ಈ ನಿರ್ಧಾರಕ್ಕೆ ಬಂದಿದ್ದೇನೆಂದು ಈ ಸದನಕ್ಕೆ ನಿಶ್ಚಿತ ಪಡಿಸುತ್ತೇನೆ. ಹಲವರು, ಅವರುಗಳ ಬಗ್ಗೆ ನನಗೆ ವೈಯಕ್ತಿಕವಾಗಿ ಗೌರವವಿದೆ, ನನ್ನ ನಿರ್ಧಾರವನ್ನು ಮರುಪರಿಶೀಲಿಸಬೇಕೆಂದು ಒತ್ತಾಯಮಾಡಿದ್ದರೂ, ಮರು ನಿರ್ಧಾರ ಕೈಗೊಳ್ಳಲು ನನ್ನಿಂದ ಆಗುತ್ತಿಲ್ಲ. 2½ ವರ್ಷಗಳ ವರೆಗೆ ಸ್ವತಂತ್ರ ಭಾರತದ ಪ್ರಪಥಮ ರಾಷ್ಟ್ರೀಯ ಮಂತ್ರಿ ಮಂಡಲದಲ್ಲಿ ಒಬ್ಬ ಮಂತ್ರಿಯಾಗಿ ಕೆಲಸ ಮಾಡುವ ಅವಕಾಶ ಸಿಕ್ಕಿದ್ದು ನನ್ನ ಸುಯೋಗ. ನನ್ನ ಮೇಲೆ ಬಿದ್ದ ಕರ್ತವ್ಯಗಳನ್ನು ನಿರ್ವಹಿಸುವುದನ್ನು ನಾನು ಕ್ಷಣಕಾಲವೂ ಮರೆತಿಲ್ಲ. ನಾನು ಪಡೆದ ಅನುಭವ ತುಂಬಾ ಅಮೂಲ್ಯವಾದದ್ದು. ನಮ್ಮ ದೇಶದ ಇತಿಹಾಸದಲ್ಲಿನ ಒಂದು ಅತ್ಯಂತ ಕಷ್ಟಕರ ಕಾಲದಲ್ಲಿ ಸ್ನೇಹಮಯ ಮತ್ತು ಸಹಕಾರದ ವಾತಾವರಣದಲ್ಲಿ ಕೆಲಸ ಮಾಡುವ ಸದಾವಕಾಶ ಒದಗಿ ಬಂದದ್ದು ನನ್ನ ಭಾಗ್ಯ. ನನ್ನಲ್ಲಿ ವಿಶ್ವಾಸ ಇಟ್ಟಿದ್ದ ಸದನದ ಎಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಅದರಲ್ಲೂ ಪಂಡಿತ್ ಜವಹರಲಾಲ್ ನೆಹರೂರವರಿಗೆ ಹಾಗೂ ಸರ್ದಾರ್ ವಲ್ಲಭಭಾಯ್ ಪಟೇಲರಿಗೆ, ಅವರ ನಾಯಕತ್ವದಲ್ಲಿ ದೇಶದ ಸೇವೆ ಮಾಡುವ ಅವಕಾಶ ಕೊಟ್ಟಿದ್ದಕ್ಕೆ ಅವರಿಗೆ ನಾನು ಅತ್ಯಂತ ಚಿರಋಣಿಯಾಗಿದ್ದೇನೆ. ವೈಯಕ್ತಿಕ ಸ್ವರೂಪದ ಯಾವುದೂ ನಾನು ರಾಜೀನಾಮೆ ನೀಡುವುದಕ್ಕೆ ಕಾರಣವಲ್ಲ. ಯಾರೊಂದಿಗೆ ನಾನು ಭಿನ್ನಭಿಪ್ರಾಯ ತಾಳಿದ್ದೆನೋ ಅವರೆಲ್ಲರೂ, ಹೇಗೆ ನಾನು ಅವರ ಅಭಿಪ್ರಾಯಗಳನ್ನು ಯಾವ ಹಿಂಜರಿಕೆ ಇಲ್ಲದೇ ಪರಾಮರ್ಶಿಸುತ್ತಿದ್ದೆನೋ ಹಾಗೆಯೇ ಅವರುಗಳೂ ಸಹ ನನ್ನ ದೃಢ ಅಭಿಪ್ರಾಯಗಳನ್ನು ಪರಾಮರ್ಶಿಸುತ್ತಿದ್ದರೆಂಬ ವಿಶ್ವಾಸ ನನಗಿದೆ. ನನ್ನದು ಮೂಲಭೂತ ಭಿನ್ನಾಭಿಪ್ರಾಯವಾದ್ದರಿಂದ, ನನ್ನ ಮನಸ್ಸಿಗೆ ಒಪ್ಪಿಗೆಯಾಗದ ನೀತಿಯನ್ನು ಅನುಸರಿಸುತ್ತಿರುವ ಸರ್ಕಾರದಲ್ಲಿ ಮಂತ್ರಿಯಾಗಿ ಮುಂದುವರಿಯುವುದು ಉಚಿತವೂ ಅಲ್ಲ, ಗೌರವವೂ ಅಲ್ಲ. ಪಾಕಿಸ್ತಾನದ ಪ್ರಧಾನ ಮಂತ್ರಿಯವರು ಭಾರತಕ್ಕೆ ಬರುವುದಕ್ಕೂ ಮೊದಲೇ ಏಪ್ರಿಲ್ 1 ರಂದು ನಾನು ನನ್ನ ನಿರ್ಧಾರವನ್ನು ವಿನಯಪೂರ್ವಕವಾಗಿ ಪ್ರಧಾನ ಮಂತ್ರಿಗಳಿಗೆ ತಿಳಿಸಿದಾಗ ಅವರು ನನ್ನ ನಿಲುವನ್ನು ಆ ತಕ್ಷಣವೇ ಮೆಚ್ಚಿದರು, ನಮ್ಮ ನಡುವಿನ ಭಿನ್ನಾಭಿಪ್ರಾಯಗಳನ್ನು ಮನಗಂಡು, ನನ್ನನ್ನು ಮಂತ್ರಿ ಸ್ಥಾನದ ಹೊಣೆಗಾರಿಕೆಯಿಂದ ಬಿಡುಗಡೆಮಾಡಲು ಒಪ್ಪಿದರು. ಆ ನಂತರದ ಯಾವುದೇ ಹಂತದಲ್ಲಿ ಹೊರಬಂದಿದ್ದರೆ ಅದು ಸರಿ ಅಂತ ಅವರಿಗೂ ಅನ್ನಿಸುತ್ತಿರಲಿಲ್ಲ, ನನಗೂ ಅನ್ನಿಸುತ್ತಿರಲಿಲ್ಲ.

ಪಾಕಿಸ್ತಾನದ ಬಗ್ಗೆ ನಮ್ಮ ಧೋರಣೆ ಬಗ್ಗೆ ನನಗೆ ಯಾವಾಗಲೂ ಸಮಾಧಾನ ಇರಲಿಲ್ಲ. ನಮ್ಮ ಧೋರಣೆ ದೌರ್ಬಲ್ಯದ್ದು, ದೋಷದ್ದು ಮತ್ತು ಅಸಂಗತವಾದದ್ದು. ನಮ್ಮ ಒಳ್ಳೆಯತನವನ್ನು ಅಥವಾ ನಿಷ್ಕ್ರಿಯತೆಯನ್ನು ಪಾಕಿಸ್ತಾನ ನಮ್ಮ ದೌರ್ಬಲ್ಯವೆಂದು ಭಾವಿಸಿದೆ. ನಮ್ಮ ಧೋರಣೆ, ಪಾಕಿಸ್ತಾನವನ್ನು ಹಠವಾದಿಯನ್ನಾಗಿ ಮಾಡಿದೆ. ನಮ್ಮ ಪ್ರತಿಷ್ಠೆಗೆ ತುಂಬಾ ಹಾನಿಯನ್ನುಂಟುಮಾಡಿದೆ. ನಮ್ಮ ಜನರ ಕೀರ್ತಿ ಹಾಳಾಗುವಂತೆ ಮಾಡಿದೆ. ಪ್ರತಿಯೊಂದು ಮಹತ್ವದ ಸಂದರ್ಭದಲ್ಲೂ ನಾವು ರಕ್ಷಣಾತ್ಮಕವಾಗಿರುವಂತೆ ಮಾಡಿದೆ. ನಮ್ಮನ್ನೇ ಗುರಿಯಾಗಿಟ್ಟುಕೊಂಡು ಪಾಕಿಸ್ತಾನ ಹೂಡಿದ್ದ ಸಂಚುಗಳನ್ನು ಬಯಲಿಗೆಳೆಯಲು ಅಥವಾ ನಿಷ್ಫಲಗೊಳಿಸಲು ನಾವು ವಿಫಲರಾಗಿದ್ದೇವೆ. ಭಾರತ - ಪಾಕಿಸ್ತಾನದ ನಡುವಣ ಸಾಮಾನ್ಯ ಸಂಬಂಧದ ಬಗ್ಗೆ ಇಂದು ನಾನು ಹೇಳುತ್ತಿಲ್ಲ. ಪಾಕಿಸ್ತಾನದಲ್ಲಿರುವ ಅದರಲ್ಲೂ ಪೂರ್ವ ಬಂಗಾಳದಲ್ಲಿರುವ ಅಲ್ಪಸಂಖ್ಯಾತರನ್ನು ನಡೆಸಿಕೊಳ್ಳುತ್ತಿರುವ ಸನ್ನಿವೇಶ ಸಂದರ್ಭಗಳೇ ಮುಖ್ಯವಾಗಿ ನನ್ನ ರಾಜೀನಾಮೆಗೆ ಕಾರಣ. ಬಂಗಾಳದ ಸಮಸ್ಯೆ ಕೇವಲ ಒಂದು ಪ್ರಾಂತ್ಯದ ಸಮಸ್ಯೆ ಅಲ್ಲ. ಅದು ಅಖಿಲ ಭಾರತದ ಸ್ವರೂಪದ ಸಮಸ್ಯೆಗಳಿಗೆ ಕಾರಣವಾಗಿದೆ. ಅದನ್ನು ಸರಿಯಾಗಿ ಬಗೆಹರಿಸುವುದರ ಮೇಲೆ ಇಡೀ ದೇಶದ ಶಾಂತಿ, ಸುವ್ಯವಸ್ಥೆ ಹಾಗೂ ಆರ್ಥಿಕ ಮತ್ತು ರಾಜಕೀಯ ಏಳಿಗೆ ನಿಂತಿದೆ. ಭಾರತ ಮತ್ತು ಪಾಕಿಸ್ತಾನದಲ್ಲಿರುವ ಅಲ್ಪಸಂಖ್ಯಾತರ ಬಗ್ಗೆ ಇರುವ ದೃಷ್ಟಿಕೋನದಲ್ಲಿ ಪ್ರಮುಖ ವ್ಯತ್ಯಾಸ ಇದೆ. ಭಾರತದಲ್ಲಿರುವ ಬಹುಸಂಖ್ಯಾತ ಮುಸ್ಲಿಮರು, ಕೋಮು ಆಧಾರದ ಮೇಲೆ, ದೇಶದ ವಿಭಜನೆ ಬಯಸಿದರು. ರಾಷ್ಟ್ರೀಯ ಹಿತದೃಷ್ಟಿಯೊಂದಿಗೆ ತಮ್ಮನ್ನು ಗುರುತಿಸಿಕೊಂಡ ಮತ್ತು ಅದಕ್ಕಾಗಿ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದ ದೇಶಭಕ್ತ ಮುಸ್ಲಿಮರ ಸಣ್ಣ ಗುಂಪು ಸಹ ಇದ್ದದ್ದನ್ನು ಕಂಡು ನನಗೆ ಸಂತೋಷವೂ ಆಗಿತ್ತು. ಹಿಂದೂಗಳು ಏಕವ್ಯಕ್ತಿಯಾಗಿ ವಿಭಜನೆಯನ್ನು ಬಲವಾಗಿ ವಿರೋಧಿಸಿದರು. ಭಾರತದ ವಿಭಜನೆ ಅನಿವಾರ್ಯವಾದಾಗ, ಬಂಗಾಳದ ವಿಭಜನೆಗೆ ಸಾರ್ವಜನಿಕ ಅಭಿಪ್ರಾಯ ಮೂಡಿಸುವುದಕ್ಕೆ ತುಂಬಾ ಶ್ರಮಪಟ್ಟೆ. ಏಕೆಂದರೆ, ಬಂಗಾಳದ ವಿಭಜನೆ ಆಗದಿದ್ದರೆ, ಇಡೀ ಬಂಗಾಳ ಹಾಗೂ ಬಹುಷಃ ಅಸ್ಸಾಂ ಪಾಕಿಸ್ತಾನಕ್ಕೆ ಹೋಗಿಬಿಡುತ್ತಿದ್ದವು. ಪ್ರಪಥಮ ಕೇಂದ್ರ ಮಂಡಲಕ್ಕೆ ನಾನು ಸೇರುವ ವಿಷಯ ಸ್ವಲ್ಪ ಸ್ವಲ್ಪ ಗೊತ್ತಿತ್ತು. ಆ ಸಮಯದಲ್ಲಿ ನಾನು ಹಾಗೂ ಇನ್ನಿತರರು, ಪೂರ್ವ ಬಂಗಾಳದ ಹಿಂದೂಗಳಿಗೆ, ಭಾವಿ ಪಾಕಿಸ್ತಾನದ ಸರ್ಕಾರದಿಂದ ನಿಮಗೇನಾದರೂ ತೊಂದರೆಯಾದರೆ, ಪೌರತ್ವದ ಮೂಲ ಹಕ್ಕನ್ನು ನಿಮಗೆ ಕೊಡದಿದ್ದರೆ, ನಿಮ್ಮ ಜೀವ ಮತ್ತು ಗೌರವ ಘನತೆಗೆ ಕುಂದುಂಟಾದರೆ ಅಥವಾ ಹಾನಿಮಾಡಿದರೆ ಸ್ವತಂತ್ರ ಭಾರತವು ಸುಮ್ಮನೆ ಮೂಕ ಪ್ರೇಕ್ಷಕನಂತೆ ಕುಳಿತಿರುವುದಿಲ್ಲ. ನಿಮ್ಮ ನ್ಯಾಯ ಬದ್ಧ ವಿಷಯಗಳನ್ನು ಭಾರತದ ಜನರು ಮತ್ತು ಸರ್ಕಾರ ಕೈಗೆತ್ತಿಕೊಳ್ಳುತ್ತದೆಂಬ ಆಶ್ವಾಸನೆ ಕೊಟ್ಟಿದ್ದೆವು. ಕಳೆದ 2½ ವರ್ಷಗಳಲ್ಲಿ ಅವರು ಅನುಭವಿಸಿದ ಯಾತನೆ ಅಷ್ಟಿಷ್ಟಲ್ಲ.. ತುಂಬಾ ಘೋರ ಸ್ವರೂಪದ್ದು. ನಾನು ಏನೆಲ್ಲಾ ಪ್ರಯತ್ನ ಮಾಡಿದರೂ ನನ್ನ

ವಾಗ್ದಾನವನ್ನು ಈಡೇರಿಸುವುದು ನನಗೆ ಸಾಧ್ಯವಾಗಿಲ್ಲ. ಆದ್ದರಿಂದ, ಈ ಒಂದು ಕಾರಣದಿಂದಲೇ ಮತ್ತೇನೂ ಅಲ್ಲ - ಇನ್ನು ಮುಂದೆ ಈ ಸರ್ಕಾರದಲ್ಲಿ ಭಾಗಿಯಾಗಲು ನನಗೆ ಯಾವ ನೈತಿಕ ಹಕ್ಕೂ ಇಲ್ಲವೆಂಬುದನ್ನು ಒಪ್ಪಿಕೊಳ್ಳಲು ನನಗೆ ಯಾವ ಹಿಂಜರಿಕೆಯೂ ಇಲ್ಲ. ಪೂರ್ವ ಬಂಗಾಳದಲ್ಲಿನ ಇತ್ತೀಚಿನ ವಿದ್ಯಮಾನಗಳಿಗೆ ಹಿಂದಿನ ಸಂಕಟಗಳು, ನೋವು, ಯಾತನೆ, ಅವಮಾನಗಳು ಯಾವೂ ಸರಿಸಾಟಿಯಲ್ಲ. ಪೂರ್ವ ಬಂಗಾಳದಲ್ಲಿ ಹಿಂದೂಗಳು ಮಾನವೀಯತೆಯ ದೃಷ್ಟಿಯಿಂದಷ್ಟೇ ಅಲ್ಲ, ತಮ್ಮ ತಮ್ಮ ಪ್ರಾಂತೀಯ ಹಿತಾಸಕ್ತಿಗಳನ್ನು ಬದಿಗಿಟ್ಟು, ತಲತಲಾಂತರಗಳವರೆಗೆ ಸಂತೋಷದಿಂದ ನೋವು, ಯಾತನೆಗಳನ್ನು ಅನುಭವಿಸಿ, ಸುಖ ಸಂಪತ್ತನ್ನು ತ್ಯಾಗ ಮಾಡಿ ಭಾರತದ ರಾಜಕೀಯ ಸ್ವಾತಂತ್ರ್ಯಕ್ಕೆ ಹಾಗೂ ಬೌದ್ಧಿಕ ಬೆಳವಣಿಗೆಗೆ ತಳಹದಿಹಾಕಿಕೊಟ್ಟಿದ್ದಕ್ಕಾಗಿ ಭಾರತದಿಂದ ರಕ್ಷಣೆ ಪಡೆಯಲು ಅರ್ಹರಾಗಿದ್ದರೆ ಎಂಬುದನ್ನು ನಾವು ಮರೆಯಬಾರದು. ಹುತಾತ್ಮರಾದ ನಾಯಕರ ಹಾಗೂ ಇಂದಿನ ಯುವ ಪೀಳಿಗೆಯ ಒಕ್ಕೊರಲು ಭಾರತದ ಸ್ವಾತಂತ್ರಕ್ಕಾಗಿ ಗಲ್ಲುಗಂಬದವರೆಗೆ ನಗುನಗುತ್ತಲೇ ಹೋಗಿತ್ತು. ಇಂದು ಅದು ಸ್ವತಂತ್ರ್ಯ ಭಾರತದಿಂದ ನ್ಯಾಯ ಹಾಗೂ ನಿಷ್ಪಕ್ಷಪಾತತೆಯನ್ನು ಕೇಳುತ್ತಿದೆ.

ಇತ್ತೀಚಿನ ಒಪ್ಪಂದ ನನ್ನ ಪ್ರಕಾರ ಮೂಲ ಸಮಸ್ಯೆಗೆ ಯಾವ ಪರಿಹಾರವನ್ನೂ ಒದಗಿಸುವುದಿಲ್ಲ. ತುಂಬಾ ತುಂಬಾನೇ ಕೆಡಕು ಆಗಿಹೋಗಿದೆ. ತೇಪೆ ಕೆಲಸದಿಂದ ಶಾಂತಿ ನೆಲೆಗೊಳ್ಳುವುದಿಲ್ಲ. ಸಣ್ಣ ಇಸ್ಲಾಮಿಕ್ ರಾಷ್ಟ್ರದ ಸ್ಥಾಪನೆಯೇ ಪಾಕಿಸ್ತಾನದ ಧ್ಯೇಯ. ಹಿಂದೂಗಳನ್ನು ಮತ್ತು ಸಿಖ್ಖರನ್ನು ಗಡೀಪಾರು ಮಾಡುವುದು ಹಾಗೂ ಅವರ ಆಸ್ತಿಪಾಸ್ತಿಗಳನ್ನು ಕಿತ್ತುಕೊಳ್ಳುವುದೇ ಅದರ ನಿಶ್ಚಿತ ನೀತಿ. ಆ ನೀತಿಯ ಪರಿಣಾಮವಾಗಿ ಪಾಕಿಸ್ತಾನದಲ್ಲಿರುವ ಅಲ್ಪಸಂಖ್ಯಾತರ ಬದುಕು "ಅಸಹ್ಯಕರ, ಕ್ರೂರ, ನಿತ್ರಾಣ" ಆಗಿದೆ. ಇತಿಹಾಸದ ಘಟನೆಗಳನ್ನು ನಾವು ಸಂಪೂರ್ಣವಾಗಿ ಮರೆಯಬಾರದು; ಮರೆತರೆ ಅಪಾಯ ಖಂಡಿತ. ನಾನು ಗತಕಾಲವನ್ನು ಹೇಳುತ್ತಿಲ್ಲ. ಪಾಕಿಸ್ತಾನವು ರಚನೆಯಾದಾಗಿನಿಂದ ಅಲ್ಲಿ ಜರುಗುತ್ತಿರುವ ವಿದ್ಯಮಾನಗಳನ್ನು ಯಾರಾದರೂ ವಿಶ್ಲೇಷಿಸಿದರೆ ಆ ದೇಶದೊಳಗೆ ಇರುವಂಥ ಹಿಂದೂಗಳಿಗೆ ಯಾವ ಗೌರವದ ಸ್ಥಾನವೂ ಇಲ್ಲವೆಂಬುದು ಸುಸ್ಪಷ್ಟವಾಗುತ್ತದೆ. ಅದು ಕೋಮು ಸಮಸ್ಯೆಯಲ್ಲ. ಅದು ಖಂಡಿತವಾಗಿಯೂ ರಾಜಕೀಯ ಸಮಸ್ಯೆ. ದುರದೃಷ್ಟವಶಾತ್, ಒಪ್ಪಂದವು, ಇಸ್ಲಾಮಿಕ್ ರಾಷ್ಟ್ರದ ಪರಿಣಾಮಗಳನ್ನು ಕಡೆಗಣಿಸಲು ಪ್ರಯತ್ನಿಸಿದೆ. ಪಾಕಿಸ್ತಾನದ ರಾಜ್ಯಾಂಗ ಸಭೆಯು ಅಂಗೀಕರಿಸಿದ ಉದ್ದೇಶಗಳ ನಿರ್ಣಯದಲ್ಲಿ ಒಂದು ಕಡೆ ಅಲ್ಪಸಂಖ್ಯಾತರ ಹಕ್ಕುಗಳ ಬಗ್ಗೆ ಹೇಳುತ್ತಾ, ಇನ್ನೊಂದು ಕಡೆ "ಇಸ್ಲಾಂ ಘೋಷಿಸಿದಂತೆ ಜನತಂತ್ರ, ಸ್ವಾತಂತ್ರ್ಯ, ಸಮಾನತೆ, ಸಹಿಷ್ಣುತೆ ಮತ್ತು ವಿಶೇಷ ನ್ಯಾಯದ ತತ್ವಗಳನ್ನು ಸಂಪೂರ್ಣವಾಗಿ ಪಾಲಿಸಲಾಗುತ್ತದೆ" ಎಂದು ಒತ್ತುಕೊಟ್ಟು ಹೇಳಿದೆ. ನಿರ್ಣಯವನ್ನು ಮಂಡಿಸುತ್ತಾ ಪಾಕಿಸ್ತಾನದ ಪ್ರಧಾನ ಮಂತ್ರಿಯವರು:

> "ಈ ರಾಷ್ಟ್ರದಲ್ಲಿ ಮುಸ್ಲಿಮರು ತಮಗೆ ಇಷ್ಟಬಂದಂತೆ ತಮ್ಮ ಪಂಥವನ್ನು ಆಚರಿಸಬಹುದು ಮತ್ತು ತಮ್ಮ ಧರ್ಮಕ್ಕೆ ನಿಷ್ಠೆಯಿಂದಿರಬಹುದು ಅಂತಲ್ಲ. ರಾಷ್ಟ್ರವು ತಟಸ್ಥ ವೀಕ್ಷಕನಂತಿರುವುದಿಲ್ಲ. ಏಕೆಂದರೆ, ರಾಷ್ಟ್ರವು ಆ ಧೋರಣೆ ತಾಳುವುದು, ಪಾಕಿಸ್ತಾನದ ಬೇಡಿಕೆಗೆ ಪ್ರೇರಣೆ ನೀಡಿದ ಆದರ್ಶಗಳಿಗೆ ತೀರಾ ವಿರುದ್ಧವಾಗುತ್ತದೆ ಎಂಬುದನ್ನು ಸಹಾ ತಾವೆಲ್ಲ ಗಮನಕ್ಕೆ ತೆಗೆದುಕೊಳ್ಳಬೇಕು. ಆ ಆದರ್ಶಗಳೇ ನಾವು ಕಟ್ಟಬಯಸಿರುವ ರಾಷ್ಟ್ರದ ಅಡಿಗಲ್ಲುಗಳಾಗಿರಬೇಕು. ನೈಜ ಇಸ್ಲಾಮಿಕ್ ಸಮಾಜವನ್ನು ಬೆಳೆಸುವುದಕ್ಕೆ ಸಹಾಯಕಾರಿಯಾಗುವಂತಹ ವಾತಾವರಣವನ್ನು ರಾಷ್ಟ್ರವು ನಿರ್ಮಿಸುತ್ತದೆ. ಅಂದರೆ, ಈ ಕಾರ್ಯದಲ್ಲಿ ರಾಷ್ಟ್ರವು ವಾಸ್ತವಿಕ ಪಾತ್ರ ವಹಿಸಬೇಕಾಗುತ್ತದೆ. ಖೈದೆ-ಎ-ಅಜಮ್ ಮತ್ತು ಮುಸ್ಲಿಂ ಲೀಗ್‌ನ ಇತರ ನಾಯಕರು, ಪಾಕಿಸ್ತಾನಕ್ಕಾಗಿ ಮುಸಲ್ಮಾನರ ಬೇಡಿಕೆಗೆ, ಮುಸ್ಲಿಮರಿಗೆ ತಮ್ಮದೇ ಆದ ಜೀವನ ವಿಧಾನ ಇದೆ ಮತ್ತು ನೀತಿ ಸಂಹಿತೆ ಇದೆ ಎನ್ನುವುದು ಆಧಾರವಾಗಿತ್ತೆಂದು ಯಾವಾಗಲೂ ಸ್ಪಷ್ಟವಾಗಿ ಸಾರಿ ಹೇಳಿದ್ದಾರೆ. ವಾಸ್ತಾವವಾಗಿ, ಇಸ್ಲಾಂ, ಸಮಾಜಿಕ ನಡವಳಿಕೆಗೆ ನಿರ್ದಿಷ್ಟ ಕಟ್ಟುಕಟ್ಟಳೆಗಳನ್ನು ಗೊತ್ತುಪಡಿಸಿದೆ ಮತ್ತು ದಿನೇ ದಿನೇ ಎದುರಾಗುವ ಸಮಸ್ಯೆಗಳ ಬಗ್ಗೆ ಯಾವ ಭಾವನೆ ತಾಳಬೇಕೆಂಬ ಬಗ್ಗೆ ಸಮಾಜಕ್ಕೆ ಮಾರ್ಗದರ್ಶನ ನೀಡುತ್ತದೆ. ಇಸ್ಲಾಂ, ಕೇವಲ ವೈಯಕ್ತಿಕ ನಂಬಿಕೆಗಳ ಮತ್ತು ನೀತಿಯ ಸಂಗ್ರಹ ಅಲ್ಲ."

ಅಂಥದೊಂದು ಸಮಾಜದಲ್ಲಿ, ತುಂಬಾ ಗಂಭೀರವಾಗಿಯೇ ಕೇಳುತ್ತೇನೆ, ಯಾರೇ ಹಿಂದೂ, ತನ್ನ ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಹಾಗೂ ರಾಜಕೀಯ ಹಕ್ಕುಗಳ ವಿಷಯದಲ್ಲಿ ಸುರಕ್ಷಿತವಾಗಿ ಬಾಳುವೆ ಮಾಡುತ್ತೇನೆಂದು ನಿರೀಕ್ಷಿಸುವುದು ಸಾಧ್ಯವೇ? ವಾಸ್ತವವಾಗಿ, ನಮ್ಮ ಪ್ರಧಾನ ಮಂತ್ರಿಗಳು ಕೆಲವು ವಾರಗಳ ಹಿಂದೆಷ್ಟೆ ಈ ಸದನದಲ್ಲಿ ಭಾರತ ಮತ್ತು ಪಾಕಿಸ್ತಾನದ ನಡುವೆ ಇರುವ ಮೂಲಭೂತ ವ್ಯತ್ಯಾಸಗಳನ್ನು ವಿಶ್ಲೇಷಿಸಿದ್ದಾರೆ. ಅವರ ಮಾತುಗಳನ್ನೇ ಈಗ ಹೇಳುತ್ತೇನೆ:

> "ನಮ್ಮಂತೆಯೇ, ಪಾಕಿಸ್ತಾನದ ಜನರೂ ಒಂದು ಮೂಲದವರು. ಅವೇ ಗುಣಗಳು ಹಾಗೂ ದೌರ್ಬಲ್ಯಗಳಿವೆ. ಆದರೆ, ವಿಷಯ ಪರಿಸ್ಥಿತಿಯೆಂದರೆ ಪಾಕಿಸ್ತಾನ ಸರ್ಕಾರವು ಅನುಸರಿಸುತ್ತಿರುವ ಧಾರ್ಮಿಕ ಹಾಗೂ ಮತೀಯ ರಾಷ್ಟ್ರದ ನೀತಿಯು ಅನಿವಾರ್ಯವಾಗಿ ಪೂರ್ಣ ಪೌರತ್ವ ಇರುವುದಿಲ್ಲವೆಂಬ ಮತ್ತು ಯಾರು ಬಹುಸಂಖ್ಯಾತ ಸಮುದಾಯದವರಲ್ಲವೋ ಅವರಲ್ಲಿ ನಿರಂತರ ಅಭದ್ರತೆಯ ಪ್ರಜ್ಞೆಗೆ ಆಸ್ಪದ ಕೊಡುತ್ತದೆ."

ಪಾಕಿಸ್ತಾನವು ಬೋಧಿಸುತ್ತಿರುವ ಆದರ್ಶವಷ್ಟೇ ಆತಂಕದ ಸಂಗತಿ ಅಲ್ಲ. ಅದರ ಕಾರ್ಯನಿರ್ವಹಣೆ ಸಹ ಆ ಆದರ್ಶಗಳಿಗೆ ಅನುಸಾರವಾಗಿಯೇ ಆಗುತ್ತಿದೆ. ಅಲ್ಪಸಂಖ್ಯಾತರಿಗೆ,

ಇಸ್ಲಾಮಿಕ್ ರಾಷ್ಟ್ರವೊಂದರ ನಿಜವಾದ ಬಣ್ಣ ಮತ್ತು ಅದು ಕೆಲಸ ಮಾಡುವ ರೀತಿಯ ಬಗ್ಗೆ, ಲೆಕ್ಕವಿಲ್ಲದಷ್ಟು ಸಲ ಕಹಿ ಅನುಭವಿ ಆಗಿದೆ. ಈ ಮೂಲಭೂತ ಸಮಸ್ಯೆಯನ್ನು ನಿಭಾಯಿಸಲು ಒಪ್ಪಂದವು ಸಂಪೂರ್ಣವಾಗಿ ವಿಫಲಗೊಂಡಿದೆ.

ಸಾರ್ವಜನಿಕರು, ಆಗುಹೋಗುಗಳನ್ನು ಕೆಲವೊಮ್ಮೆ ಬೇಗ ಮರೆತುಬಿಡುತ್ತಾರೆ. ಇತ್ತೀಚಿಗೆ ಆದ ಒಪ್ಪಂದವು, ಅಲ್ಪಸಂಖ್ಯಾತರ ಸಮಸ್ಯೆಯನ್ನು ಬಗೆಹರಿಸುವಲ್ಲಿ ಪ್ರಪ್ರಥಮ ಅಪೂರ್ವ ಪ್ರಯತ್ನವೆಂದು ಅನೇಕ ಕಡೆ ಭಾವನೆ ಇದೆ. ಪಂಜಾಬಿನಲ್ಲಾದ ದುರಂತವನ್ನು ಸ್ವಲ್ಪ ಕಾಲ ಬದಿಗಿಟ್ಟು ಹೇಳುತ್ತಿದ್ದೇನೆ, ಎಲ್ಲಾ ಆಶ್ವಾಸನೆಗಳನ್ನು ಹಾಗೂ ವಚನ ಕೊಟ್ಟಿದ್ದರೂ, ಆಡಳಿತ ವ್ಯವಸ್ಥೆ ಸಂಪೂರ್ಣವಾಗಿ ಕುಸಿದುಹೋಗಿತ್ತು, ಅತ್ಯಂತ ಕ್ರೂರ ರೀತಿಯಲ್ಲಿ ಸಮಸ್ಯೆಯನ್ನು ಬಗೆಹರಿಸಲಾಯಿತು. ಆದಾದ ನಂತರವೂ, ವಾಯುವ್ಯ ಗಡಿ ಪ್ರಾಂತ್ಯದಿಂದ, ಬಲೂಚಿಸ್ತಾನದಿಂದ, ಆಮೇಲೆ ಸಿಂಧ್ ಪ್ರಾಂತ್ಯದಿಂದಲೂ ಸಹ ಹಿಂದೂಗಳನ್ನು ಕ್ರಮೇಣ ಗಡಿಪಾರು ಮಾಡುತ್ತಿದ್ದುದನ್ನು ನಾವು ನೋಡಿದ್ದೇವೆ. ಪೂರ್ವ ಬಂಗಾಳದಿಂದ 130 ಲಕ್ಷ ಹಿಂದೂಗಳನ್ನು ಹೊರಹಾಕಿದ್ದಾರೆ. ಅಂಥ ಭಾರಿ ಘಟನೆಗಳು ಹಿಂದೆ ಜರುಗಿರಲಿಲ್ಲ. ಎಂಥಾ ಸನ್ನಿವೇಶಗಳು ಉಂಟಾದವೆಂದರೆ, ಪಾಕಿಸ್ತಾನ ಸರ್ಕಾರದಿಂದ ಅವರಿಗೆ ರಕ್ಷಣೆ ಸಿಗಲಿಲ್ಲ. ಅವರುಗಳು ಆಶ್ರಯಕ್ಕಾಗಿ ಪಶ್ಚಿಮ ಬಂಗಾಳಕ್ಕೆ ಬರಬೇಕಾಯಿತು. ಅಲ್ಲಿನ ಪರಿಸ್ಥಿತಿ ತಿಳಿಯಾಗಿತ್ತಾದ್ದರಿಂದ, ಆ ಅವಧಿಯಲ್ಲಿ ಭಾರತ ಸರ್ಕಾರವು ಪ್ರಚೋದಿಸುತ್ತಿತ್ತು ಎನ್ನುವುದಕ್ಕೆ ಆಸ್ಪದವೇ ಇರಲಿಲ್ಲ. ಭಾರತದಿಂದ ಪಾಕಿಸ್ತಾನಕ್ಕೆ ಮುಸ್ಲಿಮರು ಹೋಗುವಂತೆ ಬಲಾತ್ಕಾರ ಇರಲಿಲ್ಲ. ವಿಶೇಷವಾಗಿ, ಬಂಗಾಳದ ಸಮಸ್ಯೆಗಳನ್ನು ಬಗೆಹರಿಸಲು 1948ರ ಏಪ್ರಿಲ್‌ನಲ್ಲಿ ಕಲ್ಕತ್ತಾದಲ್ಲಿ ಮೊದಲನೇ ಇಂಟರ್ ಡೊಮಿನಿಯನ್ ಒಪ್ಪಂದ ಆಯಿತು. ಇತ್ತೀಚಿಗೆ ಆಗಿರುವ ಒಪ್ಪಂದದೊಂದಿಗೆ ಆ 1948ರ ಒಪ್ಪಂದದ ವಿಧಿಗಳನ್ನು ಯಾರಾದರೂ ವಿಶ್ಲೇಷಿಸಿದರೆ ಮತ್ತು ಹೋಲಿಸಿ ನೋಡಿದರೆ ಎಲ್ಲ ಮುಖ್ಯ ವಿಷಯಗಳಲ್ಲಿ ಅವರೆಡೂ ಪರಸ್ಪರ ಒಂದೇ ರೀತಿಯವವೆಂಬುದು ಗೊತ್ತಾಗುತ್ತದೆ. ಈ ಒಪ್ಪಂದ ಯಾವುದೇ ಪರಿಣಾಮಕಾರಿ ಫಲ ನೀಡಲಿಲ್ಲ. ಭಾರತ ಈ ಒಪ್ಪಂದದ ವಿಧಿವಿಧಾನಗಳನ್ನು ಪಾಲಿಸಿತು. ಆದರೆ, ಪೂರ್ವ ಬಂಗಾಳದಿಂದ ಹಿಂಡು ಹಿಂಡೇ ಬರುವುದು ಅಬಾಧಿತವಾಗಿ ಮುಂದುವರೆಯಿತು. ಪಾಕಿಸ್ತಾನ ಬಯಸಿದ್ದಂತೆ, ಅದು ಒನ್-ವೇ-ಟ್ರಾಫಿಕ್ ಪತ್ರ ವ್ಯವಹಾರಗಳಾಗಿವೆ. ಅಧಿಕಾರಿಗಳ ಹಾಗೂ ಮುಖ್ಯ ಮಂತ್ರಿಗಳ ಸಭೆಗಳಾಗಿವೆ. ಡೊಮಿನಿಯನ್ ಮಂತ್ರಿಗಳ ನಡುವೆ ಸಮಾಲೋಚನೆಗಳಾಗಿವೆ. ಆದರೆ, ವಾಸ್ತವಿಕ ಫಲಿತಾಂಶಗಳ ಆಧಾರದ ಮೇಲೆ ನೋಡಿದರೆ ಪಾಕಿಸ್ತಾನದ ಧೋರಣೆ ಬದಲಾಗದೆ ಮೊದಲಿನಂತೆಯೇ ಇದೆ. 1948ರ ಡಿಸೆಂಬರ್‌ನಲ್ಲಿ ದೆಹಲಿಯಲ್ಲಿ ಎರಡನೇ ಇಂಟರ್ ಡೊಮಿನಿಯನ್ ಸಮ್ಮೇಳನ ಆಯಿತು. ಒಪ್ಪಂದಕ್ಕೆ ಸಹಿ ಹಾಕಿ, ಮೊಹರು ಮಾಡಿ, ವಿನಿಮಯ ಆಯಿತು. ಆ ಒಪ್ಪಂದದಲ್ಲೂ ಅದೇ ಸಮಸ್ಯೆಗಳ ಬಗ್ಗೆ ಮುಖ್ಯವಾಗಿ ಬಂಗಾಳದ

ಅಲ್ಪಸಂಖ್ಯಾತರ ಹಕ್ಕುಗಳ ಬಗ್ಗೆ ವಿಚಾರ ಮಾಡಲಾಗಿತ್ತು. ಇದೂ ಸಹ, ಮೊದಲ ಒಪ್ಪಂದದ ಪುನರಾವರ್ತನೆ. 1949ರಲ್ಲಿ ಪೂರ್ವ ಬಂಗಾಳದಲ್ಲಿ ಪರಿಸ್ಥಿತಿಗಳು ಇನ್ನಷ್ಟು ಬಿಗಡಾಯಿಸಿದ್ದನ್ನು ಮತ್ತು ಇನ್ನೂ ಹೆಚ್ಚಿನ ಸಂಖ್ಯೆಯ ಜನರನ್ನು ಮನೆಬಾಗಿಲಿನಿಂದ ಹೊರದೂಡಿ ಅತ್ಯಂತ ಹೀನಾಯ ಪರಿಸ್ಥಿತಿಯಲ್ಲಿ ಭಾರತಕ್ಕೆ ನೂಕಿದ ಪರಿಣಾಮವಾಗಿ ಜನರ ಹಿಂಡು ಹಿಂಡೇ ಬರುತ್ತಿದ್ದುದನ್ನು ನಾವು ನೋಡಿದ್ದೇವೆ. ಎರಡು ಇಂಟರ್-ಡೋಮಿನಿಯನ್ ಒಪ್ಪಂದಗಳಾಗಿದ್ದರೂ, ಪೂರ್ವ ಬಂಗಾಳದಿಂದ ಭಾರತಕ್ಕೆ 16 ರಿಂದ 20 ಲಕ್ಷ ಜನರನ್ನು ಹೊರದೂಡಿಸಿರುವ ಸಂಗತಿ ಇದ್ದೇ ಇದೆ. ಹೊರದೂಡಲ್ಪಟ್ಟ ಸುಮಾರು ಹತ್ತು ಲಕ್ಷ ಹಿಂದೂಗಳು ಸಿಂಧ್ ಪ್ರಾಂತ್ಯದಿಂದ ಬಂದಿದ್ದಾರೆ. ಮುಖ್ಯವಾಗಿ ಹಣಕಾಸಿನ ಸ್ಥಿತಿಗತಿಗಳ ಕಾರಣದಿಂದ, ಆ ಅವಧಿಯಲ್ಲಿ ಪಾಕಿಸ್ತಾನದಿಂದ ದೊಡ್ಡ ಸಂಖ್ಯೆಯಲ್ಲಿ ಮುಸ್ಲಿಮರು ಸಹ ಬಂದಿದ್ದಾರೆ. ಪಶ್ಚಿಮ ಬಂಗಾಳದ ಅರ್ಥವ್ಯವಸ್ಥೆಗೆ ಹಠಾತ್ ಆಘಾತ ಉಂಟಾಗಿದೆ, ನಾವು ಈ ಕರಾಳ ದುರಂತವನ್ನು ಅಸಹಾಯಕ ಪ್ರೇಕ್ಷಕರಂತೆ ನೋಡುತ್ತಿದ್ದೇವೆ.

ಇಂದು, ಅಲ್ಪಸಂಖ್ಯಾತರನ್ನು ರಕ್ಷಿಸುವಲ್ಲಿ ಭಾರತ ಮತ್ತು ಪಾಕಿಸ್ತಾನಗಳೆರಡೂ ವಿಫಲವಾಗಿವೆಯೆಂಬ ಸಾಮಾನ್ಯ ಭಾವನೆ ಇದೆ. ಆದರೆ ನಿಜ ಸಂಗತಿ ತಿರುಗುಮುರುಗಾಗಿದೆ. ವಿದೇಶ ಪತ್ರಿಕೆಗಳಲ್ಲಿ ಪ್ರತಿಕೂಲ ಪ್ರಚಾರ ಆಗುತ್ತಿದೆ. ಇದು ಭಾರತದ ತೇಜೋವಧೆ. ಸತ್ಯ ತಿಳಿದುಕೊಳ್ಳಬಯಸುವ ಎಲ್ಲರಿಗೂ ಸತ್ಯ ಏನು ಎಂಬುದನ್ನು ತಿಳಿಸಬೇಕು. ಸಿಂಧ್ ಮತ್ತು ಪೂರ್ವ ಬಂಗಾಳದಲ್ಲಿ ಅಲ್ಪ ಸಂಖ್ಯಾತರು ನೆಮ್ಮದಿಯಿಂದ ಹಾಗೂ ಗೌರವದಿಂದ ಬಾಳುವಂತಹ ಪರಿಸ್ಥಿತಿಯನ್ನು ನೆಲೆಗೊಳಿಸಲು ಪಾಕಿಸ್ತಾನವು ವಿಫಲಗೊಂಡಿದ್ದರಿಂದ ಅದು ನಿರಂತರವಾಗಿ ಏನೇ ಉಗ್ರ ಪ್ರಚೋದನೆಗಳನ್ನು ನೀಡುತ್ತಿದ್ದರೂ, ಪಂಜಾಬ್ ಹಾಗೂ ದೆಹಲಿ ಗಲಭೆಗಳನ್ನು ಶಮನಮಾಡಿದ ನಂತರ ಭಾರತ ಸರ್ಕಾರವು ದೇಶಾದ್ಯಂತ ಕೇಂದ್ರದಲ್ಲಿ, ಸಂಸ್ಥಾನಗಳಲ್ಲಿ ಮತ್ತು ರಾಜ್ಯಗಳಲ್ಲಿ ಸಮಾನ್ಯವಾಗಿ, ಶಾಂತಿ ಹಾಗೂ ಸುರಕ್ಷತೆಯನ್ನು ನೆಲೆಗೊಳಿಸಿದೆ. ಪೂರ್ವ ಬಂಗಾಳದಿಂದ ಅಥವಾ ಸಿಂಧ್‌ನಿಂದ ಬಂದವರು ಯಾರೆಂದರೆ ವಿಭಜನೆಯ ಕಾಲದಲ್ಲಿ ತಮಗಿದ್ದ ಕಾಲ್ಪನಿಕ ಭಯದಿಂದ ಭಾರತಕ್ಕೆ ವಲಸೆ ಹೋಗಲು ನಿರ್ಧರಿಸಿದ ಜನರಲ್ಲ. ಇವರೆಲ್ಲಾ ಪಾಕಿಸ್ತಾನದಲ್ಲಿ ತಮಗೆ ಮರ್ಯಾದೆಯ ಹಾಗೂ ನೆಮ್ಮದಿಯ ಜೀವನಕ್ಕೆ ಅವಕಾಶ ಕೊಟ್ಟಿದ್ದಿದ್ದರೆ, ಅಲ್ಲೇ ಉಳಿಯಲು ಒಲವು ತೋರಿದ್ದ ಜನರು.

1949ರ ಕೊನೆಯ ಹೊತ್ತಿಗೆ, ಪೂರ್ವ ಬಂಗಾಳದಲ್ಲಿ ಹಿಂಸಾ ಸ್ವರೂಪದ ಹೊಸ ವಿದ್ಯಮಾನಗಳು ಪ್ರಾರಂಭವಾದವು. ಆ ಪ್ರದೇಶದಲ್ಲಿ ಜರುಗುತ್ತಿದ್ದ ಯಾವುವೂ ಹೊರಗಡೆಗೆ ಗೊತ್ತಾಗುತ್ತಿರಲಿಲ್ಲವಾದ್ದರಿಂದ, ಭಾರತಕ್ಕೆ ಸುದ್ದಿಗಳು ಮೊದಲೇ ಗೊತ್ತಾಗಲಿಲ್ಲ. 1950ರಲ್ಲಿ ಪಶ್ಚಿಮ ಬಂಗಾಳಕ್ಕೆ ಸುಮಾರು 15,000 ನಿರಾಶ್ರಿತರು ಬಂದಾಗಲೇ ಕ್ರೂರ ದೌರ್ಜನ್ಯಗಳು ಮತ್ತು ಕಿರುಕುಳಗಳು ಬೆಳಕಿಗೆ ಬಂದವು. ದೃಢ ಮನಸ್ಸಿನ, ಪೌರುಷವುಳ್ಳ, ಒಗ್ಗಟ್ಟಿನಿಂದಿದ್ದ

ಮಧ್ಯಮ ವರ್ಗದ ಜನರ ಮೇಲೆ ಹಾಗೂ ಗ್ರಾಮಾಂತರ ಜನರ ಆಯ್ದ ವರ್ಗಗಳ ಮೇಲೆ ಪಾಕಿಸ್ತಾನದ ವಕ್ರದೃಷ್ಟಿ ಬಿದ್ದಿತ್ತು. ಗಾಬರಿ ಹುಟ್ಟಿಸುವ ಈ ವರದಿಗಳಿಂದ, ಪಶ್ಚಿಮ ಬಂಗಾಳದ ಕೆಲವು ಭಾಗಗಳಲ್ಲಿ ಕೆಲವೊಂದು ಚಿಕ್ಕಪುಟ್ಟ ಪ್ರತಿಕ್ರಿಯೆಗಳು ಉಂಟಾದವು. ಅವುಗಳನ್ನು ಶೀಘ್ರವಾಗಿ ಮತ್ತು ಪರಿಣಾಮಕಾರಿಯಾಗಿ ತಡೆಗಟ್ಟಿದರೂ, ಪಶ್ಚಿಮ ಬಂಗಾಳದಲ್ಲಿನ ಆ ಘಟನೆಗಳ ಬಗ್ಗೆ ಪೂರ್ವ ಬಂಗಾಳದ ಅನೇಕ ಭಾಗಗಳಲ್ಲಿ ಅತ್ಯಂತ ಉತ್ಪ್ರೇಕ್ಷೆಯ ವರದಿಗಳನ್ನು ಹಂಚಲಾಗಿದೆ. ಅಧಿಕಾರಿಗಳ ಕುಮ್ಮಕ್ಕಿನಿಂದ ಹಾಗೂ ದುರುದ್ದೇಶದಿಂದ ರಾಜಾರೋಷವಾಗಿ ವರದಿ ಮಾಡಲಾಗಿದೆ. ಎರಡು ಅಥವಾ ಮೂರು ವಾರಗಳಲ್ಲಿ ಪೂರ್ವ ಬಂಗಾಳದಲ್ಲಿ ಸಿಕ್ಕಾಪಟ್ಟೆ ಜೀವಹಾನಿ ಮತ್ತು ಆಸ್ತಿಪಾಸ್ತಿ ಹಾನಿ ಉಂಟುಮಾಡುತ್ತಿರುವ, ಭಾರಿ ಸಂಖ್ಯೆಯಲ್ಲಿ ಅಸಹಾಯಕ ಜನರನ್ನು ಬಲವಂತದಿಂದ ಮತಾಂತರಗೊಳಿಸುತ್ತಿರುವ, ಮಹಿಳೆಯರನ್ನು ಬಲಾತ್ಕಾರದಿಂದ ಅಪಹರಿಸುತ್ತಿರುವ ಮತ್ತು ಬಲವಂತದಿಂದ ಹೆಂಗಸರನ್ನು ಕೆಡಿಸುತ್ತಿರುವ ಅತ್ಯಂತ ಭಯಂಕರ ಸ್ವರೂಪದ, ಯಾವ ನಾಗರೀಕ ಸರ್ಕಾರವೂ ಎಂದು ಸಹಿಸದ ವಿದ್ಯಮಾನಗಳು ಜರುಗಿವೆ. ನಮ್ಮ ಕೈಗೆ ಈಗ ತಲುಪಿರುವ ವರದಿಗಳು, ಅವು, ಅಲ್ಲೊಂದು ಇಲ್ಲೊಂದರಂತೆ, ಆಗೊಂದು ಈಗೊಂದರಂತೆ ಆಗಿರುವಂಥವಲ್ಲವೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಅವೆಲ್ಲವೂ, ಪೂರ್ವ ಬಂಗಾಳದಿಂದ ಅಲ್ಪ ಸಂಖ್ಯಾತರನ್ನು ಗಡೀಪಾರು ಮಾಡುವುದಕ್ಕೆ ಉದ್ದೇಶ ಪೂರ್ವಕವಾಗಿ ಮತ್ತು ಮೊದಲೇ ಯೋಚಿಸಿಕೊಂಡು ಮಾಡಿದ ಕಠೋರ ಕೃತ್ಯಗಳು. ಈ ಸಂಗತಿಯನ್ನು ಕಡೆಗಣಿಸುವುದೂ ಒಂದೇ ಕಟ್ಟು ಸತ್ಯವನ್ನು ಮರೆಮಾಚುವುದು ಒಂದೇ. ಆ ಕಾಲದಲ್ಲಿ ಇಲ್ಲಿ ಹಾಗೂ ವಿದೇಶಗಳಲ್ಲಿ ನಾವು ಮಾಡಿದ ಪ್ರಚಾರ ತೀರಾ ಸತ್ವ ಇಲ್ಲದ ಹಾಗೂ ಪರಿಣಾಮ ಬೀರದ ಪ್ರಚಾರ. ಭಾರತದೊಳಗೆ ಪ್ರತಿಕ್ರಿಯೆ ಭುಗಿಲೇಳುವುದನ್ನು ತಡೆಯುವ ದೃಷ್ಟಿಯಿಂದ ಆ ರೀತಿಯ ಪ್ರಚಾರ ಮಾಡಲಾಗಿದೆ. ಆದರೆ, ಪಾಕಿಸ್ತಾನ ತದ್ವಿರುದ್ಧದ ಮಾರ್ಗ ಹಿಡಿಯಿತು. ಅದರ ಫಲ ಏನೆಂದರೆ, ನಮ್ಮನ್ನು ಜಗಳಗಂಟರೆಂದು ಕರೆಯಲಾಯಿತು, ಸತ್ಯ ತಲೆಕೆಳಗಾಯಿತು. ಈ ಸಂದಿಗ್ಧ ವಾರಗಳಲ್ಲಿ-ಕೋಪೋದ್ರೇಕಗಳಿಂದ ಹಾಗೂ ಪೂರ್ವಾಗ್ರಹಪೀಡಿತರಾಗಿ ಜನರು ಡೋಲಾಯಮಾನ ಸ್ಥಿತಿಯಲ್ಲಿದ್ದರೂ - ಭಾರತದ ಜನಸಂಖ್ಯೆಯ ಬಹುತೇಕ ಭಾಗವು, ವಿಷಯಗಳನ್ನು ಸರ್ಕಾರದ ನಿರ್ಧಾರಕ್ಕೆ ಬಿಡಲು ಸಿದ್ಧವಿತ್ತು ಮತ್ತು ಪಾಕಿಸ್ತಾನದಲ್ಲಿ ನಡೆಸುತ್ತಿದ್ದ ಕ್ರೌರ್ಯಗಳನ್ನು ತಡೆಯಲು ಪಟ್ಟುಬಿಡದ ಕ್ರಮಗಳನ್ನು ತೆಗೆದುಕೊಳ್ಳುತ್ತದೆಂಬ ನಿರೀಕ್ಷೆ ಇಟ್ಟುಕೊಂಡಿತ್ತು. ಅಂಥ ಸಂದಿಗ್ಧ ಸಮಯದಲ್ಲಿ ನಾವು ಸಂದರ್ಭಕ್ಕೆ ತಕ್ಕ ಸಾಮರ್ಥ್ಯವನ್ನು ತೋರಲು ವಿಫಲರಾದೆವು. ಗಂಟೆಗಳ ಮಾತಿರಲಿ, ದಿನಗಳೂ ಕಳೆದರೂ, ವಾರಗಳೇ ಉರುಳಿಹೋದರು ಯಾವುದು ಸರಿಯಾದ ದಾರಿ ಎಂಬುದನ್ನು ನಿರ್ಧರಿಸುವುದು ನಮ್ಮಿಂದ ಆಗಲಿಲ್ಲ. ಇಡೀ ದೇಶ ಸಂಕಟಕ್ಕೀಡಾಗಿತ್ತು. ಪ್ರಾಮಾಣಿಕತೆಯನ್ನು ಹಾಗೂ ದೃಢ ನಿರ್ಧಾರವನ್ನು ನಿರೀಕ್ಷಿಸಿತ್ತು. ಆದರೆ, ನಾವು ಅತ್ತಿಂದಿತ್ತ ವಾಲುವ ಮತ್ತು ಅನಿಶ್ಚಿತ ನೀತಿಯನ್ನು ಅನುಸರಿಸಿದೆವು. ಪರಿಣಾಮ ಏನಾಯಿತೆಂದರೆ,

ಪಶ್ಚಿಮ ಬಂಗಾಳದ ಕೆಲವು ಪ್ರದೇಶಗಳಲ್ಲಿ ಹಾಗೂ ಭಾರತದ ಇತರ ಭಾಗಗಳಲ್ಲಿ ಜನರು ಪ್ರತಿಭಟಿಸಿದರು, ಕೆರಳಿದರು; ಕಾನೂನನ್ನು ಕೈಗೆ ತೆಗೆದುಕೊಂಡರು. ಪಾಕಿಸ್ತಾನದಲ್ಲಾದ ಕ್ರೌರ್ಯಗಳಿಗೆ ಭಾರತದ ಮುಗ್ಧ ಜನರ ಮೇಲೆ ಗುಟ್ಟಾಗಿ ಸೇಡು ತೀರಿಸಿಕೊಂಡರೆ ಅದು ಯಾವುದೇ ಪರಿಹಾರ ಅಲ್ಲ. ಅದು ಸಮಸ್ಯೆಗಿಂತಲೂ ಕೆಟ್ಟದಾದ ವಿಷಮ ಪರಿಸ್ಥಿತಿಯನ್ನು ಸೃಷ್ಟಿಸುತ್ತದೆ. ಜನಾಂಗ ಇನ್ನೂ ಕ್ರೂರವಾಗುತ್ತದೆ. ಲಂಗುಲಗಾಮಿಲ್ಲದ ಶಕ್ತಿಗಳು ತಲೆ ಎತ್ತುತ್ತವೆ. ಮುಂದೊಂದು ಹಂತದಲ್ಲಿ ಅಂತಹ ಶಕ್ತಿಗಳನ್ನು ಹಿಡಿತಕ್ಕೆ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ನಾವು ಸಭ್ಯ ದೇಶವಾಗಿ ಕೆಲಸ ಮಾಡಬೇಕು. ರಾಷ್ಟ್ರಕ್ಕೆ ನಿಷ್ಠರಾದ ಎಲ್ಲ ನಾಗರೀಕರಿಗೂ ಸಮಾನ ಹಕ್ಕುಗಳಿರಬೇಕು. ಅವರ ಧರ್ಮ ಅಥವಾ ಪಂಥ ಯಾವುದೇ ಇರಲಿ ಸಂರಕ್ಷಣೆ ಇರಬೇಕು. ಇಂಥ ರಾಷ್ಟ್ರೀಯ ಬಿಕ್ಕಟ್ಟಿನ ಸಮಯದಲ್ಲಿ ಈ ದೇಶದ ಸರ್ಕಾರ, ಪರಿಣಾಮಕಾರಿ ಪರಿಹಾರವನ್ನು ಕೈಗೊಳ್ಳಲೇಬೇಕು. ಸರ್ಕಾರವು ಶೀಘ್ರವಾಗಿ, ಜನರ ನ್ಯಾಯಬದ್ಧ ಅಪೇಕ್ಷೆಗೆ ತಕ್ಕಂತೆ, ರಾಷ್ಟ್ರೀಯ ಗೌರವ, ಘನತೆಯ ಸಂಪೂರ್ಣ ಪ್ರಜ್ಞೆಯಿಂದ ಕಾರ್ಯತತ್ಪರರಾದರೆ, ಜನರು ಸರ್ಕಾರದ ಬೆನ್ನಹಿಂದಿರುತ್ತಾರೆ ಎಂಬುದರಲ್ಲಿ ಲವಲೇಶವು ಅನುಮಾನವಿಲ್ಲ. ಏನೇ ಆಗಲಿ, ಸರ್ಕಾರವು ಭಾರತದಾದ್ಯಂತ ಶಾಂತಿ ಮತ್ತು ಸುವ್ಯವಸ್ಥೆ ತರಲು ಪ್ರಮಾಣಿಕವಾಗಿ ಕಾರ್ಯ ತತ್ಪರವಾಗಿದೆ. ಪೂರ್ವ ಬಂಗಾಳಕ್ಕೆ ಸೇರಿದ ಆದರೆ ನೌಕರಿಗಾಗಿ ಅಥವಾ ವೃತ್ತಿಗಾಗಿ ಪಶ್ಚಿಮ ಬಂಗಾಳಕ್ಕೆ ಬಂದಿದ್ದ ಅನೇಕ ಮುಸ್ಲಿಮರಲ್ಲಿ ಸ್ವಲ್ಪ ಕಡಿಮೆ ಸಂಖ್ಯೆಯ ಜನರು ಭಾರತವನ್ನು ಬಿಟ್ಟು ಹೋಗುತ್ತಿದ್ದಾರೆ. ಪಾಕಿಸ್ತಾನಕ್ಕೆ ಪರಿಸ್ಥಿತಿಯ ತೀವ್ರತೆ ಗೊತ್ತಾದಾಗ ಮಾತ್ರವೇ ಆ ಸಂದರ್ಭ, ಹಿಂದಿನದಂತೆ ಒನ್-ವೇ-ಟ್ರಾಫಿಕ್ ಅಲ್ಲವೆಂಬುದು ಅರ್ಥವಾಗುತ್ತದೆ. ಹೋದ ಜನವರಿಯಿಂದ ಕೊನೇ ಪಕ್ಷ 10 ಲಕ್ಷ ಜನರು ಪೂರ್ವ ಬಂಗಾಳದಿಂದ ಪಶ್ಚಿಮ ಬಂಗಾಳಕ್ಕೆ ಬಂದಿದ್ದಾರೆ. ಹಲವಾರು ಲಕ್ಷ ಜನರು ತ್ರಿಪುರ ಮತ್ತು ಅಸ್ಸಾಂಗೆ ಹೋಗಿದ್ದಾರೆ. ಎಲ್ಲ ವರ್ಗಗಳ ಮತ್ತು ಅವಸ್ಥೆಯ ಸಾವಿರಾರು ಜನರು ಇಂದು ಭಾರತದತ್ತ ಬರುತ್ತಿದ್ದಾರೆಂದು ವರದಿಗಳು ಸೂಚಸುತ್ತವೆ.

ಈ ಅತ್ಯಂತ ಮಹತ್ವದ ಘಳಿಗೆಯ ವಿಷಯವೆಂದರೆ, ಅಲ್ಪಸಂಖ್ಯಾತರು ಪಾಕಿಸ್ತಾನದಲ್ಲಿ ಸುರಕ್ಷಿತವಾಗಿರುತ್ತೇವೆಂಬ ಯಾವುದೇ ಪ್ರಜ್ಞೆಯಿಂದ ಬಾಳಬಲ್ಲರೇ? ಭಾರತದ ಒಳಗೆ ಅಥವಾ ಹೊರ ರಾಷ್ಟ್ರಗಳಲ್ಲಿ ವ್ಯಕ್ತವಾಗುವ ಪ್ರತಿಕ್ರಿಯೆಯೇ ಯಾವುದೇ ಒಪ್ಪಂದದ ಒರೆಗಲ್ಲು ಅಲ್ಲ. ಪಾಕಿಸ್ತಾನದಲ್ಲಿರುವ ಅಥವಾ ಈಗಾಗಲೇ ಬಲವಂತದಿಂದ ಹೊರಬಂದಿರುವ ನತದೃಷ್ಟ ಅಲ್ಪ-ಸಂಖ್ಯಾತರ ಮನಸ್ಸಿನ ಮೇಲಾಗುವ ಪರಿಣಾಮವೇ ನಿಜವಾದ ಒರೆಗಲ್ಲು. ಪಾಕಿಸ್ತಾನದಲ್ಲಿನ ಕೆಲವು ಉಚ್ಚ ಶ್ರೇಣಿಯ ವ್ಯಕ್ತಿಗಳು ಹೇಗೆ ಭಾವಿಸುತ್ತಾರೆ ಅಥವಾ ವರ್ತಿಸಲು ಇಚ್ಛಿಸುತ್ತಾರೆ ಎಂಬುದಲ್ಲ. ಆ ದೇಶದ ಇಡೀ ವ್ಯವಸ್ಥೆ, ಅಧಿಕಾರಿ ವಲಯಗಳ - ಮೇಲ್ದರ್ಜೆ ಹಾಗೂ ಕೆಳದರ್ಜೆ - ಬಹುಸಂಖ್ಯಾತ ಜನರ ಧೋರಣೆ, ಅನ್ಸಾರ್ ನಂಥ ಸಂಘ ಸಂಸ್ಥೆಗಳ ಚಟುವಟಿಕೆಗಳು ಎಲ್ಲವೂ ಸೇರಿ ಕೆಲಸ ಮಾಡುತ್ತಿವೆ, ಹಿಂದೂಗಳು ಬಾಳುವುದು

ಅಸಾಧ್ಯವಾಗಿದೆ. ಕೆಲವು ತಿಂಗಳು ಭಾರಿ ಘಟನೆಗಳು ಸಂಭವಿಸದಿರಬಹುದು. ಈ ಮಧ್ಯೆ ನಾವು ದೊಡ್ಡ ಮನಸ್ಸು ಮಾಡಿ ಅವರಿಗೆ ಅತ್ಯವಶ್ಯಕ ಪದಾರ್ಥಗಳನ್ನು ಸರಬರಾಜು ಮಾಡಲೂಬಹುದು. ಪಾಕಿಸ್ತಾನಕ್ಕೆ ಇನ್ನೊಂದು ಆಧಾರ ಸಿಕ್ಕಿದಂತಾಗುತ್ತದೆ. ಅದೇ ಪಾಕಿಸ್ತಾನದ ತಂತ್ರ. ಬಹುಷಃ ಮಳೆಗಾಲದಲ್ಲಿ ಸಂಪರ್ಕ ವಾಸ್ತವವಾಗಿ ನಿಂತುಹೋದಾಗ ಕಷ್ಟ ಕೊಡಬಹುದು.

ಏಳು ಮುಖ್ಯ ಕಾರಣಗಳಿಂದಾಗಿ ನಾನು ಒಪ್ಪಂದದಲ್ಲಿ ಭಾಗಿಯಾಗುವುದಕ್ಕೆ ಆಗುತ್ತಿಲ್ಲ, ಅವು ಯಾವುವೆಂದರೆ:

ಮೊದಲನೆಯದಾಗಿ, ವಿಭಜನೆಯಾದಾಗಿನಿಂದ ಬಂಗಾಳದ ಸಮಸ್ಯೆಯನ್ನು ಬಗೆಹರಿಸುವುದಕ್ಕಾಗಿ ಎರಡು ಒಪ್ಪಂದಗಳಾಗಿದ್ದರೂ ನಮಗೆ ಯಾವುದೇ ಮುಕ್ತವಾದ ಪರಿಹಾರ ಸಿಗದಂತೆ ಪಾಕಿಸ್ತಾನ ಅವುಗಳನ್ನು ಉಲ್ಲಂಘಿಸಿದೆ. ಬಂಧಕವಾಗಿರದ ಯಾವುದೇ ಒಪ್ಪಂದ ಯಾವುದೇ ಪರಿಹಾರ ಕೊಡುವುದಿಲ್ಲ.

ಎರಡನೆಯದಾಗಿ, ಸಮಸ್ಯೆಯ ಕಗ್ಗಂಟು, ಪಾಕಿಸ್ತಾನದ ಇಸ್ಲಾಮಿಕ ರಾಷ್ಟ್ರದ ಪರಿಕಲ್ಪನೆ ಹಾಗೂ ಆ ಪರಿಕಲ್ಪನೆಯನ್ನೇ ಆಧಾರವಾಗಿಟ್ಟುಕೊಂಡಿರುವ ಸರ್ವಾಧಿಕಾರೀ ಆಡಳಿತ ವ್ಯವಸ್ಥೆ. ಈ ಮೂಲಭೂತ ವಿಷಯವನ್ನು ಒಪ್ಪಂದವು ಮೂಲಗೆ ತಳ್ಳಿದೆ. ಒಪ್ಪಂದ ಆಗುವುದಕ್ಕೆ ಮೊದಲು ನಾವು ಯಾವ ಸ್ಥಿತಿಯಲ್ಲಿದ್ದೆವೋ ಈಗಲೂ ನಾವು ಅದೇ ಸ್ಥಿತಿಯಲ್ಲಿದ್ದೇವೆ.

ಮೂರನೆಯದಾಗಿ, ಭಾರತ ಮತ್ತು ಪಾಕಿಸ್ತಾನ ಎರಡೂ ಸಮಾನ ತಪ್ಪಿತಸ್ಥರೆಂದು ತೋರಿಸಲಾಗಿದೆ, ಆದರೆ, ಪಾಕಿಸ್ತಾನವೇ ನಿಜವಾದ ದಾಳಿಕೋರ. ಎರಡೂ ರಾಷ್ಟ್ರಗಳು ಪ್ರಾದೇಶಿಕ ಸಮಗ್ರತೆ ವಿರುದ್ಧ ಯಾವು ಪ್ರಚಾರವೂ ಆಗಕೂಡದೆಂದು ಮತ್ತು ಎರಡೂ ರಾಷ್ಟ್ರಗಳ ನಡುವೆ ಯುದ್ಧ ಆಗಲು ಯಾವ ಪ್ರಚೋದನೆಯೂ ಆಗಕೂಡದೆಂದು ಒಪ್ಪಂದ ಹೇಳಿದೆ. ಆದರೆ, ಕಾಶ್ಮೀರದ ನಮ್ಮ ಭಾಗ ಪಾಕಿಸ್ತಾನದ ಸೇನೆಯ ವಶದಲ್ಲಿರುವಾಗ ಮತ್ತು ಅಲ್ಲಿ ಸಕ್ರಿಯವಾಗಿ ಯುದ್ಧ ಸನ್ನಾಹದ ಸಿದ್ಧತೆಗಳಾಗುತ್ತಿರುವಾಗ ಇದು ಬಹಮಟ್ಟಿಗೆ ಹಾಸ್ಯಾಸ್ಪದವಾಗಿ ಕಾಣುತ್ತದೆ.

ನಾಲ್ಕನೆಯದಾಗಿ, ಸುರಕ್ಷತೆಯ ಬಗ್ಗೆ ಪಾಕಿಸ್ತಾನವು ಆಶ್ವಾಸನೆ ಕೊಟ್ಟಿದ್ದರೂ, ಪೂರ್ವ ಬಂಗಾಳದಲ್ಲಿ ಹಿಂದೂಗಳು ಬಾಳುವುದಕ್ಕಾಗುವುದಿಲ್ಲವೆಂಬುದನ್ನು ವಿದ್ಯಮಾನಗಳು ರುಜುವಾತುಪಡಿಸಿವೆ. ಅಲ್ಪ-ಸಂಖ್ಯಾತ ಸಮಸ್ಯೆಯನ್ನು ಮೂಲಭೂತ ಸಮಸ್ಯೆಯೆಂದು ನಾವು ಒಪ್ಪಿಕೊಳ್ಳಲೇಬೇಕು. ಪ್ರಸ್ತುತ ಒಪ್ಪಂದವು, ಬದಲಿಗೆ, ಅಲ್ಪ-ಸಂಖ್ಯಾತರು ತಮ್ಮ ಸುರಕ್ಷತೆ ಹಾಗೂ ಗೌರವ ಘನತೆ ಬಗ್ಗೆ ಪಾಕಿಸ್ತಾನ ಸರ್ಕಾರವನ್ನು ಅವಲಂಬಿಸಬೇಕೆಂದು ಕರೆ ಇತ್ತಿದೆ. ಇದು ಗಾಯಕ್ಕೆ ಬರೆ ಎಳೆದಂತಾಗಿದೆ ಮತ್ತು ನಾವು ಈ ಹಿಂದೆ ಕೊಟ್ಟಿದ್ದ ಆಶ್ವಾಸನೆಗಳಿಗೆ ವಿರುದ್ಧವಾದುದಾಗಿದೆ.

ಐದನೆಯದಾಗಿ, ನೊಂದವರಿಗೆ ಪರಿಹಾರ ಕೊಡುವ ಅಥವಾ ತಪ್ಪಿತಸ್ಥರನ್ನು ಶಿಕ್ಷಿಸುವ ಯಾವ ಪ್ರಸ್ತಾಪವೂ ಇಲ್ಲ. ಏಕೆಂದರೆ ಪಾಕಿಸ್ತಾನದ ನ್ಯಾಯಾಲಯದಲ್ಲಿ ಯಾರೂ ಸಾಕ್ಷ್ಯ ಕೊಡುವ ಧೈರ್ಯ ತೋರುವುದಿಲ್ಲ. ಹಿಂದೆ ಇಂಥ ಕಟ್ಟು ಅನುಭವಗಳಾಗಿವೆ.

ಆರನೆಯದಾಗಿ, ಹಿಂದೂಗಳು ಭಾರಿ ಸಂಖ್ಯೆಯಲ್ಲಿ ಬರುತ್ತಿರುತ್ತಾರೆ. ಬಂದವರು ವಾಪಸು ಹೋಗಲು ಸಿದ್ಧರಿರುವುದಿಲ್ಲ. ಆದರೆ, ಹೊರಹೋಗಿರುವ ಮುಸ್ಲಿಮರು ಈಗ ವಾಪಸು ಬರುತ್ತಾರೆ. ಒಪ್ಪಂದವನ್ನು ಕಾರ್ಯರೂಪಕ್ಕೆ ತರಲು ನಾವು ನಿರ್ಧರಿಸಿದೆವೆಂದರೆ ಮುಸ್ಲಿಮರು ವಾಪಸು ಹೋಗುವುದಿಲ್ಲ. ನಮ್ಮ ಅರ್ಥವ್ಯವಸ್ಥೆ ಹಾಳಾಗುತ್ತದೆ ಮತ್ತು ದೇಶದ ಒಳಗೆ ಸಂಘರ್ಷ ಆಗುವ ಸಾಧ್ಯತೆ ಹೆಚ್ಚಾಗುತ್ತದೆ.

ಏಳನೆಯದಾಗಿ, ಭಾರತದಲ್ಲಿನ ಅಲ್ಪಸಂಖ್ಯಾತರನ್ನು ರಕ್ಷಿಸುವ ಪ್ರಯತ್ನದಲ್ಲಿ ಒಪ್ಪಂದವು ಭಾರತದಲ್ಲಿರುವ ಮುಸ್ಲಿಂ ಅಲ್ಪ - ಸಂಖ್ಯಾತರ ಸಮಸ್ಯೆಯನ್ನು ಮತ್ತೆ ತೆರೆದಿದೆ. ಹೀಗಾಗಿ, ಪಾಕಿಸ್ತಾನವನ್ನು ಸೃಷ್ಟಿಸಿದಂತಹ ವಿಚ್ಛೇದ್ರಕಾರಿ ಶಕ್ತಿಗಳು ಮತ್ತೆ ಹುಟ್ಟಿಕೊಳ್ಳುವುದಕ್ಕೆ ಆಸ್ಪದ ಕೊಡಬಯಸಿದೆ. ಈ ತತ್ವವನ್ನು ತರ್ಕಬದ್ಧವೆಂದು ಪರಿಗಣಿಸಿ ಬಿಟ್ಟರೆ, ಅದು ನಮಗೆ ಹೊಸ ಸಮಸ್ಯೆಯನ್ನು ಸೃಷ್ಟಿಸುತ್ತದೆ. ಆದ್ದರಿಂದ, ಕಟ್ಟುನಿಟ್ಟಾಗಿ ಹೇಳುವುದಾದರೆ ಅದು ನಮ್ಮ ರಾಜ್ಯಾಂಗಕ್ಕೆ ವಿರುದ್ಧವಾದುದಾಗುತ್ತದೆ.

ಮುದ್ರಕರು : ನಿರ್ದೇಶಕರು,ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾ.ಸೂ. 4732

## ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಡಿಯಲ್ಲಿ ಬಿಡುಗಡೆಯಾಗಿರುವ ಪುಸ್ತಕಗಳು

1. ಕೆಂಗಲ್ ಹನುಮಂತಯ್ಯ
2. ಎಸ್. ನಿಜಲಿಂಗಪ್ಪ
3. ಶಾಂತವೇರಿ ಗೋಪಾಲ ಗೌಡ
4. ವೈಕುಂಠ ಬಾಳಿಗಾ
5. ವೀರೇಂದ್ರ ಪಾಟೀಲ್
6. ಕಡಿದಾಳ್ ಮಂಜಪ್ಪ
7. ಜಿ.ವಿ. ಹಳ್ಳಿಕೇರಿ
8. ಶ್ರೀಮತಿ ಕೆ.ಎಸ್. ನಾಗರತ್ನಮ್ಮ
9. ಡಿ. ದೇವರಾಜ ಅರಸು
10. ಕೆ.ಟಿ. ಭಾಷ್ಯಂ
11. ಕೆ. ಪುಟ್ಟಸ್ವಾಮಿ
12. ಬಿ.ವಿ. ಕಕ್ಕಿಲ್ಲಾಯ
13. ಕೆ.ಟಿ. ಸಿದ್ಧಲಿಂಗಯ್ಯ
14. ಜಗಳೂರು ಮಹಮ್ಮದ್ ಇಮಾಂ
15. ಕೆ.ಸಿ. ರೆಡ್ಡಿ

## ಭಾಷಾಂತರ ಕೃತಿಗಳು

1. ಡಾ|| ಬಿ.ಆರ್. ಅಂಬೇಡ್ಕರ್
2. ಡಾ|| ರಾಂ ಮನೋಹರ್ ಲೋಹಿಯಾ
3. ಡಾ|| ಶ್ಯಾಂ ಪ್ರಸಾದ್ ಮುಖರ್ಜಿ
4. ಶೇಖ್ ಮಹಮ್ಮದ್ ಅಬ್ದುಲ್ಲಾ
5. ವಿ.ಕೆ. ಕೃಷ್ಣಮೆನನ್
6. ಭೂಪೇಶ ಗುಪ್ತ
7. ಡಾ|| ರಾಜೇಂದ್ರ ಪ್ರಸಾದ್
8. ಎಂ. ಅನಂತಶಯನಂ ಅಯ್ಯಂಗಾರ್
9. ಶ್ರೀಮತಿ ರಾಜಕುಮಾರಿ ಅಮೃತಾ ಕೌರ್
10. ಡಾ|| ಚಿಂತವನ್ ಡಿ. ದೇಶಮುಖ್
11. ಅನಂತಶಯನಂ ಅಯ್ಯಂಗಾರ್ ಪನಂಪಲ್ಲಿ ಗೋವಿಂದಮೆನನ್